# ಅಧ್ಯಾತ್ಮಪ್ರಕಾಶ ಕಾರ್ಯಾಲಯದ ಪರಿಚಯ

ಸಂಸ್ಥಾಪಕರಾದ ಶ್ರೀ ಶ್ರೀ ಸಚ್ಚಿದಾನಂದೇಂದ್ರ ಸರಸ್ವತೀಸ್ವಾಮಿಗಳವರು ತಮ್ಮ 70-80 ವರ್ಷಗಳ ವೇದಾಂತ - ವಿವಿಧತತ್ತ್ವಗಳ ಅವಿರತ ಅಧ್ಯಯನ, ಮನನ, ಬರಹಗಳ ಜ್ಞಾನ ತಪಸ್ಸಿನ ಫಲವಾಗಿ ಲಭ್ಯವಾದ ಅಪ್ರತಿಮ ಮಾಣಿಕ್ಯದ ಸೌರಭವನ್ನು, ಬೆಳಕನ್ನು, ಸಾಂಪ್ರದಾಯಿಕ ಶ್ರೇಯೋ ಜೀವನ ಸೊಬಗನ್ನು ಹತ್ತು ದಿಸೆಯಲ್ಲಿ ಹರಡುವ, ಅದರ ಅದ್ಭುತ ಸವಿಯನ್ನು ಜನಸಾಮಾನ್ಯರಿಗೂ ಉಣಿಸುವ ಪರಮ ಲೋಕೋಪಕಾರದ ಕರುಣೆಯಿಂದ 1920 ರಲ್ಲಿ ಅಧ್ಯಾತ್ಮಪ್ರಕಾಶ ಕಾರ್ಯಾಲಯವನ್ನು ಬೆಂಗಳೂರಿನಲ್ಲಿ ಸ್ಥಾಪಿಸಿದರು. ಇದು ಸ್ಥಿರವಾಗಿ ನೆಲೆಯಾದದ್ದು 1937 ರಲ್ಲಿ ಹೊಳೆನರಸೀಪುರದಲ್ಲಿ. 1948ರಲ್ಲಿ ಶ್ರೀಗಳ ಸಂನ್ಯಾಸದೊಡನೆ, ಕಾರ್ಯಸಮಿತಿಯ ಕೈಗೆ ಬಂದ ಕಾರ್ಯಾಲಯವು 1956ರಲ್ಲಿ ವಿಶ್ವಸ್ತಸಮಿತಿಯಾಗಿ, 1992ರಲ್ಲಿ ಸಾರ್ವಜನಿಕ ಧರ್ಮಾರ್ಥ ಸಂಸ್ಥೆಯಾಯಿತು.

ಧ್ಯೇಯ : ಅಧ್ಯಾತ್ಮ ವಿದ್ಯೆಯಲ್ಲಿ ಜನರಿಗೆ ಆಸಕ್ತಿಯುಂಟು ಮಾಡಿ, ಜಾತಿ ಮತ ಭೇದಗಳಿಲ್ಲದೆ, ಸಕಲ ಮಾನವರಿಗೂ ಸುಖ, ಶಾಂತಿ, ಆನಂದವನ್ನು ಕೊಡುವ ವೇದ, ಉಪನಿಷತ್ತುಗಳಲ್ಲಿನ ನಮ್ಮ ಭಾರತೀಯ ಸಂಸ್ಕೃತಿಯನ್ನು ಪ್ರಚಾರ ಮಾಡುವುದೇ ಶ್ರೀ ಶ್ರೀಗಳವರ ಮುಖ್ಯ ಧ್ಯೇಯ, ಉದ್ದೇಶ ಕಾರ್ಯಗತಕ್ಕೆ ಅವರು ಆರಿಸಿಕೊಂಡ ಸಾಧನಗಳು : ಗ್ರಂಥ ಪ್ರಕಟಣೆ, ಮಾಸಪತ್ರಿಕೆ, ಪ್ರವಚನ, ಅಧ್ಯಾತ್ಮ ಶಿಕ್ಷಣ.

ಗ್ರಂಥಪ್ರಕಟಣೆ : ಬರೀ ಭಾಷಾನುವಾದವಾಗದೆ ಪ್ರತಿಪಾದನೆಯ ಸರಳತೆ, ಸಂಶೋಧನಾ ರೂಪದ ಸುತರ್ಕದ ಜರಡಿಯಾಡಿ ಜೊಳ್ಳು ದೋಷಗಳಿಂದ ಶುದ್ಧವೇದಾಂತದ ಬೇರ್ಪಡೆ ಸುಲಭ ಶೈಲಿಯ ಬರವಣಿಗೆಗಳಿಂದ ಸಂಸ್ಕೃತದಲ್ಲಿರುವ ವೇದೋಪನಿಷದ್ಭಾಷ್ಯಗಳ ಸಿರಿ ಸಂಪತ್ತನ್ನು ಹಂಚಿರುವ ಗ್ರಂಥಗಳು ವಿದ್ವಾಂಸರ ಪ್ರಶಂಸೆಯನ್ನು ಮುಮುಕ್ಷುಗಳ ಪ್ರೀತಿ ಗೌರವವನ್ನು ಸಂಪಾದಿಸಿವೆ. ಈಚಿನ ಹತ್ತು ವರ್ಷಗಳಲ್ಲಿ 25,200 ಪುಟಗಳ 120 ಪುಸ್ತಕಗಳನ್ನು [18 ಹೊಸದು, 102 ಮರುಮುದ್ರಣ, ಮೌಲ್ಯ 30.53 ಲಕ್ಷ ರೂ.] ಪ್ರಕಟಿಸಿದೆ.

ಪತ್ರಿಕೆ : ಹೊಳೆನರಸೀಪುರದ ಅಧ್ಯಾತ್ಮಪ್ರಕಾಶ ಮಾಸಪತ್ರಿಕೆಯು ಸುಮಾರು 40 ವರ್ಷಗಳ ಕಾಲ ಶ್ರೀ ಶ್ರೀಗಳವರೇ ನಡೆಸಿ, ಈಗಲೂ ಅದೇ ಸರಳ ಗಾಂಭೀರ್ಯವನ್ನು ಹೊತ್ತು ಬರುತ್ತಿದೆ. ಬೆಂಗಳೂರು ಶಾಖೆಯಿಂದ ಹೊರಬರುತ್ತಿರುವ ತ್ರೈಮಾಸಿಕ ಶಂಕರಭಾಸ್ಕರ ಸರ್ವಾಂಗ ಸುಂದರವಾಗಿ ಗ್ರಾಹಕರ ಪ್ರತಿಷ್ಠೆಯ ಲಾಂಛನವಾಗಿದೆ.

ಪ್ರವಚನಗಳು : ಶ್ರೀ ಶ್ರೀಗಳವರ ಶಿಷ್ಯರಾದ ಶ್ರೀಲಕ್ಷ್ಮೀನರಸಿಂಹ ಮೂರ್ತಿಗಳು, ಶ್ರೀ ಕೆ.ಜಿ. ಸುಬ್ರಾಯಶರ್ಮರು ವೇದಾಂತ ಪ್ರಸಾರ ಮಾಡುತ್ತಿದ್ದಾರೆ. ಇದಲ್ಲದೆ ವೇದಾಂತ ಸಪ್ತಾಹಗಳು, ಮತ್ತು ವೇದಾಂತ ಶಿಬಿರಗಳು ಹೊಳೆನರಸೀಪುರ ಮತ್ತು ಇತರ ಸ್ಥಳಗಳಲ್ಲಿ ನಡೆಯುತ್ತಾ ಇವೆ.

ಅಧ್ಯಾತ್ಮ ವಿದ್ಯಾನಿಲಯ : ಶ್ರೀ ಶ್ರೀಗಳು 1939ರಲ್ಲೇ ಸಿದ್ಧಪಡಿಸಿದ ಪಠ್ಯಕ್ರಮದಂತೆ ಆಗ ಮತ್ತು 1948ರಲ್ಲಿಯೇ ಪ್ರಯತ್ನಿಸಿ ಕೆಲವು ಶಿಷ್ಯರನ್ನು ತಯಾರಿಸಿದರು. ವಿದ್ಯಾರ್ಥಿಗಳ ಕೊರತೆ, ಅಡುಗೆ ವ್ಯವಸ್ಥೆ ಅಭಾವಗಳಿಂದ ಸ್ಥಗಿತವಾಗಿದ್ದ ಶಿಕ್ಷಣವನ್ನು ಮತ್ತೂರು ಶ್ರೀ ಚಂದ್ರಮೌಳಿ ಅವಧಾನಿಗಳು 2003 ರಿಂದ ಮುಂದುವರಿಸಿದ್ದಾರೆ. ಇರುವ ಹತ್ತು ವಿದ್ಯಾರ್ಥಿಗಳಿಗೆ ಕಾರ್ಯಾಲಯದಿಂದ ಊಟ, ವಸತಿ, ಶಿಕ್ಷಣ ಉಚಿತ. ನಿಸ್ವಾರ್ಥ ಮನೋಭಾವದಿಂದ ಸುತ್ತಲಿನ ಜನಗಳಿಗೆ ಸೇವೆ ಸಲ್ಲಿಸಿ, ವೇದಾಂತ ಪ್ರಚಾರವನ್ನೂ ಮಾಡುವಂಥ ತಯಾರಿಯೇ ವಿದ್ಯಾರ್ಥಿ ನಿಲಯದ ಉದ್ದೇಶ.

ವಿಷಯಾನುಕ್ರಮಣಿಕೆ

ಅಧ್ಯಾತ್ಮ ಗ್ರಂಥಾವಳಿ

# ಅಧ್ಯಾತ್ಮವಿದ್ಯೆ

(ಅಧ್ಯಾತ್ಮವಿದ್ಯೆಯ ಸ್ವರೂಪವನ್ನು ಮನಗಾಣಿಸುವ ಉಪದೇಶಗಳು)

ಬರೆದವರು :

ಶ್ರೀ ಶ್ರೀಸಚ್ಚಿದಾನಂದೇಂದ್ರ ಸರಸ್ವತೀಸ್ವಾಮಿಗಳವರು

ಕ್ರಮಾಂಕ - ೧೩೦

ಪ್ರಕಾಶಕರು

ಅಧ್ಯಾತ್ಮಪ್ರಕಾಶಕಾರ್ಯಾಲಯ

ಹೊಳೆನರಸೀಪುರ.

2005

# ಪೀಠಿಕೆ

ಈ ಉಪನ್ಯಾಸಗಳು ಕ್ರೋಧಿಸಂವತ್ಸರದ ಚಾತುರ್ಮಾಸ್ಯಸಂದರ್ಭದಲ್ಲಿ (ತಾ|| 25-7-64ರಿಂದ ತಾ|| 20-9-64ರವರೆಗೆ) ಹೊಳೆನರಸೀಪುರದಲ್ಲಿ ಮಾಡಿದವುಗಳು. ಈ ಸಲ ನನ್ನ ದೇಹಾರೋಗ್ಯವು ಅಷ್ಟುತೃಪ್ತಿಕರವಾಗಿರಲಿಲ್ಲವಾಗಿ ಪ್ರತಿದಿನವೂ ಉಪದೇಶಕಾರ್ಯವನ್ನು ಕೈಗೊಳ್ಳುವುದಾಗಲಿಲ್ಲವೆಂಬುದು ಆಯಾ ಉಪನ್ಯಾಸದ ತಲೆಬರಹದಲ್ಲಿ ಗುರುತುಮಾಡಿರುವ ದಿನಾಂಕಗಳಿಂದಲೇ ಗೊತ್ತಾಗುತ್ತದೆ. ಗುರವಾರ , ಶನಿವಾರ , ಭಾನುವಾರ - ಹೀಗೆ ವಾರಕ್ಕೆ ಮೂರು ದಿನಗಳು ಮಾತ್ರವೇ ಉಪದೇಶಗಳು ನಡೆದವು.

ಆದರೆ ವಿಷಯದ ಮಹತ್ತ್ವಕ್ಕೇನೂ ಇದರಿಂದ ಕುಂದು ಉಂಟಾಗಿಲ್ಲ . 'ಅಧ್ಯಾತ್ಮವಿದ್ಯೆ' ಎಂಬುದು ವಸ್ತುಪ್ರಧಾನವಾದ ಜ್ಞಾನ , ಭಾವನಾಪ್ರಧಾನವಾದ ಉಪಾಸನೆ - ಎಂದು ಎರಡು ವಿಧವಾಗಿ ಉಪನಿಷತ್ತುಗಳಲ್ಲಿ ವರ್ಣಿಸಲ್ಪಟ್ಟಿದೆ ಎಂಬುದನ್ನು ಮನಗಾಣಿಸುವುದಕ್ಕೆ ತಕ್ಕ ವಿಷಯಗಳನ್ನೇ ಈ ಉಪನ್ಯಾಸಗಳಿಗೆ ಆರಿಸಿ ಕೊಂಡಿದ್ದೇನೆ. ಜ್ಞಾನರೂಪವಾದ ಅಧ್ಯಾತ್ಮವಿದ್ಯೆಗೆ ಅನುಭವವೇ ತಳಹದಿ ; ಅದು ಅನುಭವದ ಆಧಾರದಮೇಲೆ ಮಾಡುವ ವಿಚಾರಗಳಿಂದ ಮೊದಲಾಗಿ ಈ ಜನ್ಮದಲ್ಲಿಯೇ ಮುಮುಕ್ಷುಗಳ ಅನುಭವಕ್ಕೆ ಬರತಕ್ಕದ್ದಾಗಿದೆ. ಧ್ಯಾನಪ್ರಧಾನ ವಾಗಿರುವ ಅಧ್ಯಾತ್ಮವಿದ್ಯೆಯು ಶರೀರವನ್ನು ಬಿಟ್ಟು ಲೋಕಾಂತರಕ್ಕೆ ಹೋದ ಮೇಲೆಯೇ ಫಲಕಾರಿಯಾಗುವದಾದರೂ 'ಸಾಕ್ಷಾತ್ಕಾರ' ರೂಪವಾದ ಸದ್ಯಃಫಲವನ್ನು ಸಾಧಕನು ಇಲ್ಲಿಯೇ ಮನಗಾಣಬೇಕಾಗಿರುತ್ತದೆ. ಈ ಉಪನ್ಯಾಸ ಗಳಿಗೆ ಮುಖ್ಯವಾಗಿ ಬೃಹದಾರಣ್ಯಕ , ಛಾಂದೋಗ್ಯ - ಈ ಉಪನಿಷತ್ತುಗಳನ್ನೂ ಭಗವದ್ಗೀತೆ , ಭಾಗವತ - ಈ ಗ್ರಂಥಗಳನ್ನೂ ಉಪಯೋಗಿಸಿಕೊಂಡಿದ್ದೇನೆ. ಶ್ರುತಿವಾಕ್ಯಗಳು ದೇವನಾಗರಿಯಲ್ಲಿವೆಯಾದರೂ ಅವುಗಳ ಅಭಿಪ್ರಾಯವನ್ನು ತಿಳಿಗನ್ನಡದಲ್ಲಿ ಸ್ಪಷ್ಟಪಡಿಸಿರುತ್ತದೆಯಾದ್ದರಿಂದ ಓದುಗರಿಗೆ ಯಾವ ಅಡಚಣೆಯೂ ಆಗುವಂತಿಲ್ಲ .

ಅಧ್ಯಾತ್ಮವಿದ್ಯೆಯನ್ನು ನೇರಾಗಿ ಉಪನಿಷತ್ತುಗಳಿಂದಲೇ ಅಲ್ಲದೆ ಇತಿಹಾಸ ಪುರಾಣಗಳಿಂದಲೂ ತಿಳಿದುಕೊಳ್ಳುವದಕ್ಕೆ ಆಗುತ್ತದೆ. ಈಗ್ಗೆ ಹಲವು ಕಾರಣಗಳಿಂದ ವೈದಿಕಕರ್ಮವನ್ನು ವಿಧಿವತ್ತಾಗಿ ಮಾಡುವ ಯೋಗ್ಯತೆಯಿಲ್ಲದ ದ್ವಿಜರೂ ಸಂಖ್ಯೆಯಲ್ಲಿ ಹೆಚ್ಚುತ್ತಿದ್ದಾರೆ. ಅಂಥವರಿಗೂ ದಾರಿಯನ್ನು ಋಷಿಗಳು ಕಲ್ಪಿಸಿರುತ್ತಾರೆಂಬುದನ್ನು ಈ ಉಪನ್ಯಾಸಮಾಲಿಕೆಯಲ್ಲಿ (೨೩,೨೪) ಸಂಕ್ಷೇಪವಾಗಿ ತಿಳಿಸಿರುತ್ತದೆ. ಆದರೆ ಈ ನೆಪ ವನ್ನು ಇಟ್ಟುಕೊಂಡು ವೈದಿಕಕರ್ಮವನ್ನೂ ಆಚಾರವನ್ನೂ ಕೀಳಾಗಿ ಕಾಣುವವರು ಅಧ್ಯಾತ್ಮ ವಿದ್ಯೆಗೆ ಎಂದಿಗೂ ಅಧಿಕಾರಿಗಳಾಗಲಾರರೆಂಬುದನ್ನು ಹೇಳಬೇಕಾಗಿಯೇ ಇಲ್ಲ .

ಉಪನ್ಯಾಸಗಳನ್ನು "ಅಧ್ಯಾತ್ಮಪ್ರಕಾಶ" ಮಾಸಪತ್ರಿಕೆಯಲ್ಲಿ ಭಾಗಭಾಗವಾಗಿ ಪ್ರಕಟಿಸಲಾಯಿತು . ಈ ಕಾರಣದಿಂದ ಕೆಲವು ಅಚ್ಚಿನ ಅಶುದ್ಧಿಗಳೂ ಅಚ್ಚಿನ ಕರಡುಗಳನ್ನು ಸರಿಯಾಗಿ ನೋಡದೆ ಇದ್ದದ್ದರಿಂದ ಕೆಲವು ವಾಕ್ಯಗಳ ಸರಣಿಯ ದೋಷಗಳೂ ಉಳಿದುಕೊಂಡಿರುವದು ನಿರೀಕ್ಷಿಸತಕ್ಕದ್ದೇ ಆಗಿದೆ . ಆದ್ದರಿಂದ ವಿದ್ವಾಂಸರುಗಳಾದವರು ಅಂಥ ಸ್ಖಾಲಿತ್ಯಗಳನ್ನು ತಿಳಿಸಿಕೊಟ್ಟಲ್ಲಿ ಕೃತಜ್ಞತೆಯಿಂದ ಬರಮಾಡಿಕೊಂಡು ಇನ್ನೊಂದು ಸಂಸ್ಕರಣದಲ್ಲಿ ಗ್ರಂಥವು ಎಲ್ಲಾ ಬಗೆಯಿಂದಲೂ ಪರಿಶುದ್ಧವಾಗುವಂತೆ ನೋಡಿಕೊಳ್ಳಲಾಗುವುದು.

ಪತ್ರಿಕೆಯಿಂದ ತೆಗೆದಚ್ಚುಗಳನ್ನು ಗ್ರಂಥರೂಪದಲ್ಲಿ ಪ್ರಕಟಿಸುವ ಹೊಣೆಗಾರಿಕೆಯನ್ನು ಕಾರ್ಯಾಲಯದವರು ಹೊತ್ತುಕೊಂಡಿರುತ್ತಾರೆ . ನನ್ನ ಈವರೆಗಿನ ಗ್ರಂಥಗಳಂತೆಯೇ ಇದರ ಎಲ್ಲಾ ಹಕ್ಕುಗಳೂ ಹೊಳೆನರಸೀಪುರದ ಅಧ್ಯಾತ್ಮ ಪ್ರಕಾಶಕಾರ್ಯಾಲಕ್ಕೇ ಸೇರಿರುತ್ತವೆ - ಎಂಬುದನ್ನು ಇಲ್ಲಿ ನಾನು ಉಪಚಾರಕ್ಕಾಗಿ ಬರೆಯುತ್ತಿದ್ದೇನೆ. ಮುಮುಕ್ಷುಗಳಾದವರಿಗೆ ಈ ಗ್ರಂಥದ ಪಠನದಿಂದ ಅಧ್ಯಾತ್ಮ ವಿದ್ಯೆಯ ಸಿದ್ಧಾಂತದ ಮತ್ತು ಸಾಧನೆಯ ವಿಷಯಕ್ಕೆ ಸ್ವಲ್ಪ ಮಟ್ಟಿಗೆ ಸೂಚನೆಗಳು ಸಿಕ್ಕಿದರೂ ನಾನು ಧನ್ಯನು . ಕಾರ್ಯಾಲಯದವರ ಪ್ರಯತ್ನವು ಈ ಮೂಲಕ ಸಫಲ ಕ್ರಿಯಾಕಾರಿಯಾಗಲಿ ! ಎಂದು ಶ್ರೀಮನ್ನಾರಾಯಣಭಗವಂತನನ್ನು ಪ್ರಾರ್ಥಿಸುತ್ತೇನೆ .

ತಾ॥ 11-3-66 ಗ್ರಂಥಕರ್ತ.

## ಮೂರನೆಯ ಮುದ್ರಣಕ್ಕೆ ಮುನ್ನುಡಿ

ಗ್ರಂಥಕರ್ತರು ಪೀಠಿಕೆಯಲ್ಲಿ ತಿಳಿಸಿರುವಂತೆ ಅಧ್ಯಾತ್ಮಪ್ರಕಾಶ ಪತ್ರಿಕೆಯಲ್ಲಿ ಭಾಗಭಾಗವಾಗಿ ಪ್ರಕಟಿಸಲಾಗಿದ್ದು, ಮೊದಲ ಬಾರಿಗೆ 1966ರಲ್ಲಿ ಗ್ರಂಥರೂಪವಾಗಿ ಪ್ರಕಾಶನಗೊಂಡಿತು. ತರುವಾಯ ತಪ್ಪುಗಳನ್ನೆಲ್ಲಾ ತಿದ್ದಿ ಶ್ಲೋಕಗಳನ್ನು ಕನ್ನಡ ಲಿಪಿಗೆ ಪರಿವರ್ತಿಸಿ 1992ರಲ್ಲಿ ಎರಡನೆಯ ಬಾರಿಗೆ ಮುದ್ರಣವಾಗಿದ್ದು , ಪ್ರತಿಗಳೆಲ್ಲಾ ಮಾರಾಟವಾಗಿದ್ದರಿಂದ ಜನಪ್ರಿಯವಾಗಿರುವ ಈ ಗ್ರಂಥವನ್ನು ಮೂರನೆಯ ಬಾರಿಗೆ ಪರಿಷ್ಕರಿಸಿ ಹೊರತರಲಾಗಿದೆ.

ಈ ಬಾರಿಯ ಮುದ್ರಣಕ್ಕೆ ಬೆಂಗಳೂರಿನ ಶ್ರೀ ಪುರಾಣಿಕ ನಾರಾಯಣಭಟ್ಟರು ರೂ. 1,000/- ಧನ ಸಹಾಯ ಮಾಡಿರುತ್ತಾರೆ. ಅವರಿಗೆ ಕಾರ್ಯಾಲಯದ ಪರವಾಗಿ ಅಭಿನಂದನೆಗಳು. ಎಂದಿನಂತೆ ಮಹಾಜನರು ಈ ಗ್ರಂಥವನ್ನು ಆದರದಿಂದ ಬರಮಾಡಿಕೊಂಡು ಗ್ರಂಥ ಪ್ರಕಟಣೆಯನ್ನು ಪ್ರೋತ್ಸಾಹಿಸುವರೆಂದು ನಂಬಿರುತ್ತೇವೆ.

ತಾರಣನಾಮ ಸಂವತ್ಸರ, ಮಾಘ ಬಹುಳ ತ್ರಯೋದಶಿ, 8-03-2005. ಪ್ರಕಾಶಕರು

# ವಿಷಯಾನುಕ್ರಮಣಿಕೆ

## ಸಂಕೇತಗಳ ವಿವರಣೆ

| ಸಂಕೇತ | ವಿವರ |
|---|---|
| ಐ. | ಐತರೇಯೋಪನಿಷತ್ತು |
| ಕಾ., ಕ. | ಕಾಠಕೋಪನಿಷತ್ತು |
| ಗೀ. | ಭಗವದ್ಗೀತೆ |
| ಗೀ. ಭಾ. | ಭಗವದ್ಗೀತಾಶಾಂಕರಭಾಷ್ಯ |
| ಗೌ. ಕಾ. | ಗೌಡಪಾದಕಾರಿಕೆಗಳು |
| ಛಾಂ. | ಛಾಂದೋಗ್ಯೋಪನಿಷತ್ತು |
| ತೈ. | ತೈತ್ತಿರೀಯ ಉಪನಿಷತ್ತು |
| ಪರಾ. ಸ್ಮೃ. | ಪರಾಶರಸ್ಮೃತಿ |
| ಬೃ. | ಬೃಹದಾರಣ್ಯಕೋಪನಿಷತ್ತು |
| ಬ್ರ. ಸೂ. ; ವೇ. ಸೂ. | ಬ್ರಹ್ಮಸೂತ್ರಗಳು ( ವೇದಾಂತಸೂತ್ರಗಳು) |
| ಭಾ. | ಮಹಾಭಾರತ |
| ಭಾಗ. | ಶ್ರೀಮದ್ಭಾಗವತ |
| ಮನು. | ಮನುಸ್ಮೃತಿ |
| ಮಾಂ. | ಮಾಂಡೂಕ್ಯೋಪನಿಷತ್ತು |
| ಮುಂ. | ಮುಂಡಕೋಪನಿಷತ್ತು |
| ಯೋ. ಸೂ. | ಪಾತಂಜಲಯೋಗಸೂತ್ರಗಳು |
| ಶ್ವೇ. | ಶ್ವೇತಾಶ್ವತರೋಪನಿಷತ್ತು |
| ಸೂ. ಭಾ. | ಬ್ರಹ್ಮಸೂತ್ರಶಾಂಕರಭಾಷ್ಯ |

ॐ

# ಅಧ್ಯಾತ್ಮ ವಿದ್ಯೆ

## ೧. ಅಧ್ಯಾತ್ಮವಿದ್ಯೆ ಎಂದರೇನು ?

(25-7-64)

ಭಗವದ್ಗೀತೆಯಲ್ಲಿ ಶ್ರೀಕೃಷ್ಣಭಗವಂತನು ತನ್ನ ವಿಭೂತಿಗಳನ್ನು ಉಪಾಸನೆಗೆಂದು ಬಣ್ಣಿಸುವ ಸಂದರ್ಭದಲ್ಲಿ 'ಅಧ್ಯಾತ್ಮವಿದ್ಯಾ ವಿದ್ಯಾನಾಮ್' (ಗೀ. ೧೦-೩೨) ವಿದ್ಯೆಗಳೊಳಗೆ ಅಧ್ಯಾತ್ಮವಿದ್ಯೆ ನಾನು - ಎಂದು ಹೇಳಿಕೊಂಡಿರುತ್ತಾನೆ. ಅಧ್ಯಾತ್ಮವೆಂದರೆ ಆತ್ಮನಿಗೆ ಸಂಬಂಧಪಟ್ಟದ್ದು . ಪ್ರಪಂಚವನ್ನೆಲ್ಲಾ 'ಅಧ್ಯಾತ್ಮ' , 'ಅಧಿಭೂತ' , 'ಅಧಿದೈವ' - ಎಂದು ಮೂರು ಭಾಗಗಳಾಗಿ ವಿಂಗಡಿಸಿ ವಿಚಾರಕ್ಕೆ ತೆಗೆದುಕೊಳ್ಳುವದು ಮೋಕ್ಷಶಾಸ್ತ್ರದಲ್ಲಿ ಕಂಡುಬರುತ್ತದೆ . ಅಲ್ಲಿ ಆತ್ಮನೆಂದರೆ ಶರೀರವು . ಶರೀರದ ಒಳಗಡೆಯಿರುವದನ್ನೆಲ್ಲ ಅಧ್ಯಾತ್ಮವೆಂಬ ರಾಶಿಯಲ್ಲಿ ಸೇರಿಸಿರುತ್ತದೆ. ಆದರೆ 'ಅಧ್ಯಾತ್ಮವಿದ್ಯೆ' ಎಂಬ ಶಬದ್ದಲ್ಲಿ ಮುಖ್ಯವಾಗಿ ನಮ್ಮೆಲ್ಲರಿಗೂ, ಪ್ರಪಂಚವೆಲ್ಲಕ್ಕೂ ತಿರುಳಾಗಿರುವ ತತ್ತ್ವವನ್ನೇ ಆತ್ಮನೆಂದು ಕರೆದಿರುತ್ತದೆ. ಈ ಆತ್ಮನ ವಿಷಯವಾದ ವಿದ್ಯೆಯೇ ಅಧ್ಯಾತ್ಮವಿದ್ಯೆ.

ಈಗಿನ ಭೌತಿಕವಿಜ್ಞಾನಕ್ಕೆ ವಿಷಯವಾಗಿರುವದು ಅಧಿಭೂತವು. ಅದು ಆಧಿಭೌತಿಕವಾದ - ಅಧಿಭೂತದ - ಎಂದರೆ ನಮ್ಮ ಹೊರಗಿರುವ ಭೂತಭೌತಿಕ ಪದಾರ್ಥಗಳನ್ನು ಕುರಿತ ವಿದ್ಯೆ. ಭೌತಿಕವಿಜ್ಞಾನವು ಎಷ್ಟೋ ಶಾಸ್ತ್ರಗಳಾಗಿ ವಿಂಗಡಿಸಿಕೊಂಡಿರುತ್ತದೆ. ಭೂಮಿಯ ವಿಷಯ, ಭೂಮಿಯಮೇಲಿನ ಪದಾರ್ಥಗಳ, ಸಸ್ಯಗಳ, ಪ್ರಾಣಿಗಳ ಮತ್ತು ಮನುಷ್ಯರ - ವಿಷಯವಾದ ಶಾಸ್ತ್ರಗಳೂ ಭೌತಿಕವಿಜ್ಞಾನವೇ ಆಗಿರುತ್ತದೆ. ವಸ್ತುಶಾಸ್ತ್ರ , ಶಕ್ತಿಶಾಸ್ತ್ರ , ಶಾರೀರಶಾಸ್ತ್ರ - ಮುಂತಾದವುಗಳಲ್ಲದೆ ಹಡಗನ್ನು ನಿರ್ಮಿಸಿ ನಡೆಯಿಸುವ ವಿದ್ಯೆ, ವಿಮಾನಗಳನ್ನು ಕಟ್ಟಿ ನಡೆಯಿಸುವ ವಿದ್ಯೆ, ಆಕಾಶಯಾನಗಳಿಂದ ಗ್ರಹಾಂತರಗಳನ್ನು ಮುಟ್ಟುವ ವಿದ್ಯೆ - ಇಂಥ ವಿದ್ಯೆಗಳಿಂದ ಹೊಸಹೊಸ ಶೋಧಗಳನ್ನು ಮಾಡಿ ವಿಜ್ಞಾನಶಾಸ್ತ್ರವು ನಮ್ಮೆಲ್ಲರನ್ನೂ ಬೆರಗುಮಾಡಿದೆ. ಇನ್ನೂ ಅದರ ಶೋಧಗಳು ಮುಗಿದಿಲ್ಲ . ಇಷ್ಟೆಲ್ಲ ಆದರೂ ಭೌತಿಕವಿಜ್ಞಾನದ ವಿದ್ಯೆಗಳೆಲ್ಲವನ್ನೂ **ಆಧಿಭೌತಿಕವಿದ್ಯೆ** - ಎಂಬ ಒಂದೇ ವರ್ಗದಲ್ಲಿಯೇ ಅಡಕವಾಗಿಸಬಹುದಾಗಿದೆ. ಆ ವಿಜ್ಞಾನಕ್ಕೆ ಆತ್ಮನ ವಿಚಾರದಲ್ಲಿ ಪ್ರವೇಶವಿಲ್ಲ.

ಅಧ್ಯಾತ್ಮವಿದ್ಯೆಯ ವಿಚಾರವು ಗೀತೆಗೂ ಮೂಲವಾದ ಉಪನಿಷತ್ತಿನಲ್ಲಿಯೂ ಬಂದಿದೆ. '**ಅಧ್ಯಾತ್ಮಯೋಗಾಧಿಗಮೇನ ದೇವಂ ಮತ್ವಾ ಧೀರೋ ಹರ್ಷಶೋಕೌ ಜಹಾತಿ** ' (ಕಾ. ೧-೨-೧೨) ಆತ್ಮನಲ್ಲಿಯೇ ಚಿತ್ತವನ್ನು ನೆಲೆನಿಲ್ಲಿಸಿಕೊಳ್ಳುವದೆಂಬ ಅಧ್ಯಾತ್ಮಯೋಗದಿಂದ ಆ ದೇವನನ್ನು ಅರಿತುಕೊಂಡ ವಿವೇಕಿಗೆ ಹರ್ಷಶೋಕಗಳಾಗುವದಿಲ್ಲ - ಎಂದು ಕಠೋಪನಿಷತ್ತಿನಲ್ಲಿ ಹೇಳಿರುತ್ತದೆ. ಆತ್ಮನೆಂದರೇನು ? ನಮ್ಮ ಶರೀರದೊಳಗೆ ತೀರ ಒಳಗೆ ನಮ್ಮ ಸ್ವರೂಪವೇ ಎಂದು ಕಂಡುಬರುವ ತತ್ತ್ವವದು. ಕಠೋಪನಿಷತ್ತಿನಲ್ಲಿಯೇ ಒಂದು ಕಡೆ ಹೇಳಿರುವದೇನೆಂದರೆ 'ನಮ್ಮ ಇಂದ್ರಿಯಗಳು ಹೊರಕ್ಕೇ ಹರಿಯುವಂತೆ ಈಶ್ವರನು ಅವನ್ನು ಸೃಷ್ಟಿಮಾಡಿರುತ್ತಾನೆ, ಆದ್ದರಿಂದ ಮನುಷ್ಯನು ಸ್ವಭಾವದಿಂದ ಹೊರಕ್ಕೇ ನೋಡುತ್ತಿರುತ್ತಾನೆ. ತನ್ನೊಳಗೆ ನೋಡಿಕೊಳ್ಳುವುದೇ ಇಲ್ಲ. ಯಾವನೋ ಒಬ್ಬ ವಿವೇಕಿಯು ಮಾತ್ರ ಇಂದ್ರಿಯಗಳನ್ನು ಹಿಂತಿರುಗಿಸಿಕೊಂಡು ತನ್ನೊಳಗೆ ನೋಡಿಕೊಳ್ಳುತ್ತಾನೆ, ಏಕೆಂದರೆ ಅವನಿಗೆ ಅಮೃತತ್ವವು ಬೇಕಾಗಿರುತ್ತದೆ.' ಈ ಸಂದರ್ಭದಲ್ಲಿ ಆತ್ಮನೆಂದರೇನೆಂಬುದನ್ನು ಶ್ರೀಶಂಕರಭಗವತ್ಪಾದರು ಒಂದು ಪುರಾಣಶ್ಲೋಕವನ್ನು ಉದಾಹರಿಸಿ ವಿವರಿಸಿರುತ್ತಾರೆ. ಆತ್ಮನೆಂಬುದು ನಮ್ಮೊಳಗೇ ಇರುವ ನಮ್ಮ ಸ್ವರೂಪವು.

**ಯಚ್ಚಾಪ್ನೋತಿ ಯದಾದತ್ತೇ ಯಚ್ಚಾತ್ತಿ ವಿಷಯಾನಿಹ ।**
**ಯಚ್ಚಾಸ್ಯ ಸನ್ತತೋ ಭಾವಸ್ತಸ್ಮಾದಾತ್ಮೇತಿ ಕೀರ್ತ್ಯತೇ ॥**

ಎಲ್ಲವನ್ನೂ ವ್ಯಾಪಿಸಿಕೊಂಡಿರುವದರಿಂದ ಮಿಕ್ಕದ್ದೆಲ್ಲವನ್ನೂ ತನ್ನೊಳಕ್ಕೇ ತೆಗೆದುಕೊಳ್ಳುತ್ತಿರುವದರಿಂದಲೂ (ಆದತ್ತೇ), ವಿಷಯಗಳನ್ನು ಅನುಭವಿಸುತ್ತಿರುವದರಿಂದಲೂ (ಅತ್ತಿ) , ಕಡಿವಡೆಯದೆ ಎಲ್ಲೆಲ್ಲಿಯೂ ಇರುವದರಿಂದಲೂ (ಆತನೋತಿ) - ಈ ತತ್ತ್ವಕ್ಕೆ ಆತ್ಮ ಎಂದು ಹೆಸರು - ಎಂಬುದು ಪುರಾಣಶ್ಲೋಕದ ಅರ್ಥ. ಹೀಗೆ ಎಲ್ಲೆಲ್ಲಿಯೂ ಇದ್ದುಕೊಂಡಿದ್ದು , ಎಲ್ಲಕ್ಕೂ ತಿರುಳಾಗಿರುವ ಆತ್ಮನನ್ನೇ ಕುರಿತು ವಿಚಾರಮಾಡುವ ವಿದ್ಯೆಗೆ '**ಅಧ್ಯಾತ್ಮವಿದ್ಯೆ**' ಎಂದು ಹೆಸರು.

ಈ ವಿದ್ಯೆಗೆ ಬ್ರಹ್ಮವಿದ್ಯೆಯೆಂದೂ ಹೆಸರುಂಟು. ಹಿರಣ್ಯಗರ್ಭಬ್ರಹ್ಮನು ತನ್ನ ಮಗನಿಗೆ ಹೇಳಿದ ವಿದ್ಯೆಯಿದಾದ್ದರಿಂದಲೂ, ಎಲ್ಲಕ್ಕಿಂತಲೂ ದೊಡ್ಡದಾಗಿರುವ ಅನಂತವಾದ ತತ್ತ್ವವನ್ನು ಕುರಿತದ್ದಾದ್ದರಿಂದಲೂ ಇದಕ್ಕೆ 'ಬ್ರಹ್ಮವಿದ್ಯೆ' ಎಂದು ಹೆಸರು. ಇದು (ಸರ್ವವಿದ್ಯಾಪ್ರತಿಷ್ಠಾಮ್) ಎಲ್ಲಾ ವಿದ್ಯೆಗಳಿಗೂ ಪ್ರತಿಷ್ಠೆ, ಇದರಲ್ಲಿಯೇ ಯಾವ ವಿದ್ಯೆಯಾದರೂ ಕೊನೆಗಾಣಬೇಕಾಗಿದೆ - ಎಂದು ಮುಂಡಕೋಪನಿಷತ್ತಿನ

ಲ್ಲಿದೆ. ಮತ್ತೊಂದು ಉಪನಿಷತ್ತಿನಲ್ಲಿ ಈ ವಾಕ್ಯವಿದೆ : **ಐತದಾತ್ಮ್ಯಮಿದಂಸರ್ವಂ ತತ್ಸತ್ಯಂ ಸ ಆತ್ಮಾ ತತ್ತ್ವಮಸಿ ಶ್ವೇತಕೇತೋ'** ದೇ ಎಲ್ಲಕ್ಕೂ ಸಾರವು. ಇದೇ ಪರಮಾರ್ಥವಾಗಿ ಸತ್ಯವಾಗಿರತಕ್ಕದ್ದು. ಇದೇ ಎಲ್ಲರ ಆತ್ಮನು, ಅದೇ ನೀನಾಗಿರುವೆಯಯ್ಯ ಶ್ವೇತಕೇತುವೆ - ಎಂದು ಅಲ್ಲಿ ಉದ್ದಾಲಕನು ತನ್ನ ಮಗನಿಗೆ ಉಪದೇಶಿಸಿರುತ್ತಾನೆ. ಹೀಗೆ ಸರ್ವರೂಪದಿಂದಲೂ ತೋರಿಕೊಳ್ಳುತ್ತಾ ಎಲ್ಲಕ್ಕೂ ಎಲ್ಲರಿಗೂ ಆತ್ಮನಾಗಿರುವ ಪರಮಾರ್ಥಸತ್ಯರೂಪವಾಗಿರುವ ತತ್ತ್ವಕ್ಕೆ 'ಬ್ರಹ್ಮ'ವೆಂದು ಹೆಸರು. ಅದರ ನಿಜವನ್ನು ಅರಿತುಕೊಳ್ಳುವ ವಿದ್ಯೆಯೇ ಬ್ರಹ್ಮವಿದ್ಯೆ ಅಥವಾ ಅಧ್ಯಾತ್ಮವಿದ್ಯೆ.

ಇನ್ನೂ ಒಂದು ಉಪನಿಷತ್ತಿನಲ್ಲಿ

**ಸ ವಾ ಏಷ ಮಹಾನಜ ಆತ್ಮಾಽಜರೋಽಮರೋಽಮೃತೋಽಭಯೋ ಬ್ರಹ್ಮಾಽಭಯಂ ಬ್ರಹ್ಮಾಽಭಯಗ್ಂ ಹಿ ವೈ ಬ್ರಹ್ಮ ಭವತಿ ಯ ಏವಂ ವೇದ ॥** ಬೃ. ೪-೪-೨೫.

'ಈ ಆತ್ಮನೇ ಮಹಾಂತನು, ಜನ್ಮರಹಿತನು, ಮುಪ್ಪಿಲ್ಲದವನು, ಸಾವಿಲ್ಲದವನು, ಸಾಯುವ ಸ್ವಭಾವವಿಲ್ಲದ, ಅಂಜಿಕೆಯಿಲ್ಲದ ಬ್ರಹ್ಮವು. ಬ್ರಹ್ಮವು ಅಭಯವಾದದ್ದಷ್ಟೆ ? ಯಾವನು ಹೀಗೆಂದು ಅರಿತುಕೊಳ್ಳುವನೋ ಅವನು ಅಭಯಬ್ರಹ್ಮವೇ ಆಗುವನು' ಎಂದು ಹೇಳಿದೆ. ಇಲ್ಲಿ 'ನಾನು', 'ನಾನು' - ಎಂದು ನಾವುಗಳೆಲ್ಲರೂ ಕರೆದು ಕೊಳ್ಳುತ್ತಿರುವ ಈ ನಮ್ಮ ಪ್ರತ್ಯಗಾತ್ಮವೇ ಮುಪ್ಪುಸಾವುಗಳಿಲ್ಲದ ನಿರ್ಭಯವಾದ ಬ್ರಹ್ಮವು - ಎಂದು ಘಂಟಾಘೋಷವಾಗಿ ಸಾರಿರುತ್ತದೆ ; ಹೀಗೆಂದು ಅರಿತುಕೊಂಡ ಮಾತ್ರದಿಂದಲೇ ಅಭಯಬ್ರಹ್ಮವಾಗಿಬಿಡಬಹುದೆಂದೂ ಹೇಳಿದೆ. ಹೀಗೆ ಆತ್ಮನೆಂದರೆ ಜಗತ್ತಿಗೆಲ್ಲಕ್ಕೂ ತಿರುಳು, ನಮ್ಮ ಪರಮಾರ್ಥಸ್ವರೂಪವು ; ಬ್ರಹ್ಮವೆಂದರೆ ಯಾವದೊಂದು ಪರಿಚ್ಛೇದವೂ ಇಲ್ಲದ, ನಿರತಿಶಯಸ್ವಭಾವವುಳ್ಳ ನಿತ್ಯಶುದ್ಧಬುದ್ಧ ಮುಕ್ತಸ್ವಭಾವದ ತತ್ತ್ವವು. ಆ ಬ್ರಹ್ಮವೇ ನಮ್ಮ ಸ್ವರೂಪವಾದ ಆತ್ಮನು ; ನಮ್ಮ ಆತ್ಮನು ಆ ಬ್ರಹ್ಮವೇ -ಎಂದು ತಿಳಿಸಿಕೊಡುವ ವಿದ್ಯೆಯೇ 'ಅಧ್ಯಾತ್ಮವಿದ್ಯೆ' ಅಥವಾ 'ಬ್ರಹ್ಮವಿದ್ಯೆ'.

ಭೌತಿಕವಿಜ್ಞಾನಶಾಸ್ತ್ರದಲ್ಲಿ ನಮ್ಮ ಜೀವನಕ್ಕೆ ಬೇಕಾದ ಅನೇಕ ಸೌಕರ್ಯಗಳನ್ನು ಕಂಡುಹಿಡಿಯಲಾಗಿದೆ. ಅದರಲ್ಲಿ ಭೀಕರರೋಗಗಳನ್ನು ಪರಿಹರಿಸುವ ಉಪಾಯವನ್ನು ತೋರಿಸಿಕೊಡಲಾಗುತ್ತಿದೆ. ಆದರೆ ಹೊಸಹೊಸ ಶೋಧಗಳಿಂದ ನಮಗೆ ಜೀವನ ಸೌಕರ್ಯಗಳು ಹೆಚ್ಚು ಹೆಚ್ಚಾಗಿ ಲಭಿಸಿದಷ್ಟೂ ಅಷ್ಟೇ ವೇಗದಿಂದ, ಅಥವಾ ಅದಕ್ಕೂ

ಹೆಚ್ಚಿನ ವೇಗದಿಂದ ನಮ್ಮ ಕಾಮಗಳು ಹೆಚ್ಚುತ್ತಿವೆ ; ಆ ಕಾಮಗಳಿಂದ ಉಂಟಾಗಬಹುದಾದ ಅನರ್ಥಗಳೂ ನಮಗೆ ಗಂಟುಬೀಳುತ್ತಿವೆ. ನಮಗೆ ಎಷ್ಟು ಕಾಮೋಪಭೋಗಗಳು ದೊರೆತರೆತಾನೆ, ನಮಗೆ ತೃಪ್ತಿಯಾಗಿ ನಮ್ಮ ಕಾಮವು ಶಾಂತವಾದೀತು ? ಯಯಾತಿಯು ಮುದುಕನಾದಾಗ ತನ್ನ ಮಗನಿಂದ ಯೌವನವನ್ನು ಎರವಲಾಗಿ ತೆಗೆದುಕೊಂಡು, ದಿವ್ಯಭೋಗಗಳನ್ನು ಕೂಡ ಅನುಭವಿಸಿದನು ; ಆದರೂ ಅವನಿಗೆ ಕಾಮವು ಹಿಂಗಲಿಲ್ಲ . ಕೊನೆಗೆ ಅವನು ಐಹಿಕಜೀವನದ ರಹಸ್ಯವನ್ನು ಕಂಡುಕೊಂಡು ಈ ಗಾಥೆಯಲ್ಲಿ ತನ್ನ ಅನುಭವವನ್ನು ಹೇಳಿಕೊಂಡನಂತೆ :

**ನ ಜಾತು ಕಾಮಃ ಕಾಮನಾಮುಪಭೋಗೇನ ಶಾಮ್ಯತಿ ।**
**ಹವಿಷಾ ಕೃಷ್ಣವರ್ತ್ಮೇವ ಭೂಯ ಏವಾಭಿವರ್ಧತೇ ॥** ಭಾ.

ಕಾಮ್ಯವಸ್ತುಗಳನ್ನು ಉಪಭೋಗಿಸುವದರಿಂದ ಎಂದಿಗೂ ನಮ್ಮ ಆಶೆಯು ಶಾಂತವಾಗಲಾರದು. ಅಗ್ನಿಗೆ ಹವಿಸ್ಸನ್ನು ಹಾಕಿದರೆ ಭುಗ್ಗೆಂದು ಹೆಚ್ಚಿನ ಉರಿಯೇ ಎದ್ದುಕೊಳ್ಳುವಂತೆ, ಕಾಮೋಪಭೋಗದಿಂದ ನಮ್ಮ ಕಾಮದಾಹವು ಇನ್ನೂ ಹೆಚ್ಚು ಹೆಚ್ಚಾಗಿ ಬೆಳೆದುಕೊಳ್ಳುತ್ತಲೇ ಇರುವದು - ಎಂದು ಆತನು ಹೇಳಿಕೊಂಡಿರುವದು ನಮ್ಮಗಳೆಲ್ಲರ ಅನುಭವದಲ್ಲಿಯೂ ಇರುತ್ತದೆಯಲ್ಲವೆ ? ಈಗ್ಗೆ ಭೌತಿಕವಿಜ್ಞಾನ ಶಾಸ್ತ್ರವು ನಮಗೆ ಎಷ್ಟು ಅನುಕೂಲ್ಯಗಳನ್ನು ಕಲ್ಪಿಸಿಕೊಟ್ಟಿದ್ದರೂ ನಮಗೆ ಹಿಂದಿನವರಿಗಿಂತ ಹೆಚ್ಚಿನ ಕಾಮವೇ ಉಂಟಾಗುತ್ತಿರುತ್ತದೆ ; ಅದರಿಂದಾಗುವ ಪರಸ್ಪರ ದ್ವೇಷಾದಿರೂಪವಾದ ಅನರ್ಥವಂತೂ ಭುಗಿಲೆನ್ನುತ್ತಿದೆ. ಆ ವಿಜ್ಞಾನಶಾಸ್ತ್ರವು ಕಾಲಾನುಕಾಲಕ್ಕೆ ಸತ್ತವರನ್ನು ಬದುಕಿಸಲೂಬಹುದು ; ಆದರೆ ನಮಗೆ ಎಂದಿಗೂ ಸಾಯದಂಥ ಸ್ವಭಾವವನ್ನು ಕೊಡುವದು ಅದರಿಂದ ಎಂದಿಗೂ ಆಗಲಾರದು. ನಮಗೆ ರೋಗ, ಮುಪ್ಪು - ಮುಂತಾದವುಗಳ ಬಾಧೆಯು ಎಂದೆಂದಿಗೂ ಸ್ವಲ್ಪವೂ ಇಲ್ಲದಂತೆ ಮಾಡುವದಾಗಲಿ, ರಾಗದ್ವೇಷಾದಿಗಳು ನಮ್ಮನ್ನು ಬೇಗುದಿಸದಂತೆ ಮಾಡುವದಕ್ಕಾಗಲಿ ಅದರಿಂದ ಎಂದಿಗೂ ಆಗುವಂತಿಲ್ಲ . ಏಕೆಂದರೆ ಅದು ನಮ್ಮ ಹೊರಗಿರುವ ಭೌತಿಕವಸ್ತುಗಳನ್ನು ಪರೀಕ್ಷಿಸಿ ಮಾರ್ಪಡಿಸುವ ವಿದ್ಯೆಮಾತ್ರವಾಗಿರುತ್ತದೆ, ಅಧ್ಯಾತ್ಮವಿದ್ಯೆಯಲ್ಲ. ಕಾಮಕ್ರೋಧಾದಿಗಳನ್ನು ಅತ್ಯಂತವಾಗಿ ನಾಶ ಮಾಡುವದಾಗಲಿ, ಸ್ವಲ್ಪಮಟ್ಟಿಗಾದರೂ ಮಟ್ಟುಮಾಡುವದಾಗಲಿ ಆ ಶಾಸ್ತ್ರದಿಂದ ಆಗಲಾರದು. ಏಕೆಂದರೆ ಅದಕ್ಕೆ ಬಾಹ್ಯವಿಷಯಗಳ ಪರಿಶೀಲನೆಯ ಕ್ರಮವೊಂದು ತಿಳಿದಿದೆಯೇ ಹೊರತು, ನಮ್ಮ ಆಂತರಸ್ವಭಾವವನ್ನು ಪರೀಕ್ಷಿಸುವದು ಅದರಿಂದಾಗುವಂತಿಲ್ಲ. ಅಧ್ಯಾತ್ಮಪ್ರಪಂಚವು ಅದರ ಕ್ಷೇತ್ರಕ್ಕೆ ಸೇರಿರುವದೇ ಇಲ್ಲ.

ನಮ್ಮ ಉಪನಿಷತ್ತುಗಳಲ್ಲಿ ಪ್ರಸಿದ್ಧವಾಗಿರುವ ಬ್ರಹ್ಮವಿದ್ಯೆಯ ಅಥವಾ ಅಧ್ಯಾತ್ಮವಿದ್ಯೆಯ ವಿಚಾರಕ್ರಮವೇ ಬೇರೆ. ನಮ್ಮ ನಿಜವಾದ ಸ್ವಭಾವವನ್ನು ನಾವು ಅರಿತುಕೊಳ್ಳದೆ ಅವಿದ್ಯೆಯಿಂದ 'ನಾವು ಹುಟ್ಟುವವರು, ಮುಪ್ಪನ್ನನುಭವಿಸುವವರು, ಸಾಯುವವರು' - ಎಂದು ಮುಂತಾಗಿ ಇಲ್ಲದ ಅಂಜಿಕೆಯನ್ನು ಹುಟ್ಟಿಹಾಕಿ ಕೊಂಡಿರುವೆವು. ''ನಿಮ್ಮ ನಿಜವಾದ ಸ್ವಭಾವವು ಬ್ರಹ್ಮವೇ ಆಗಿರುತ್ತದೆ. ನೀವು ಪರಿಚ್ಛಿನ್ನರಾದ ಜೀವಾತ್ಮರಲ್ಲ ; ನಿಮಗೆ ಹುಟ್ಟಿಲ್ಲ , ಮುಪ್ಪಿಲ್ಲ , ಮರಣವಿಲ್ಲ ; ನಿಮ್ಮ ಸ್ವಭಾವವೇ ಅಮೃತತ್ವ ( ಸಾಯುವದಲ್ಲದ್ದು ). ಅಜರಾಗಿರುವವರಿಗೆ ಎಂದೆಂದಿಗೂ ಹುಟ್ಟೇ ಇಲ್ಲದವರಿಗೆ, ಸಾವೆಲ್ಲಿಯದು ? ಅಜ್ಞಾನದಿಂದಾಗಿರುವ ಈ ಅಂಜಿಕೆಯನ್ನು ತಪ್ಪಿಸಿಕೊಳ್ಳುವದು ಜ್ಞಾನದಿಂದ ಮಾತ್ರವೇ ಆದೀತು. 'ನಾನು ಅಭಯವಾದ ಬ್ರಹ್ಮವೇ' ಎಂಬುದನ್ನು ಯಾವನು ಅರಿತುಕೊಳ್ಳುವನೋ ಅವನು ಆ ಜ್ಞಾನ ಮಾತ್ರದಿಂದ ಅಭಯವಾದ ಬ್ರಹ್ಮವೇ ಆಗಿಬಿಡುತ್ತಾನೆ. ಈ ಫಲವು ಕಾಲಾಂತರದಲ್ಲಿ ದೇಶಾಂತರದಲ್ಲಿ ಆಗುವದಲ್ಲ . ಅಧ್ಯಾತ್ಮವಿದ್ಯೆಯಿಂದ ನೀವು ಈಗಲೇ, ಇಲ್ಲಿಯೇ ಅಜಾದ್ವಯಬ್ರಹ್ಮರೆಂಬುದನ್ನು ಕಂಡುಕೊಂಡು ನಲಿಯಬಹುದು'' - ಎಂದು ಉಪನಿಷತ್ತುಗಳು ಸಾರುತ್ತಿವೆ. ಈ ಹೇಳಿಕೆಯನ್ನು ಪರೀಕ್ಷಿಸಿ ಆನಂದವನ್ನು ಪಡೆದು ಕೊಳ್ಳದೆ ಇದ್ದರೆ ನಮ್ಮಂಥ ಅವಿವೇಕಿಗಳು ಇನ್ನು ಯಾರಿದ್ದಾರು ? ವೇದಾಂತದಲ್ಲಿ 'ಎಲ್ಲಿಯೋ ಒಂದು ಕಾಲದಲ್ಲಿ ಯಾರೋ ಕೆಲವರು ಮಹಾತ್ಮರ ಆತ್ಮನು ಬ್ರಹ್ಮವಾಗಿತ್ತು' ಎಂದೇನೂ ಹೇಳಿಲ್ಲ . ' ಸ ವಾ ಏಷ ಮಹಾನಜ ಆತ್ಮಾ' ನಮ್ಮ ಆತ್ಮನೆಂದು ನಮೆಲ್ಲರಿಗೂ ತಿಳಿದುಬರುತ್ತಿರುವ ಈ ಆತ್ಮನೇ ಅಭಯವಾದ ಬ್ರಹ್ಮವು ಎಂದಿದೆ. 'ಈ ನಮ್ಮ ಆತ್ಮನು' ಎಂದು ನಾವೆಲ್ಲರೂ ಹೇಳಿಕೊಳ್ಳಬಹುದಷ್ಟೆ ? ಆದ್ದರಿಂದ ಬ್ರಹ್ಮಾದಿಯಾಗಿ ಸ್ತಂಬದವರೆಗಿನ ಎಲ್ಲಾ ಪ್ರಾಣಿಗಳ ಆತ್ಮನೂ ಬ್ರಹ್ಮವೇ ಎಂಬುದು ಶ್ರುತಿಯ ಅಭಿಪ್ರಾಯ. ಈ ವಾಕ್ಯಕ್ಕೆ ಎಲ್ಲಾ ಆಚಾರ್ಯರೂ ಹೀಗೇ ಅರ್ಥವನ್ನು ಮಾಡುತ್ತಿಲ್ಲ; ಶ್ರೀಶಂಕರಭಗವತ್ಪಾದರು ಮಾತ್ರ ಧೈರ್ಯವಾಗಿ ''ನನ್ನ ಆತ್ಮನೂ, ನಿಮ್ಮ ಆತ್ಮನೂ ಎಲ್ಲರ ಆತ್ಮನೂ ಒಬ್ಬನೇ ; ಅವನು ನಿಜವಾಗಿಯೂ ಹುಟ್ಟು ಮುಪ್ಪು ಸಾವುಗಳಿಲ್ಲದ ಅಭಯಸ್ವರೂಪವೇ ಆಗಿರುತ್ತಾನೆ. ಇದನ್ನು ನೀವು ಅರಿತುಕೊಂಡರಾಯಿತು. 'ಎಂದೆಂದಿಗೂ ಯಾವ ಅನರ್ಥಕ್ಕೂ ಪಕ್ಕಾಗದ ಆತ್ಮನೇ ನನ್ನ ಸ್ವರೂಪವಾಗಿದ್ದರೂ ಹೀಗೆ ದುಃಖಪಡುತ್ತಿದ್ದೇನಲ್ಲ !' ಎಂದು ನೀವೇ ಆಶ್ಚರ್ಯಪಡುವಿರಿ ! '' ಎಂದು ಹೇಳಿರುತ್ತಾರೆ. 'ಈಗ ಶಂಕರಾಚಾರ್ಯರಿಲ್ಲವಲ್ಲ ! ಹಿಂದಿನ ಋಷಿಗಳಿಲ್ಲವಲ್ಲ ! ನಮ್ಮ ಆತ್ಮನು ನಿಜವಾಗಿಯೂ ಇಂಥ

ಸ್ವಭಾವವುಳ್ಳವನೆಂಬುದನ್ನು ಹೇಗೆ ನಂಬೋಣ ?' ಎಂದು ನಾವು ಯಾರೂ ಶಂಕಿಸುವ ಕಾರಣವಿಲ್ಲ . ಏಕೆಂದರೆ ಉಪನಿಷತ್ತುಗಳಿವೆ, ಭಗವದ್ಗೀತೆಯಿದೆ ; ಅವುಗಳಲ್ಲಿ ನಮ್ಮ ಆತ್ಮನ ಸ್ವಭಾವವನ್ನು ವರ್ಣಿಸಿದೆ. ಅದನ್ನು ಪರೀಕ್ಷಿಸಿ ನೋಡುವ ಬುದ್ಧಿಯೂ ನಮಗೆ ಇದೆ ; ಪರದಾಸ್ಯದಿಂದ ಮುಕ್ತರಾಗುವದಕ್ಕೆಂದು ನಮ್ಮ ದೇಶದವರು ಎಷ್ಟೆಲ್ಲ ಪ್ರಯತ್ನ ಮಾಡಲಿಲ್ಲ ! ಕೊನೆಗೂ ಸ್ವಾತಂತ್ರ್ಯವನ್ನು ಕಷ್ಟಪಟ್ಟು ಸಂಪಾದಿಸಿಕೊಂಡೆವಲ್ಲವೆ ? ಹಿಂದೆ ನಾವು ಪರರಾಷ್ಟ್ರದವರ ದಬ್ಬಾಳಿಕೆಗೆ ಒಳಗಾಗುವಷ್ಟು ದುರ್ಬಲರಾಗಿದ್ದೆವು. ಕಾಲಾನುಕಾಲಕ್ಕೆ ನಮ್ಮ ಯೋಗ್ಯತೆಯನ್ನು ಅರಿತುಕೊಂಡು ಎಲ್ಲರೂ ಒಗ್ಗಟ್ಟಾಗಿ ಸರ್ವಶಕ್ತಿಯನ್ನೂ ಉಪಯೋಗಿಸಿಕೊಂಡು ಪರದಾಸ್ಯದಿಂದ ಮುಕ್ತರಾದೆವು. ಆದರೆ ಈಗ ನಾವು ವಿಚಾರಕ್ಕಿಟ್ಟುಕೊಂಡಿರುವ ಮುಕ್ತಿಗೆ ಆ ಬಗೆಯ ಕಷ್ಟವನ್ನೇನೂ ಪಡಬೇಕಾಗಿಲ್ಲ. ನಮ್ಮ ಸ್ವಾತಂತ್ರ್ಯವನ್ನು ಮತ್ತೊಬ್ಬರು ಯಾರೂ ಕಸಿದುಕೊಂಡಿಲ್ಲ ; ನಾವುನಾವೇ ಅಜ್ಞಾನದಿಂದ ಸಂಸಾರ ಬಂಧಕ್ಕೆ ಸಿಕ್ಕಿಕೊಂಡುಬಿಟ್ಟಿರುತ್ತೇವೆ. ಈ ಬಂಧದಿಂದ ಬಿಡುಗಡೆಯಾಗುವದಕ್ಕೆ ನಾವು ಮತ್ತೆ ಕೆಲವರನ್ನು ನಮ್ಮ ಜೊತೆಗೆ ಸೇರಿಸಿಕೊಂಡು ಪ್ರಯತ್ನವನ್ನು ಮಾಡುವ ಆವಶ್ಯಕತೆ ಯೇನೂ ಇಲ್ಲ. ಏಕೆಂದರೆ ನಮ್ಮ ಅಜ್ಞಾನವನ್ನು ಮತ್ತೊಬ್ಬರು ಕಳೆಯಲಾರರು. ತಪ್ಪು ತಿಳಿವಳಿಕೆಯಿಂದಾಗಿರುವ ಬಂಧವನ್ನು ಸರಿಯಾದ ತಿಳಿವಳಿಕೆಯಿಂದ ಯಾವ ಹೆಚ್ಚಿನ ಆಯಾಸವೂ ಇಲ್ಲದೆ ಬಿಡಿಸಿಕೊಳ್ಳಬಹುದಾಗಿದೆ. ಆದ್ದರಿಂದ ನಮ್ಮಂಥವರಿಗೂ ಮುಕ್ತಿ ದೊರಕೀತೆ ? ಅಧ್ಯಾತ್ಮಜ್ಞಾನವು ದೊರಕೀತೆ ? - ಎಂದು ಮುಂತಾಗಿ ಶಂಕಿಸುವ ಕಾರಣವಿಲ್ಲ. ಈಗಲೇ ನಾವು ಪ್ರಯತ್ನವನ್ನು ಮಾಡಬಹುದು. ಅಧ್ಯಾತ್ಮವಿದ್ಯೆಯಿಂದ ನಮ್ಮ ಪರಮಾರ್ಥಸ್ವಭಾವವನ್ನು ಕಂಡುಕೊಳ್ಳಲೂಬಹುದು.

ಅಧ್ಯಾತ್ಮವಿದ್ಯೆಗೆ ಎರಡು ಮಾರ್ಗಗಳಿರುತ್ತವೆ. ನಮಗೂ ಜಗತ್ತಿಗೂ ಸಾರ ವಾಗಿರುವ ಆತ್ಮವಸ್ತುವನ್ನು ಇದ್ದದ್ದು ಇದ್ದಂತೆ ನಿಸ್ಸಂಶಯವಾಗಿ ಅರಿತುಕೊಳ್ಳುವದು ಒಂದು ಬಗೆ. ಇದಕ್ಕೆ **ಜ್ಞಾನಮಾರ್ಗ**ವೆಂದು ಹೆಸರು. ಪರಮಾತ್ಮನು ಎಲ್ಲೆಲ್ಲಿಯೂ ಇರುತ್ತಾನೆ, ಎಲ್ಲರಿಗೂ ಆತ್ಮನಾಗಿರುತ್ತಾನೆ - ಎಂಬ ವೇದಾಂತವಾಕ್ಯವನ್ನೂ , ಗುರು ವಚನವನ್ನೂ ನಂಬಿ ಶ್ರದ್ಧೆಯಿಂದ ಭಾವನೆ ಮಾಡುತ್ತಿರುವದು ಇನ್ನೊಂದು ಬಗೆ. ಇದಕ್ಕೆ **ಉಪಾಸನಾಮಾರ್ಗ**ವೆಂದು ಹೆಸರು. **ಜ್ಞಾನಮಾರ್ಗ**ವು ಉತ್ತಮಾಧಿಕಾರಿಗಳಿಗೆ ಸುಲಭವಾಗಿ ದೊರಕುತ್ತದೆ ; **ಉಪಾಸನಾಮಾರ್ಗ**ವು ಮಂದಮಧ್ಯಮಾಧಿಕಾರಿಗಳಿಗೆ ತಕ್ಕದ್ದಾಗಿರುತ್ತದೆ. ನಾನು ಉತ್ತಮಾಧಿಕಾರಿಯೊ, ಅಲ್ಲವೊ ? ಎಂದು ಮೊದಲೇ ಸಂಶಯಪಡುವ ಕಾರಣವಿಲ್ಲ. ಶಾಸ್ತ್ರೋಕ್ತವಾದ ಸಾಧನಗಳನ್ನು ಅಳವಡಿಸಿಕೊಂಡು

ಬಲ್ಲವರು ತೋರಿಸುವ ಮಾರ್ಗದಿಂದ ತತ್ತ್ವವಿಚಾರವನ್ನು ಮಾಡಬೇಕು, ಆಗಲೇ ನಮಗೆ ಆ ಮಾರ್ಗವು ಸುಲಭವೊ, ಅಲ್ಲವೊ ?- ಎಂಬುದು ಮನದಟ್ಟಾಗುವದು. ಭಾವನೆಯಂತೂ ಮನುಷ್ಯಮಾತ್ರಕ್ಕೆ ಇದ್ದೇ ಇರುವದು. ನಮ್ಮಲ್ಲನೇಕರ ಜೀವನವು ಭಾವನಾಮಯವೇ ಆಗಿರುತ್ತದೆ. ಆದ್ದರಿಂದ ಉಪಾಸನೆಯ ಸುಖವನ್ನು ಕಂಡು ಕೊಳ್ಳುವದು ಬಹಳ ಜನಗಳಿಗೆ ಸುಲಭವಾಗಿರುತ್ತದೆ. 'ವಿದ್ಯಾ' 'ಜ್ಞಾನ' - ಎಂಬ ಶಬ್ದಗಳನ್ನು ಯಥಾರ್ಥವಾಗಿ ಅರಿತುಕೊಳ್ಳುವದು, ಭಾವನೆಮಾಡುವದು - ಎಂಬ ಎರಡಕ್ಕೂ ಉಪನಿಷತ್ತುಗಳಲ್ಲಿ ಉಪಯೋಗಿಸಿರುತ್ತದೆ. ಆದ್ದರಿಂದ ಈ ಎರಡೂ ಅಧ್ಯಾತ್ಮವಿದ್ಯೆಯೇ, ಬ್ರಹ್ಮವಿದ್ಯೆಯೇ.

'ಅಧ್ಯಾತ್ಮವಿದ್ಯೆ' ಎಂಬ ಶಬ್ದವನ್ನು ಜ್ಞಾನವೆಂಬರ್ಥದಲ್ಲಿ ಬಳಸುವಾಗ ಅದು ಲೌಕಿಕವಾದ ಜ್ಞಾನದಂಥ ಜ್ಞಾನವೆಂದು ತಿಳಿಯಬಾರದು. ಭಾವನೆಯು ಲೌಕಿಕವಾದ ಭಾವನೆಯ ರೀತಿಯದೇ ಆಗಿದ್ದರೂ ನಿರಂತರವಾಗಿ ಶಾಸ್ತ್ರೋಕ್ತವಾದ ರೀತಿಯಲ್ಲಿಯೇ ಭಾವನೆಮಾಡಬೇಕಾಗುತ್ತದೆಯಾದ್ದರಿಂದ ಅದರಲ್ಲಿಯೂ ಲೌಕಿಕವಾದ ಭಾವನೆಗಿಂತ ಶಾಸ್ತ್ರೀಯಭಾವನೆಯಲ್ಲಿ ಸ್ವಲ್ಪ ವೈಲಕ್ಷಣ್ಯವು ಇದ್ದೇ ಇರುತ್ತದೆ. ಹೇಗೇ ಆಗಲೀ , ಈಗ ನಾವು ಮಾಡುತ್ತಿರುವ ವಿಚಾರಕ್ರಮದಲ್ಲಿ ಅಧ್ಯಾತ್ಮವಿದ್ಯೆಯೇ ಬ್ರಹ್ಮವಿದ್ಯೆ, ಬ್ರಹ್ಮವಿದ್ಯೆಯೇ ಅಧ್ಯಾತ್ಮವಿದ್ಯೆ ; ಈ ಎರಡಕ್ಕೂ ಯಾವ ವೈಲಕ್ಷಣ್ಯವೂ ಇಲ್ಲ . ಈ ಅಧ್ಯಾತ್ಮವಿದ್ಯೆಯನ್ನು ಒಂದಾನೊಂದು ಕ್ರಮಕ್ಕೆ ಒಳಪಟ್ಟೇ ವಿಚಾರಪೂರ್ವಕವಾಗಿ ಅಥವಾ ಭಾವನಾಪೂರ್ವಕವಾಗಿ ಸಂಪಾದಿಸಿಕೊಳ್ಳಬೇಕಾಗಿರುತ್ತದೆ. ಈ ವಿಚಾರದ ಮತ್ತು ಭಾವನೆಯ ಕ್ರಮವನ್ನು ಮೆಟ್ಟಿಲುಮೆಟ್ಟಿಲಾಗಿ ಮುಂದೆ ತಿಳಿಸುತ್ತಾ ಬರುವೆನು.

## ೨. ಇಂದ್ರಿಯಗಳಿಗೆ ತೋರುವ ಜಗತ್ತು

(26-7-64)

ಯಾವದು ಈ ಎಲ್ಲಾ ಜಗತ್ತಿನ ತಿರುಳಾಗಿರುವದೋ, ಯಾವದು ನಮ್ಮ ಪರಮಾರ್ಥಸ್ವರೂಪೇ ಆಗಿರುವದೋ ಅದೇ ಆತ್ಮ , ಬ್ರಹ್ಮ - ಎಂಬ ಶಬ್ದಗಳಿಂದ ಕರೆಯಲ್ಪಡುತ್ತಿದೆ. ಆತ್ಮನೆಂದರೂ ಬ್ರಹ್ಮವೆಂದರೂ ಒಂದೇ. ನಮ್ಮ ಆತ್ಮನು, ನಮ್ಮ ಪರಮಾರ್ಥಸ್ವರೂಪವು, ಹುಟ್ಟು , ಮುಪ್ಪು , ಸಾವು - ಮುಂತಾದವುಗಳ ಅಂಜಿಕೆಯಿಲ್ಲದ ಬ್ರಹ್ಮವೇ ಆಗಿರುತ್ತದೆ. ಹೀಗೆಂಬುದನ್ನು ತಿಳಿಸಿಕೊಡುವದೇ ಅಧ್ಯಾತ್ಮವಿದ್ಯೆ ಅಥವಾ ಬ್ರಹ್ಮವಿದ್ಯೆ - ಎಂದು ತಿಳಿದುಕೊಂಡದ್ದಾಯಿತು.

ಈ ತತ್ತ್ವವನ್ನು ನಾವು ಮನಗಾಣುವದು ಹೇಗೆಂಬುದನ್ನು ವಿಚಾರಿಸಬೇಕು. ಈಗಿರುವ ನಮ್ಮ ತಿಳಿವಳಿಕೆಯಂತೆ ನಮಗೆ ತೋರುತ್ತಿರುವ ಆತ್ಮಸ್ವರೂಪಕ್ಕೂ , ಉಪನಿಷತ್ತುಗಳಲ್ಲಿ ಹೇಳಿರುವ ಸ್ವರೂಪಕ್ಕೂ ಬಹಳ ವೈಲಕ್ಷಣ್ಯವಿದೆ. ಏಕೆಂದರೆ 'ಬ್ರಹ್ಮೈವೇದಂ ವಿಶ್ವಂ' (ಇದೆಲ್ಲವೂ ಬ್ರಹ್ಮವೇ) 'ಆತ್ಮೈವೇದಂ ಸರ್ವಂ' (ಇದೆಲ್ಲವೂ ಆತ್ಮನೇ) - ಎಂದು ಉಪನಿಷತ್ತುಗಳು ಸಾರುತ್ತಿವೆ. ನಾವೆಲ್ಲರೂ ಅಭಯವಾದ ಬ್ರಹ್ಮವೇ - ಎಂದು ಘೋಷಿಸುತ್ತಿವೆ. ಆದರೆ ನಮಗೆ ಈ ಪ್ರಪಂಚವೆಲ್ಲವೂ ಬ್ರಹ್ಮವಾಗಿ , ಅಥವಾ ನಮ್ಮ ಆತ್ಮನೇ ಆಗಿ ಕಾಣಿಸುತ್ತಿಲ್ಲ ; ನಮ್ಮ ಸ್ವರೂಪವು ಹುಟ್ಟು , ಮುಪ್ಪು , ಮರಣ - ಮುಂತಾದವುಗಳಿಲ್ಲದ ಬ್ರಹ್ಮವೆಂದೂ ಕಾಣಿಸುತ್ತಿಲ್ಲ . ಶಾಸ್ತ್ರದಲ್ಲಿ ಹೇಳಿರುವ ಪರಮಾತ್ಮಸ್ವರೂಪಕ್ಕೂ ನಮಗೆ ಈಗ ಕಾಣಿಸುತ್ತಿರುವ ಚಿತ್ರವಿಚಿತ್ರವಾದ ಪ್ರಪಂಚರೂಪಕ್ಕೂ ಅತ್ಯಂತ ವೈಲಕ್ಷಣ್ಯವಿದೆಯಲ್ಲ ಈ ಷಪಂಚದಲ್ಲಿ ಕಾಣುತ್ತಿರುವ ಪ್ರಾಣಿಗಳು ಪರಸ್ಪರವಾಗಿ ಎಷ್ಟು ವಿಲಕ್ಷಣವಾಗಿರುತ್ತಾರೆ ಇಲ್ಲಿ ಬೆಟ್ಟ, ನದಿ , ಸಮುದ್ರ - ಮುಂತಾದ ಅಚೇತನಪದಾರ್ಥಗಳು ಬೇರೆ ಇವೆಯಲ್ಲವೆ ? ಜನ್ಮಾದಿವಿಕ್ರಿಯಾರಹಿತನಾದ ಅದ್ವಯನಾದ ಆತ್ಮನೊಬ್ಬನೇ ಪರಮಾರ್ಥವಾಗಿದ್ದರೆ ಈ ವೈಚಿತ್ರ್ಯವು ಎಲ್ಲಿಂದ ಬಂತು ? - ಎಂಬ ಶಂಕೆಯು ನಮಗೆಲ್ಲ ಸ್ವಭಾವದಿಂದಲೇ ಉಂಟಾಗುತ್ತದೆ ಅಲ್ಲವೆ ? ಇದೇಕೆ ಹೀಗೆ ತೋರುತ್ತಿದೆ ?

ಇದಕ್ಕೆ ಉಪನಿಷತ್ತಿನಲ್ಲಿ ಹೇಳಿರುವ ಪರಿಹಾರವಿದು :

**ಪುರಶ್ಚಕ್ರೇ ದ್ವಿಪದಃ ಪುರುಶ್ಚಕ್ರೇ ಚತುಷ್ಪದಃ ।**

**ಪುರಃ ಸ ಪಕ್ಷೀ ಭೂತ್ವಾ ಪುರಃ ಪುರುಷ ಆವಿಶತ್ ॥** ಬೃ. ೨-೫-೧೮.

**ರೂಪಂ ರೂಪಂ ಪ್ರತಿರೂಪೋ ಬಭೂವ ತದಸ್ಯ ರೂಪಂ ಪ್ರತಿಚಕ್ಷಣಾಯ ।**

**ಇನ್ದ್ರೋ ಮಾಯಾಭಿಃ ಪುರುರೂಪ ಈಯತೇ ಯುಕ್ತಾ ಹ್ಯಸ್ಯ ಹರಯಃ ಶತಾ ದಶ ॥** ಬೃ. ೨-೫-೧೯

ಇರುವವನು ಪರಮಾತ್ಮನೊಬ್ಬನೇ. ಅವನು 'ಮಾಯೆ'ಗಳಿಂದ ಬಹುರೂಪನಾಗಿ ತೋರುತ್ತಿದ್ದಾನೆ. ಆತನು ಒಂದೊಂದು ರೂಪಕ್ಕೂ ಬೇರೆಬೇರೆಯ ರೂಪನಾಗಿ ಕಾಣುತ್ತಿರುತ್ತಾನೆ. ಆ ರೂಪವು ಈತನನ್ನು ಅರಿತುಕೊಳ್ಳುವುದಕ್ಕೆಂದು ಪಡೆದದ್ದು - ಎಂಬುದು ಎರಡನೆಯ ಮಂತ್ರದ ಅರ್ಥ. ಈ ಮಂತ್ರದಲ್ಲಿ ಇಂದ್ರಿಯಗಳ ಅರಿವುಗಳನ್ನು 'ಮಾಯೆಗಳು' ಎಂದು ಕರೆಯಲಾಗಿದೆ. ಪರಮಾತ್ಮನು ಒಬ್ಬನೇ ಆಗಿರುತ್ತಾನಾದರೂ ಅವ್ಯಾಕೃತವಾಗಿ ತನ್ನೊಳಗೆ ಅಡಗಿದ್ದ ನಾಮರೂಪಗಳನ್ನು

ಬಿಡಿಬಿಡಿಯಾಗಿ ಕಾಣುವಂತೆ ಸೃಷ್ಟಿಸಿರುತ್ತಾನೆ. ಈ ನಾಮರೂಪಕೃತವಾದ ಪ್ರಪಂಚದಲ್ಲಿ ಎರಡುಕಾಲಿನ ಪುರ (ಕೋಟೆ)ಗಳನ್ನು ಮಾಡಿಕೊಂಡಿರುತ್ತಾನೆ. ಮನುಷ್ಯರು, ಪಕ್ಷಿಗಳು – ಮುಂತಾದ ಶರೀರಗಳೇ ಈ ಎರಡುಕಾಲಿನ ಪುರಗಳು. ಅವನು ಹಲವು ನಾಲ್ಕು ಕಾಲಿನ ಪುರಗಳನ್ನೂ ಮಾಡಿಕೊಂಡಿರುತ್ತಾನೆ ; ಪಶುಗಳ ಶರೀರಗಳೇ ಈ ನಾಲ್ಕು ಕಾಲಿನ ಪುರಗಳು. ಒಬ್ಬ ಮಹಾಪ್ರಭುವು ತಾನಿರುವದಕ್ಕೆ ಭದ್ರವಾದ ಬಗೆಬಗೆಯ ಪುರಗಳನ್ನು ನಿರ್ಮಿಸಿಕೊಳ್ಳುವಂತೆ ಈ ಆತ್ಮನೂ ಬಗೆಬಗೆಯ ಶರೀರಗಳನ್ನು ಸೃಷ್ಟಿಮಾಡಿಕೊಂಡು ಅವುಗಳೊಳಗೆ ಇದ್ದುಕೊಂಡಿರುತ್ತಾನೆ. ಈ ಆತ್ಮನು ಆ ಪುರಗಳೊಳಗೆ – ಗೂಡುಗಳೊಳಗೆ ಪಕ್ಷಿಗಳು ಸೇರುವಂತೆ – ಲಿಂಗ ಶರೀರಗಳ ರೂಪದಿಂದ ಒಳಹೊಕ್ಕಿರುತ್ತಾನೆ. ಹೀಗೆ ಎಲ್ಲಾ ಪುರಗಳಲ್ಲಿಯೂ ಹೊಕ್ಕಿರುವುದರಿಂದ ಇವನಿಗೆ 'ಪುರುಷ' ಎಂದು ಹೆಸರಾಗಿರುತ್ತದೆ. ಇವನು ವ್ಯಾಪಿಸಿಕೊಂಡಿರದ ವಸ್ತುವೇ ಇಲ್ಲ; ಇವನು ಒಳಹೊಕ್ಕಿರದ ವಸ್ತುವೂ ಇಲ್ಲ. ಒಬ್ಬ ಪರಮಾತ್ಮನೇ ಚೇತನಾಚೇತನ ವಸ್ತುಗಳೊಳಗೆಲ್ಲ ಪ್ರವೇಶಿಸಿ ಅವುಗಳಿಗೆ ಆಧಾರವಾಗಿದ್ದುಕೊಂಡಿರುತ್ತಾನೆ ; ಹೊರಗಿದ್ದು ಅವುಗಳನ್ನೆಲ್ಲಾ ವ್ಯಾಪಿಸಿಕೊಂಡಿರುತ್ತಾನೆ. ಇಡಿಯ ಜಗತ್ತಿನ ಒಳಗೂ ಹೊರಗೂ ಆತನೇ ಇದ್ದುಕೊಂಡಿರುತ್ತಾನೆ. ಹೀಗಿದ್ದರೂ ಅವನು ಒಂದೊಂದು ಪ್ರಾಣಿಯೊಳಗೂ ಒಂದೊಂದು ಬೇರೆಬೇರೆಯ ರೂಪದಿಂದ ಸೇರಿಕೊಂಡಿರುತ್ತಾನೆ. ಆಯಾ ಪ್ರಾಣಿಯ ರೂಪಕ್ಕೆ ತಕ್ಕಂತೆ ಆಯಾ ರೂಪದಿಂದಲೇ ಕಾಣಿಸಿಕೊಳ್ಳುತ್ತಿದ್ದಾನೆ. ಅವನು ಹೀಗೆ ಸೇರಿಕೊಂಡಿರುವದೇಕೆಂದರೆ ಈ ಆತ್ಮನು ತನ್ನ ಸ್ವಂತರೂಪದಿಂದ ಯಾರಿಗೂ ವಿಷಯನಾಗಿ ಕಾಣಬರುವನಲ್ಲವಾದರೂ ಹೀಗೆ ನಾಮರೂಪಗಳ ವಿಂಗಡನೆಯಿಂದ ತೋರಿಕೊಳ್ಳುವ ರೂಪದಿಂದ ಈತನ ರೂಪವನ್ನು ಅರಿತು ಕೊಳ್ಳುವದಕ್ಕೆ ಆಗುವಂತಿದೆ. ತನ್ನನ್ನು ತಾನೇ ನೋಡುವದಕ್ಕಾಗದಿದ್ದರೂ ದ್ವೈತಪ್ರಪಂಚದ ರೂಪವನ್ನು ತಳೆದಾಗ ನೋಡಿಕೊಳ್ಳಬಹುದು ; ನೋಡುವವನೂ ತಾನೇ, ನೋಡುವ ವಿಷಯವೂ ತಾನೇ. ಈ ಎಲ್ಲಾ ರೂಪಗಳಿಂದ ತೋರಿ ಕೊಳ್ಳುವವನೂ ಈತನೊಬ್ಬನೇ. ಹೀಗೆ ಬಗೆಬಗೆಯ ರೂಪಗಳಿಂದ ಕಾಣುವದಕ್ಕೆ ಕಾರಣವೇನು ? – ಎಂದರೆ ಇಂದ್ರಿಯಪ್ರಜ್ಞೆಗಳಿಂದ, ಇಂದ್ರಿಯಗಳ ಅರಿವುಗಳಿಂದ.

ಇಂದ್ರಿಯಗಳ ಅರಿವು ಒಂದೇ ಪರಮಾರ್ಥವನ್ನು ಚಿತ್ರವಿಚಿತ್ರವಾಗಿ ತೋರಿಸುತ್ತಿರುವದರಿಂದ ಇವುಗಳನ್ನು 'ಮಾಯೆ'ಗಳು ಎಂದು ಕರೆದಿದೆ. ಈ ಇಂದ್ರಿಯಗಳು ಇಷ್ಟೆಂಬ ಲೆಕ್ಕವಿಲ್ಲ. ಇಲ್ಲಿರುವ ಪ್ರಾಣಿನಿಕಾಯಗಳೆಷ್ಟು ! ಎಂಬತ್ತು ನಾಲ್ಕು ಲಕ್ಷ ಜೀವರಾಶಿಗಳಿರುವವೆಂದು ಪುರಾಣಗಳು ಹೇಳುತ್ತಿವೆ. ಒಂದೊಂದು

ಜೀವರಾಶಿಯಲ್ಲಿ ಎಷ್ಟು ಪ್ರಾಣಿಗಳು ಇವೆಯೋ ಲೆಕ್ಕವನ್ನು ಹಾಕಬಲ್ಲವರು ಯಾರು ? ಬೇರೆಬೇರೆಯ ಪ್ರಾಣಿಗಳಿಗೆ ಬೇರೆಬೇರೆಯ ಶಕ್ತಿಯ ಇಂದ್ರಿಯಗಳಿವೆ. ಮನುಷ್ಯನಲ್ಲಿ ಇಂದ್ರಿಯಪಾಟವವೂ ಇದೆ, ಇಂದ್ರಿಯಗಳಿಂದ ನೋಡಿದ್ದನ್ನು ಪರಿಶೀಲಿಸುವ ಶಕ್ತಿಯೂ ಇದೆ. ಇಂದ್ರಿಯಗಳು ಶಬ್ದ, ಸ್ಪರ್ಶ, ರೂಪ, ರಸ, ಗಂಧ - ಎಂಬ ಐದು ಬಗೆಯಯಲ್ಲಿ ವಿಷಯಗಳನ್ನು ತೋರಿಸುತ್ತಿವೆ. ಆದರೆ ಎಲ್ಲರಿಗೂ ಈ ವಿಷಯಗಳು ಒಂದೇ ಬಗೆಯಲ್ಲಿ ಕಾಣುತ್ತಿಲ್ಲ. ಸಾಮಾನ್ಯಜನರಿಗೆಕೂಡ ಈ ಜಗತ್ತು ಒಂದೇ ರೂಪದಿಂದ ಕಾಣುತ್ತಿಲ್ಲ ; ಅವರವರ ತಿಳಿವಳಿಕೆಯ ಅಂತಸ್ತಿಗೆ ತಕ್ಕಂತೆ, ಅವರವರ ಭಾವನೆಗೆ ತಕ್ಕಂತೆ ಒಂದೇ ಪದಾರ್ಥವು ಬೇರೆಬೇರೆಯಾಗಿ ಕಾಣುತ್ತಿರುತ್ತದೆ. ಇನ್ನು ವಿಜ್ಞಾನಶಾಸ್ತ್ರಜ್ಞರ ದೃಷ್ಟಿಗೆ ಕಾಣುವ ಜಗತ್ತು ಸಾಮಾನ್ಯರಿಗೆ ಕಾಣಿಸುವುದೇ ಇಲ್ಲ. ವಿಜ್ಞಾನಶಾಸ್ತ್ರಜ್ಞರಲ್ಲಿಯೂ ಶಕ್ತಿಶಾಸ್ತ್ರಜ್ಞನು ನೋಡುವ ಜಗತ್ತಿನ ಭಾಗವೇ ಬೇರೆ, ವಸ್ತುರಚನಾಶಾಸ್ತ್ರಜ್ಞನು ಕಾಣುವ ಜಗದ್ಭಾಗವೇ ಬೇರೆ. ಹೀಗೆ ತಿಳಿವಳಿಕೆಯ ಭೂಮಿಯೆಕನ್ನೂ ನೋಡುವಾತನ ಭಾವನೆಯ ಪ್ರಭೇದವನ್ನೂ ಲೆಕ್ಕಕ್ಕೆ ತೆಗೆದುಕೊಂಡರೆ ಇರುವ ಒಂದೇ ವಸ್ತು ಎಷ್ಟು ನಾನಾರೂಪದಿಂದ ಕಾಣುವದಕ್ಕೆ ಅವಕಾಶವಿದೆ!

ಇಂಥ ವಿಚಿತ್ರಜಗತ್ತನ್ನು ನೋಡುವ ಜನರು ಯಾವಯಾವ ಪ್ರಕಾರದಿಂದ ಇದನ್ನು ನೋಡುತ್ತಿರುವರೋ ಆಯಾ ಪ್ರಕಾರಕ್ಕೆ ತಕ್ಕಂತೆ ಬಗೆಬಗೆಯಾಗಿ ತೋರುತ್ತಿದ್ದರೂ ಒಬ್ಬನೇ ಪರಮಾತ್ಮನು ಇಷ್ಟು ರೂಪಗಳಿಂದ ಕಾಣಬರುತ್ತಾನೆಂಬ ಶಾಸ್ತ್ರದ ತಿಳಿವಳಿಕೆಯು ಇದ್ದವರಿಗೆ ಇದೊಂದು ಬಗೆಯ ಆನಂದವನ್ನುಂಟುಮಾಡುವ ವಿಚಿತ್ರವಸ್ತುಪ್ರದರ್ಶನಶಾಲೆಯಾಗುವದಕ್ಕೆ ಅವಕಾಶವಿದೆಯಷ್ಟೆ ? ಆದರೆ ಈ ಆನಂದಕ್ಕೆ ವಿಘ್ನವಾಗುವ ಒಂದು ಹೇತುವು ಪರಮಾರ್ಥವನ್ನರಿಯದ ಅಜ್ಞನಾದ ಪ್ರತಿಜೀವನಲ್ಲಿಯೂ ಇದ್ದುಕೊಂಡಿರುತ್ತದೆ. ಅದೇನೆಂದರೆ ಪ್ರತಿಯೊಬ್ಬ ಜೀವನೂ ಸ್ವಾಭಾವಿಕಾವಸ್ಥೆಯಲ್ಲಿ 'ನಾನು', 'ನಾನು' ಎಂದೇ ತನ್ನನ್ನು ವಿಂಗಡಿಸಿಕೊಂಡು ಅಭಿಮಾನಪಡುತ್ತಿದ್ದಾನೆ. ಮಿಕ್ಕ ಜೀವರನ್ನು 'ನೀನು' 'ಇವನು', 'ಬೇರೆಯವರು' - ಎಂದು ತನ್ನಿಂದ ಬೇರ್ಪಡಿಸಿಕೊಳ್ಳುತ್ತಿದ್ದಾನೆ. ಹೊರಗಿನ ವಿಷಯಗಳನ್ನು ನೋಡಿ ಆನಂದಪಡುವ ಹಕ್ಕು ತನಗೊಬ್ಬನಿಗೇ ಇರಬೇಕೆಂಬ ಹವಣಿಕೆಯು ಪ್ರತಿಯೊಬ್ಬ ಜೀವನಲ್ಲಿಯೂ ಇರುತ್ತದೆ. ಈ ಸುಖದಲ್ಲಿ ಮತ್ತೆ ಯಾರೂ ಭಾಗಿಗಳಾಗಬಾರದು ; ಅಥವಾ ಭಾಗಿಗಳಾಗಿದ್ದರೆ ನನ್ನ ಅನುಮತಿಯಿಂದಲೇ ಅವರು ಈ ವಿಷಯಗಳನ್ನು ಭೋಗಿಸಬೇಕು - ಎಂಬ ದುರಾಗ್ರಹವೂ ಇರುತ್ತದೆ. ನಿಜವಾಗಿ ನೋಡಿದರೆ ಶಾಸ್ತ್ರದಲ್ಲಿ

ಹೇಳಿರುವಂತೆ, ನಮ್ಮೆಲ್ಲರ ಆತ್ಮನೂ ಒಬ್ಬನೇ ; ಸರ್ವಪುರಗಳಲ್ಲಿಯೂ ಹೊಕ್ಕಿರುವವನು ಒಬ್ಬ ಪರಮಪುರುಷನೇ ಆಗಿರುತ್ತಿದ್ದರೂ ಈ ಗುಟ್ಟನ್ನು ಅರಿಯದೆ ಇರುವದೇ ಮನುಷ್ಯನ ದುಃಖಕ್ಕೆ ಕಾರಣವಾಗಿರುತ್ತದೆ. ಹೊರಗೆ ಒಂದು ಸುಂದರವಾದ ಹೂವನ್ನು ಕಂಡರೆ ಒಬ್ಬನಿಗೆ 'ಅದು ನನಗೆ ಇರಲಿ ! ' ಎಂದು ಅದನ್ನು ತನ್ನ ವಶಕ್ಕೆ ತೆಗೆದು ಕೊಳ್ಳುವ ಇಚ್ಛೆಯುಂಟಾಗುತ್ತದೆ ; ಇನ್ನೊಬ್ಬನಿಗೂ ಹೀಗೆಯೇ ಇಚ್ಛೆಯುಂಟಾದರೆ ಅವನೂ ಅದೇ ಹೂವನ್ನೇ ತಾನೂ ತೆಗೆದುಕೊಳ್ಳುವದಕ್ಕೆ ಹೊರಡುವನು. ಆಗ ಇಬ್ಬರಿಗೂ ಪೈಪೋಟಿಯುಂಟಾಗುವದು. ತನಗೆ ಸಿಕ್ಕಿತೆಂದು ಒಬ್ಬನು ಹಿಗ್ಗಿದರೆ, ಮತ್ತೊಬ್ಬನು 'ನನಗೆ ಸಿಗಲಿಲ್ಲವಲ್ಲ !' ಎಂದು ಕರುಬುವನು. ಮತ್ತೊಬ್ಬನು 'ನನ್ನ ಸ್ನೇಹಿತನಿಗೆ ಸಿಕ್ಕಿತಷ್ಟೆ ! ಆದ್ದರಿಂದ ಮತ್ತೊಬ್ಬನಿಗೆ ಅದು ದಕ್ಕದೆ ಇದ್ದುದ್ದು ಒಳ್ಳೆಯದಾಯಿತು !' ಎಂದುಕೊಳ್ಳುವನು. ಸಿಕ್ಕಿದವನ ಕಡೆಯವರಿಗೂ ಸಿಕ್ಕದೆ ಇರುವವನ ಕಡೆಯವರಿಗೂ ಒಬ್ಬರಲ್ಲೊಬ್ಬರಿಗೆ ದ್ವೇಷವುಂಟಾಗುವದು. ಹೀಗೆ ಹೊರಗಿನ ವಸ್ತುಗಳನ್ನು ನೋಡಿ ನಲಿಯುವದಕ್ಕೆ ಕಾಮ, ಕ್ರೋಧ,ಲೋಭ, ಮೋಹ, ಮದ, ಮಾತ್ಸರ್ಯ - ಮುಂತಾದ ಭಾವನೆಗಳು ಅಡ್ಡಬಂದು ಮನುಷ್ಯನಿಗೆ ಸ್ವರ್ಗವಾಗಿ ಕಾಣಬಹುದಾಗಿದ್ದ ಈ ಜಗತ್ತನ್ನೇ ನರಕವನ್ನಾಗಿ ಮಾಡಿಬಿಡುವ ಸಂಭವವಿದೆ. ಈ ವಿಘ್ನವನ್ನು ತೊಲಗಿಸಿ ಎಲ್ಲವೂ ಒಬ್ಬ ಪರಮಾತ್ಮನೇ, ಎಲ್ಲಾ ಪ್ರಾಣಿಗಳಲ್ಲಿಯೂ ಅವನೇ ಪ್ರವೇಶಿಸಿ ತೋರಿಕೊಳ್ಳುತ್ತಿದಾನೆ, ಎಲ್ಲರಿಗೂ ಈ ಜಗತ್ತಿನಲ್ಲಿ ಆನಂದಪಡುವದಕ್ಕೆ ಅವಕಾಶವಿದೆ - ಎಂಬ ತಿಳಿವಳಿಕೆಯನ್ನು ಕೊಡುವ ಅಧ್ಯಾತ್ಮವಿದ್ಯೆಯು ಲಭಿಸಿದರೆ ಜೀವನ ವ್ಯವಹಾರಕ್ಕೆ ಎಂಥ ಉತ್ತಮವಾದ ಸಾಧನವಾದೀತು !

## ೩. ಅಂತಃಕರಣ

(30-7-64)

ನಮ್ಮ ತಿಳಿವಳಿಕೆಗೆ ಇಂದ್ರಿಯಗಳು ಮೊದಲನೆಯ ಸಾಧನ. ಇವುಗಳ ಅರಿವನ್ನು 'ಮಾಯಾ' ಎಂದು ವೇದಾಂತದಲ್ಲಿ ಕರೆದಿರುತ್ತದೆ. ಮಾಯಾ ಎಂದದ್ದಕ್ಕೆ ಇಂದ್ರಿಯಗಳು ಏನನ್ನೂ ತಿಳಿಸಿಕೊಡುವದೇ ಇಲ್ಲವೆಂದೇನೂ ಅಭಿಪ್ರಾಯವಲ್ಲ . ಇಂದ್ರಿಯಗಳು ಪರಮಾರ್ಥತತ್ತ್ವವನ್ನು ಪರಿಚ್ಛೇದಗೊಳಿಸಿ, ರೂಪಾಂತರದಿಂದ ತಿಳಿಸುತ್ತವೆ. ವಸ್ತುವನ್ನು ಯಾವ ಬಣ್ಣದ ಕನ್ನಡಕದಿಂದ ನಾವು ನೋಡುತ್ತೇವೆಯೋ

ಅದೇ ಬಣ್ಣದ್ದು ಆ ವಸ್ತು - ಎಂದು ನಮಗೆ ತೋರುತ್ತದೆಯಲ್ಲವೆ ? ಆದರೆ ನಿಜವಾಗಿ ಬಣ್ಣವು ಕನ್ನಡಕಕ್ಕೆ ಸೇರಿದ್ದೇ ಹೊರತು ವಸ್ತುವಿನದಾಗಿರುವದಿಲ್ಲ . ಇದರಂತೆ ಒಂದೇ ಪರಮಾರ್ಥವಸ್ತುವನ್ನು ಇಂದ್ರಿಯಗಳ ಮೂಲಕ ನೋಡಿದಾಗ ಅದು ಹಲವು ಬಗೆಯಿಂದ ಪರಿಚ್ಛಿನ್ನವಾಗಿರುವಂತೆ ತೋರುತ್ತದೆ. ನಾವು ನೋಡುವವರು, ಕೇಳುವವರು, ಮೂಸುವವರು - ಎಂದು ಮುಂತಾಗಿ ನಮ್ಮ ಸ್ವರೂಪವನ್ನು ನಿಶ್ಚಯಿಸಬೇಕಾಗುತ್ತದೆ. ಆದರೆ ವೇದಾಂತಿಗಳ ದೃಷ್ಟಿಯಲ್ಲಿ 'ಈ ನಮ್ಮ ಆತ್ಮನೇ ಅಜನು, ಅಜರನು, ಅಮರನು, ಅಮೃತನು, ಅಭಯವಾದ ಬ್ರಹ್ಮವು' ಎಂದು ಹೇಳಿದ್ದಾಗಿದೆ. ಇಂದ್ರಿಯಗಳ ಹೇಳಿಕೆಗೆ ಈ ಅಭಿಪ್ರಾಯವು ವಿರುದ್ಧವಾಗಿ ತೋರುತ್ತದೆ. ಏಕೆಂದರೆ ವೇದಾಂತಿಗಳು ಕೂಡ ಹುಟ್ಟಿ, ಬೆಳೆದು , ಮುದುಕರಾಗಿ ಸಾಯುತ್ತಾರೆ - ಎಂದೇ ನಮ್ಮ ಇಂದ್ರಿಯಗಳು ಹೇಳುತ್ತಿವೆ. ಆದ್ದರಿಂದಲೇ ವೇದಾಂತಿಗಳು ಇಂದ್ರಿಯಗಳು ಅಧ್ಯಾತ್ಮವಿದ್ಯೆಗೆ ನೇರಾದ ಸಾಧನವಲ್ಲ , ಅವುಗಳು ನಮಗೆ ಉಂಟುಮಾಡಿಕೊಡುವ ತಿಳಿವಳಿಕೆಯು ಪರಮಾರ್ಥದೃಷ್ಟಿಯಿಂದ ಮಾಯೆ, ಅವಿದ್ಯೆಯಿಂದಾದದ್ದು - ಎನ್ನುತ್ತಿರುವರು. ಹಾಗಾದರೆ ಅಧ್ಯಾತ್ಮವಿದ್ಯೆಗೆ ಇಂದ್ರಿಯಗಳಿಗಿಂತಲೂ ಬೇರೊಂದು ಸಾಧನವಿದೆಯೆ ? ಎಂದರೆ ಇದೆ . ಅದೇ ಅಂತಃಕರಣವು . ಇಂದ್ರಿಯಗಳು ಹೊರಗಿನ ವಿಷಯಗಳನ್ನು ತಿಳಿಸುವದಕ್ಕೆ ಮಾತ್ರ ಸಾಧನವಾಗಿರುತ್ತವೆ ; ಎಂಥ ಸೂಕ್ಷ್ಮವಾದ ದುರ್ಬಿನನ್ನು ಕಂಡುಹಿಡಿದುಕೊಂಡರೂ ಅದೂ ಚಕ್ಷುರಿಂದ್ರಿಯಕ್ಕೇ ಸಹಾಯಕವಾಗುತ್ತದೆಯೇ ಹೊರತು ನಮ್ಮ ಒಳಗಿನ ರೂಪವನ್ನು ನೋಡುವದಕ್ಕೆ ಅದರಿಂದ ಎಳ್ಳಷ್ಟೂ ಸಹಾಯವಾಗದು. ಹೀಗೆಯೇ ಮಿಕ್ಕ ಇಂದ್ರಿಯಗಳನ್ನೂ ಅವಕ್ಕೆ ಸಾಧನವಾಗಿ ಮನುಷ್ಯನು ಕಂಡು ಹಿಡಿದುಕೊಂಡಿರುವ ಯಂತ್ರೋಪಕರಣಗಳನ್ನೂ ಅರಿಯಬೇಕು. ಇಂದ್ರಿಯಗಳು ಬಹಿಃಕರಣಗಳು ; ಅವುಗಳಲ್ಲಿ ಪ್ರತಿಯೊಂದೂ ಒಂದೊಂದು ವಿಶೇಷವಿಷಯವನ್ನು ತಿಳಿಸುವ ಅಸಾಧಾರಣ ಸಾಧನವಾಗಿರುತ್ತದೆ. ಆದರೆ ಇವುಗಳಿಗೆಲ್ಲ ಸಾಧಾರಣವಾಗಿ ಸಹಾಯಮಾಡುವ ಒಳಗಿನ ಸಾಧನವೊಂದಿದೆ ; ಅದೇ **ಅಂತಃಕರಣ ಅಥವಾ ಮನಸ್ಸು.**

ಭೌತಿಕಶಾಸ್ತ್ರಜ್ಞರೂ ಮನಸ್ಸನ್ನು ಕುರಿತು ಒಂದು ಶಾಸ್ತ್ರವನ್ನು ಏರ್ಪಡಿಸಿ ಕೊಂಡಿರುತ್ತಾರೆ. ಅದಕ್ಕೆ **ಮನಃಶಾಸ್ತ್ರ** ( Psychology) ಎಂದು ಹೆಸರು. ಆದರೆ ಆ ಶಾಸ್ತ್ರದಲ್ಲಿ ವಿಚಾರಕ್ಕೆ ವಿಷಯವಾಗಿರುವದು ಅನುಮಾನಪ್ರಮಾಣದಿಂದ ಕಲ್ಪಿಸ ಬೇಕಾಗಿರುವ ಮತ್ತೊಬ್ಬರ ಮನಸ್ಸು . ರಾಜಕಾರಣದಲ್ಲಿ ತೊಡಗಿರುವವರು ಜನ ಸಾಮಾನ್ಯರ ಮನಸ್ಸನ್ನು ಪರಿಶೀಲಿಸಿ, ಅದರ ಮೇಲೆ ಪರಿಣಾಮವಾಗುವಂತೆ ತಮ್ಮ ಪ್ರಭಾವವನ್ನು ಜನರಮೇಲೆ ಬೀರುತ್ತಾರೆ. ವಿದ್ಯಾಶಾಲೆಗಳ ಶಿಕ್ಷಕರು ಹುಡುಗರ

ಮನಸ್ಸಿನ ಸ್ಥಿತಿಯನ್ನು ಅಭ್ಯಾಸಮಾಡಿ ಅವರಿಗೆ ವಿಷಯವನ್ನು ಬೋಧಿಸುವ ಸಾಧನಗಳನ್ನು ಕಲ್ಪಿಸಿಕೊಳ್ಳುತ್ತಾರೆ. ಹೀಗೆಯೇ ಇಂ ಥ ಮನಸ್ಸಿನ ಸ್ವಭಾವದವರಿಗೆ ಂಥ ಚಿಕಿತ್ಸೆಯನ್ನು ಮಾಡಿ ರೋಗವನ್ನು ಪರಿಹಾರಮಾಡಬಹುದು ಎಂದು ಮನೋವಿಶ್ಲೇಷಣಕಲೆಯನ್ನು ಕಲಿತ ವೈದ್ಯರು ಆಯಾ ಸನ್ನಿವೇಶಕ್ಕೆ ತಕ್ಕಂತೆ ವರ್ತಿಸುತ್ತಾರೆ. ಈ ಮನಃಶಾಸ್ತ್ರವು ಆಧಿಭೌತಿಕವಿದ್ಯೆಯೇ ಹೊರತು ಅಧ್ಯಾತ್ಮ ವೆನಿಸಲಾರದು. ಈಗ ನಾವು ಹೇಳುವ ಮನಸ್ಸೆಂಬುದು ಆಯಾ ಜಿಜ್ಞಾಸುವಿಗೇ ಸೇರಿದ್ದು. 'ಇದು ನನ್ನ ಮನಸ್ಸು' ಎಂಬುದು ಅವನವನಿಗೇ ನೇರಾಗಿ ಗೊತ್ತಾಗಿಬಿಡುತ್ತದೆ. ಹೊರಗಿನ ಕರಣಗಳಾದ ಇಂದ್ರಿಯಗಳು ನಮಗೆ ಹೊರಗಿನ ವಿಷಯಗಳಾದ ಶಬ್ದಸ್ಪರ್ಶಾದಿಗಳ ವಿಶೇಷಜ್ಞಾನವನ್ನು ಉಂಟುಮಾಡುತ್ತಿರುವಲ್ಲಿ ಒಳಗಿನ ಮನಸ್ಸು ಅವುಗಳಿಗೆ ಆಯಾ ಕೆಲಸವನ್ನು ಮಾಡುವದಕ್ಕೆ ಒತ್ತಾಸೆಯನ್ನು ಕೊಡುತ್ತದೆ. ಆದ್ದರಿಂದಲೇ ನಾವು ಒಂದೊಂದು ಇಂದ್ರಿಯವು ತನ್ನ ವಿಷಯವನ್ನು ತಿಳಿಯಿಸುತ್ತಿರುವಾಗಲೇ ಇನ್ನೊಂದು ಇಂದ್ರಿಯದಿಂದ ಕೆಲಸ ಮಾಡುವದಕ್ಕೆ ಆಗುವದಿಲ ; ಆದ್ದರಿಂದಲೇ ಒಂದೇ ಕಾಲದಲ್ಲಿ ಅನೇಕ ಜ್ಞಾನಗಳುಂಟಾಗದೆ ಇರುವದೇ ನಮಗೆ ಮನಸ್ಸು ಇದೆ ಎಂಬುದಕ್ಕೆ ಒಂದು ಗುರುತು ಎಂದು ನೈಯಾಯಿಕರು ಹೇಳುತ್ತಾರೆ. ಎರಡೂ ಬಗೆಯ ಇಂದ್ರಿಯಗಳಿಗೆ ನೆರವಾಗುತ್ತಿರುವದರಿಂದಲೇ ಮನಸ್ಸು ಉಭಯೇಂದ್ರಿಯ ಎಂದರೆ ಜ್ಞಾನೇಂದ್ರಿಯವೂ ಕರ್ಮೇಂದ್ರಿಯವೂ ಆಗಿದೆ ಎಂದು ಶಾಸ್ತ್ರಾಂತರದವರು ಹೇಳುತ್ತಾರೆ. ಆದರೆ ಮತ್ತೊಬ್ಬರ ಮನಸ್ಸನ್ನು ಅರಿತುಕೊಳ್ಳಬೇಕಾಗಿರುವಂತೆ ನಮ್ಮ ಮನಸ್ಸನ್ನು ಅನುಮಾನಪ್ರಮಾಣದಿಂದ ಊಹಿಸಿ ಅರಿತುಕೊಳ್ಳಬೇಕಾದದ್ದೇನೂ ಇರುವದಿಲ್ಲ. 'ನನ್ನ ಮನಸ್ಸು ಬೇರೆಯ ಕಡೆಗೆ ಹೋಗಿತ್ತು. ಆದ್ದರಿಂದ ಯಾರು ಬಂದುಹೋದರೋ ಗೊತ್ತಾಗಲಿಲ್ಲ' ಅಥವಾ 'ಮನಸ್ಸು ಬೇರೆಯ ಕಡೆ ಇದ್ದದ್ದರಿಂದ ನೀವು ಹೇಳಿದ್ದು ಸರಿಯಾಗಿ ಕೇಳಿಸಲಿಲ್ಲ' ಎಂದು ನಾವು ವ್ಯವಹರಿಸುತ್ತೇವಲ್ಲವೆ ? ಇದರಿಂದ ಮನಸ್ಸು ಎಲ್ಲಿಯೋ ಹೋಗಿದ್ದದ್ದು , ಈಗ ತನ್ನ ಕೆಲಸಕ್ಕೆ ಸಿದ್ಧವಾಗಿರುವದು – ಇವೆರಡೂ ನಮಗೆ ನೇರಾಗಿಯೇ ಅರಿಯಬರುತ್ತದೆ ಎಂದಾಯಿತು.

ಈ ಅಂತಃಕರಣವು ಒಳಗೇ ಇದ್ದುಕೊಂಡು ಇಂದ್ರಿಯಗಳು ತನಗೆ ಕೊಟ್ಟ ವರದಿಯನ್ನು ಹೊಂದುಗೆಮಾಡಿ ಇಂಥಿಂಥದ್ದೆಂದು ಗೊತ್ತುಮಾಡುವದರಿಂದ ಇಂದ್ರಿಯಗಳಿಗೆ ಸಹಾಯಮಾಡಬಲ್ಲ ಸಾಧನಮಾತ್ರವೆಂದು ತಟ್ಟನೆ ತೋರಬಹುದು. ಆದರೆ ಚೆನ್ನಾಗಿ ನೋಡಿದರೆ ಈ ಮನಸ್ಸು ತನಗೆ ವಿಷಯವಾಗಿರುವ ಸುಖದುಃಖಗಳನ್ನು ಬಾಹ್ಯೇಂದ್ರಿಯಗಳ ನೆರವಿಲ್ಲದೆಯೇ ಅರಿತುಕೊಳ್ಳುತ್ತಿರುವದರಿಂದ ಅದನ್ನು

ಅಂತರಿಂದ್ರಿಯವೆಂದೂ ಕರೆಯಬಹುದಾಗಿದೆ. ಆದ್ದರಿಂದಲೇ ಇಂದ್ರಿಯಗಳು ಹನ್ನೊಂದು - ಎಂಬ ಪ್ರವಾದವು ವೇದಾಂತಿಗಳಲ್ಲಿ ಬಂದಿರುತ್ತದೆ. ಇನ್ನೊಂದು ವಿಷಯ. ಮನಸ್ಸು ಹೊರಗಿನ ಇಂದ್ರಿಯಗಳು ಕೊಟ್ಟ ವಿಷಯಗಳನ್ನು ಕುರಿತು ವಿಕಲ್ಪಿಸುವದೇ ಅಲ್ಲದೆ ತಾನೇ ಎಷ್ಟೋ ದೂರದಲ್ಲಿರುವ, ಅಥವಾ ಎಷ್ಟೋ ಕಾಲವ್ಯವಹಿತವಾದ, ವಸ್ತುವನ್ನು ಕುರಿತೂ ವಿಚಾರಮಾಡಬಲ್ಲದ್ದಾಗಿರುತ್ತದೆ.

ಅಂತಃಕರಣವು ಏನನ್ನಾದರೂ ಸಂಕಲ್ಪಿಸುವದೂ ಅಥವಾ ಇಂಥಿಂಥದ್ದೆಂದು ವಿಕಲ್ಪಿಸುವದು - ಎಂಬ ಕಾರಣದಿಂದ **ಮನಸ್ಸು** , ಇಂಥದ್ದೇ ಅಥವಾ ಇಂಥದ್ದನ್ನು ಮಾಡುವೆನು - ಎಂದು ನಿಶ್ಚಯಿಸುವದರಿಂದ **ಬುದ್ಧಿ** , ಸಾಮಾನ್ಯವಾಗಿ ಅನುಸಂಧಾನ ಮಾಡುವದರಿಂದ **ಚಿತ್ತ** , ಅಭಿಮಾನವುಳ್ಳದ್ದಾಗುವದರಿಂದ **ಅಹಂಕಾರ** - ಎಂದು ನಾಲ್ಕು ವಿಶೇಷನಾಮಗಳುಳ್ಳದ್ದಾಗಿ ವ್ಯವಹೃತವಾಗುತ್ತದೆ. ಅಂತೂ ಬಹಿರಿಂದ್ರಿಯಗಳಿಗೆ ಒತ್ತಾಸೆ ಮಾಡುವದು, ಅಥವಾ ಬಹಿರಿಂದ್ರಿಯಗಳು ಒಪ್ಪಿಸಿದ್ದನ್ನು ವಿಕಲ್ಪಿಸಿ ನಿಶ್ಚಯಿಸುವದು - ಮುಂತಾದ ಕಾರ್ಯವನ್ನು ಒಳಗಿದ್ದುಕೊಂಡೇ ಮಾಡುವದರಿಂದಲೂ, ತನ್ನೊಳಗೇ ಆಗುವ ಸುಖದುಃಖಗಳನ್ನು ಅನುಭವಿಸುವ ಸಾಧನವಾಗಿರುವದರಿಂದಲೂ ಇದು **ಅಂತಃಕರಣ** ಎನ್ನಿಸುತ್ತದೆ.

ಈ ರೀತಿಯಲ್ಲಿ ಇಂದ್ರಿಯಗಳಿಗಿಂತಲೂ ನಮ್ಮೊಳಗೆ ಇದ್ದುಕೊಂಡು ಅರಿವಿಗೆ ಸಾಧನವಾಗಿರುವದರಿಂದ ಇದರ ವಿಚಾರಕ್ಕೆ ಮೊದಲು ಮಾಡಿದರೆ ಅಧ್ಯಾತ್ಮವಿದ್ಯೆಯ ಭವನದ ಹೊಸ್ತಿಲನ್ನು ಸೇರಿದಂತೆ ಆಯಿತು. ನಮ್ಮನಮ್ಮ ಮನಸ್ಸನ್ನೇ ವಿಚಾರ **ಮಾಡುವದು ಅಧ್ಯಾತ್ಮವಿದ್ಯೆಗೆ ಮೊದಲನೆಯ ಮೆಟ್ಟಿಲು.** ಆದ್ದರಿಂದ ತನ್ನ ಮನಸ್ಸನ್ನು ತಾನು ಪರೀಕ್ಷೆಮಾಡಿ ನೋಡಿಕೊಳ್ಳುವ ಅಭ್ಯಾಸವನ್ನು ಮಾಡುವವರು ಅಧ್ಯಾತ್ಮವಿದ್ಯೆಗೆ ಅಧಿಕಾರಿಗಳಾಗುವರು. ಅಂತಃಕರಣವು ಯಾವಾಗಲೂ ತಾನು ಇದ್ದಂತೆಯೇ ಇರುವದಿಲ್ಲ ; ಅದರಲ್ಲಿ ಎಷ್ಟೋ ಅಲೆಗಳು ಎದ್ದುಕೊಳ್ಳುತ್ತಿರುವವು. ಇವುಗಳನ್ನು ಮನಸ್ಸಿನ ಪ್ರಚಾರಗಳೆಂದೂ ವೃತ್ತಿಗಳೆಂದೂ ಕರೆಯುತ್ತಾರೆ. ಶ್ರುತಿಯಲ್ಲಿ ಕೆಲವು ಇಂಥ ವೃತ್ತಿಗಳನ್ನು ಉಪಲಕ್ಷಣವಾಗಿ ಹೇಳಿರುತ್ತದೆ.

> **ಕಾಮಃ ಸಂಕಲ್ಪೋ ವಿಚಿಕಿತ್ಸಾ ಶ್ರದ್ಧಾಽಶ್ರದ್ಧಾ ಧೃತಿರಧೃತಿರ್ಹ್ರೀ ಧೀರ್ಭೀರಿತ್ಯೇತತ್ ಸರ್ವಂ ಮನ ಏವ ತಸ್ಮಾದಪಿ ಪೃಷ್ಠತ ಉಪಸ್ಪೃಷ್ಟೋ ಮನಸಾ ವಿಜಾನಾತಿ ॥** ಬೃ. ೧-೫-೩.

ಕಾಮ, ವಿಷಯವನ್ನು ಸಂಕಲ್ಪಿಸುವದು, ಸಂಶಯ, ಕರ್ಮದೇವತಾದಿಗಳಲ್ಲಿ ಶ್ರದ್ಧೆ, ಅಶ್ರದ್ಧೆ (ನಾಸ್ತಿಕ್ಯಬುದ್ಧಿ), ಧೃತಿ (ದೇಹಾದಿಗಳು ಕುಸಿಯದಂತೆ ಹಿಡಿದೆತ್ತುವ

ಶಕ್ತಿ), ಅಧೃತಿ , ನಾಚಿಕೆ , ಅರಿವು , ಅಂಜಿಕೆ - ಇವೇ ಮುಂತಾದವುಗಳೆಲ್ಲವೂ ಮನಸ್ಸೇ. ಹಿಂದುಗಡೆಯಲ್ಲಿ ಯಾರಾದರೂ ಮುಟ್ಟಿದರೂ 'ಕೈಯಿಂದ ಅಥವಾ ಕಾಲಿನಿಂದ ಮುಟ್ಟಿದನು' ಎಂದು ಅರಿತುಕೊಳ್ಳುತ್ತಾರಷ್ಟೆ ? ಅದೂ ಈ ಮನಸ್ಸಿನ ಬಲದಿಂದಲೇ. ಹೀಗೆ ಮನಸ್ಸು ಬಗೆಬಗೆಯ ವೃತ್ತಿಗಳನ್ನು ಪಡೆಯುತ್ತಿರುವದು ನಮಗೆ ಅನುಭವಕ್ಕೆ ಬರುತ್ತಿರುವದರಿಂದಲೇ ನಾವು ಅದು ನಮ್ಮೊಳಗೆ ಇದೆ ಎಂದು ಅರಿತುಕೊಳ್ಳುವದಕ್ಕೆ ಆಗುತ್ತಿದೆ.

ಇಂದ್ರಿಯಗಳು ದ್ವಾರಪಾಲಕರಂತೆ ಇರುತ್ತವೆ. ಏಕೆಂದರೆ ಅವುಗಳು ತೋರಿಸುವ ವಿಷಯಗಳಲ್ಲಿಯೇ ನಾವು ನೆಟ್ಟಮನಸ್ಸುಳ್ಳವರಾಗಿರುವವರೆಗೂ ನಮಗೆ ಒಳಕ್ಕೆ ಪ್ರವೇಶವಿರದಂತೆ ಅವು ನಮ್ಮನ್ನು ತಡೆಗಟ್ಟುತ್ತಿರುವವು. ಮನಸ್ಸು ಒಳಗಿರುವ ದಾದರೂ ಅದಕ್ಕೆ ಸಾಮಾನ್ಯವಾಗಿ ಹೊರಗಿನ ವಿಷಯಗಳಿಂದಲೇ ಅರಿವು ಆಗುತ್ತಿರುತ್ತದೆ. ಅದರಿಂದಲೇ ಸುಖದುಃಖಗಳೂ ಆಗುತ್ತಿರುವದರಿಂದ ಇಲ್ಲಿಯವರೆಗೂ ನಮ್ಮ ಮನಸ್ಸು ಕೂಡ ಅಂತಃಕರಣ (ಒಳಗಿನ ಕರಣ) ಎಂಬ ಹೆಸರಿಗೆ ಅನ್ವರ್ಥವಾಗಿ ತಕ್ಕದ್ದಾಗಿರುವದಿಲ್ಲ. ಹೊರಗಿನ ಅರಿವುಗಳಿಂದಲೇ ಮನಸ್ಸು ಚಂಚಲವಾಗಿರುತ್ತದೆ, ಅದರಲ್ಲಿ ಒಂದಾಗುತ್ತಲೊಂದು ವೃತ್ತಿಯು ಎದ್ದುಕೊಳ್ಳುತ್ತಲೇ ಇರುತ್ತದೆ. ನಮಗೆ ಗಾಢನಿದ್ರೆ ಬರುವವರೆಗೂ ಮನಸ್ಸು ಹೀಗೆ ವೃತ್ತಿಗಳಿಂದ ಹೊಯ್ದಾಡುತ್ತಲೇ ಇರುತ್ತದೆ. ವೃತ್ತಿರೂಪವಾದ ಅರಿವುಗಳು ನಮ್ಮನ್ನು ಕಾಡುತ್ತಿರುವವರೆಗೆ ನಮಗೆ ತನಿನಿದ್ರೆಯು ಬರುವ ಸಂಭವವೇ ಇರುವದಿಲ್ಲ . ಹೊರಗಿನ ಅರಿವಿನ ಹಂಗಿಲ್ಲದೆಯೇ ಒಳಗಿನ ಆತ್ಮನನ್ನು ಅರಿಯುವದಕ್ಕೆ ಅದು ಸಿದ್ಧವಾದರೇ ಅದಕ್ಕೆ 'ಅಂತಃಕರಣ'ವೆಂಬ ಹೆಸರು ಸಾರ್ಥಕವಾಗುತ್ತದೆ. ಆಗಲೇ ಅದು ಅಧ್ಯಾತ್ಮವಿದ್ಯೆಗೆ ಸಜ್ಜಾಗುತ್ತದೆ . ಇದು ಹೇಗೆಂಬುದನ್ನು ಇನ್ನು ವಿಚಾರಮಾಡಬೇಕಾಗಿದೆ.

## ೪. ಜ್ಞಾನಸಾಧನಗಳು

(1-8-64)

ನಾವುಗಳು ಅಂತಃಕರಣವನ್ನು ಬಲುಮಟ್ಟಿಗೆ ಬಹಿಃಕರಣವಾಗಿಯೇ ಉಪ ಯೋಗಿಸುತ್ತಿರುತ್ತೇವೆ. ಆದ್ದರಿಂದಲೇ ನಮಗೆ ನಮ್ಮ ನಿಜವಾದ ಸ್ವರೂಪವನ್ನು ಅರಿತುಕೊಳ್ಳುವದಕ್ಕೆ ಆಗದೆ ಇರುತ್ತದೆ ; ಈಗ್ಗೆ ನಮ್ಮ ಪಾಲಿಗೆ ಅಂತಃಕರಣವೇ ನಮ್ಮ ಆತ್ಮನಾಗಿಬಿಟ್ಟಿರುತ್ತದೆ. ನಮ್ಮ ನಿಜವಾದ ಸ್ವರೂಪವನ್ನು ತಿಳಿಯದೆ ವಿಚಾರಶಕ್ತಿಯಿಲ್ಲದ

ಪಶ್ವಾದಿಗಳಂತೆಯೇ ನಾವು ವ್ಯವಹರಿಸುತ್ತಿರುತ್ತೇವೆ. ನಮ್ಮ ವ್ಯವಹಾರವೆಲ್ಲ ಅವಿವೇಕ ಪುರಃಸರವಾಗಿಯೇ ಇದೆ ಎಂಬುದನ್ನು ತೋರಿಸುವದಕ್ಕಾಗಿ ಶಂಕರಭಗವತ್ಪಾದ ರವರು ಈ ಪಶ್ವಾದಿವ್ಯವಹಾರವನ್ನೇ ಉದಾಹರಿಸಿರುತ್ತಾರೆ. 'ಹೇಗೆ ಪಶ್ವಾದಿಗಳು, ಕೈಯಲ್ಲಿ ದೊಣ್ಣೆಯನ್ನು ಎತ್ತಿಹಿಡಿದುಕೊಂಡು ತಮ್ಮೆದುರಿಗೇ ಬರುತ್ತಿರುವ ಮನುಷ್ಯನನ್ನು ಕಂಡರೆ ನನ್ನನ್ನು ಹೊಡೆದಾನೆಂದು ಓಡುವದಕ್ಕೆ ಆರಂಭಿಸುವವೋ, ಹಸಿರುಹುಲ್ಲನ್ನು ಕೈಯಲ್ಲಿ ಹಿಡಿದುಕೊಂಡಿರುವವನನ್ನು ಕಂಡಾಗ ಅವನ ಕಡೆಗೇ ಬರುವವೋ, ಹೀಗೆಯೇ ವಿವೇಕಿಗಳೆನಿಸಿಕೊಂಡಿರುವ ಮನುಷ್ಯರೂ ಕಣ್ಣುಕೆಂಪಗೆ ಮಾಡಿಕೊಂಡು ಕೂಗುತ್ತಾ ಕೈಯಲ್ಲಿ ಕತ್ತಿಯನ್ನು ಎತ್ತಿಹಿಡಿದುಕೊಂಡು ತಮ್ಮ ಕಡೆಗೆ ಬರುತಿರುವವರನ್ನು ಕಂಡರೆ ಹಿಂಜರಿಯುತ್ತಾರೆ. ಅದಕ್ಕೆ ವಿರುದ್ಧವಾದ ವರ್ತನೆ ಯುಳ್ಳವರ ಕಡೆಗೆ ಧಾವಿಸುತ್ತಾರೆ. ಆದ್ದರಿಂದ ಪಶ್ವಾದಿಗಳಂತೆಯೇ ಮನುಷ್ಯರ ವ್ಯವಹಾರವೂ ಅವಿವೇಕಪುರಃಸರವೇ ಎಂದಾಯಿತು' – ಎಂದು ಆಚಾರ್ಯರು ತಮ್ಮ ಅಧ್ಯಾಸಭಾಷ್ಯದಲ್ಲಿ ಬರೆದಿರುತ್ತಾರೆ. ಇಂದ್ರಿಯಗಳ ಒತ್ತಾಸೆಗೆ ನಿಂತಿರುವ ಮನಸ್ಸಿನ ಸ್ಥಿತಿಯಿದು.

ಅಂತಃಕರಣವು ತನ್ನೊಳಗೇ ಏನನ್ನಾದರೂ ಚಿಂತಿಸುತ್ತಿರುವಾಗಲೂ ಹೀಗೆಯೇ , ಹೊರಗಿನ ವಿಷಯಗಳನ್ನು ಕುರಿತೇ ಏನನ್ನಾದರೂ ಸಂಕಲ್ಪಿಸಿಕೊಳ್ಳುತ್ತಾ ಇರುವದೇ ಅದರ ಹಾಡು. ಹೊರಗಿನದನ್ನು ಯಾವದನ್ನೂ ಚಿಂತಿಸಬಾರದು ಎಂದು ಯಾರಾದರೂ ಉಪದೇಶಿಸಿದರೆ, ಅಥವಾ ನಾವೇ ಪ್ರಯತ್ನಿಸಿದರೆ, ಆಗ ಅದು ಇನ್ನಷ್ಟು ಬಲವಾಗಿ ವಿಕ್ಷಿಪ್ತವಾಗಿ ಕುಣಿದಾಡುತ್ತಿರುತ್ತದೆ. ಈ ಬಗೆಯ ಅಂತಃಕರಣವನ್ನೇ 'ನಾವು' ಎಂದು ಭಾವಿಸಿಕೊಂಡಿರುವದೇ ಜನರ ಸಾಧಾರಣವಾದ ವ್ಯವಹಾರವು. ಇದನ್ನು ಮೀರಿ ನಮ್ಮ ಒಳಗಿನ ತತ್ತ್ವವನ್ನು ಕಂಡುಹಿಡಿಯುವದಕ್ಕೆ ಮಾಡುವ ಪ್ರಯತ್ನವೇ ಅಧ್ಯಾತ್ಮವಿದ್ಯೆ.

ಅಧ್ಯಾತ್ಮವಿದ್ಯೆಗೆ ಮನಸ್ಸನ್ನು ಬಳಸಿಕೊಳ್ಳುವ ಬಗೆಯನ್ನು ಬೃಹದಾರಣ್ಯ-ಕೋಪನಿಷತ್ತಿನಲ್ಲಿ ಹೀಗೆ ತಿಳಿಸಿಕೊಟ್ಟಿದೆ : ಒಮ್ಮೆ ಜನಕಮಹಾರಾಜನು ಯಾಜ್ಞವಲ್ಕ್ಯರನ್ನು ಕುರಿತು ಒಂದು ಪ್ರಶ್ನೆಯನ್ನು ಮಾಡಿದನು. ಹಿಂದಕ್ಕೆ ಯಾಜ್ಞವಲ್ಕ್ಯರು ಆ ರಾಜನಿಗೆ ಕಾಮಪ್ರಶ್ನೆಯ (ಇಚ್ಛೆ ಬಂದಂತೆ ಪ್ರಶ್ನೆಮಾಡುವ) ವರವನ್ನು ಕೊಟ್ಟಿದ್ದರಂತೆ. ಅದನ್ನು ಉಪಯೋಗಿಸಿಕೊಂಡು 'ಯಾಜ್ಞವಲ್ಕ್ಯರೆ, ಈ ಶರೀರಕರಣಸಂಘಾತಕ್ಕೆ ಬೆಳಕು ಯಾವದು ? ಯಾವದರ ನೆರವಿನಿಂದ ನಾವು ವ್ಯವಹರಿಸುತ್ತಿದೇವೆ ?' ಎಂದು ಅವನು ಕೇಳಿಕೊಂಡನು . ಅದಕ್ಕೆ ಯಾಜ್ಞವಲ್ಕ್ಯರು

'ಸೂರ್ಯನೇ ನಮಗೆ ಬೆಳಕು, ಏಕೆಂದರೆ ಅದರ ನೆರವಿನಿಂದಲೇ ಮನುಷ್ಯನು ಕುಳಿತುಕೊಳ್ಳುವದು, ಎಲ್ಲಿಗಾದರೂ ಹೋಗುವದು, ಕೆಲಸವನ್ನು ಮಾಡುವದು, ಹಿಂತಿರುಗುವದು – ಈ ಬಗೆಯ ಎಲ್ಲಾ ಕೆಲಸಗಳನ್ನೂ ಮಾಡುತ್ತಾನೆ' ಎಂದು ಉತ್ತರವನನು ಕೊಟ್ಟರು. ಯಾಜ್ಞವಲ್ಕ್ಯರಿಗೂ ಜನಕನಿಗೂ ಮುಂದಕ್ಕೆ ಹೀಗೆ ಸಂಭಾಷಣೆಯಾಯಿತು : 'ಸೂರ್ಯನು ಮುಳುಗಿದಾಗಲೋ ?' 'ಚಂದ್ರನೇ ಬೆಳಕು', 'ಚಂದ್ರನೂ ಮುಳುಗಿದಾಗ ? ', 'ಬೆಂಕಿಯೇ ಬೆಳಕು ', 'ಅದೂ ಆರಿಹೋದರೊ ?' 'ಶಬ್ದವೇ ಬೆಳಕು'; ಹೊರಗೆ ಯಾರಾದರೂ ಮಾತನಾಡುವಾಗ ಅಥವಾ ನಾಯಿಬೊಗಳುವದು ಮುಂತಾದದ್ದು ಕೇಳಿದಾಗ ಆ ಕಡೆಗೆ ಹೋಗುತ್ತಾನೆ'. ಈ ಸಂಭಾಷಣೆಯಲ್ಲಿ ಮನುಷ್ಯನು ತನ್ನ ಶರೀರೇಂದ್ರಿಯಗಳಿಗಿಂತ ವ್ಯತಿರಿಕ್ತವಾದ ಯಾವದೋ ಒಂದು ಬೆಳಕನ್ನು ಬಳಸಿಕೊಂಡೇ ವ್ಯವಹರಿಸುತ್ತಾನೆ – ಎಂಬುದನ್ನು ಸ್ಪಷ್ಟಪಡಿಸಿರುತ್ತದೆ. ಹೊರಗಿನ ಯಾವ ಸಹಾಯವೂ ಇಲ್ಲದಿರುವಾಗಲೂ ನಾವು ವ್ಯವಹರಿಸುತ್ತೇವಷ್ಟೆ? ಆಗ ನಮಗೆ ಸಹಾಯಕವಾಗಿರುವ ಬೆಳಕು ಯಾವುದು ? – ಎಂಬ ಪ್ರಶ್ನೆಗೆ ಪೀಠಿಕೆಯಿದು. ಹೊರಗೆ ನಾವು ಸೂರ್ಯಾದಿಗಳ ಬೆಳಕಿನಲ್ಲಿಯೇ ವ್ಯವಹರಿಸುತ್ತಿದ್ದರೂ ಅವುಗಳನ್ನು ಲೆಕ್ಕಕ್ಕೆ ತಾರದೆ ಇರುವಂತೆಯೇ ನಮ್ಮ ಆಂತರಿಕವ್ಯವಹಾರಕ್ಕೂ ಸಹಾಯಕವಾಗಿ ಯಾವದೋ ಒಂದು ಬೆಳಕು ಇದ್ದರೂ ಅದನ್ನು ಕಾಣದೆ ವ್ಯವಹರಿಸುತ್ತಿದೇವೆ ಎಂದಾಯಿತು. ಆದ್ದರಿಂದ ಆ ಬೆಳಕು ಏತರದು?– ಎಂದು ಜನಕನು ಕೇಳಿರುತ್ತಾನೆ. ಇದೇ ಅಧ್ಯಾತ್ಮವಿದ್ಯೆಗೆ ಮನಸ್ಸನ್ನು ಉಪಯೋಗಿಸಿಕೊಳ್ಳುವ ರೀತಿ.

ಈಗ ಯಾಜ್ಞವಲ್ಕ್ಯರು ಕೊಟ್ಟ ಕೊನೆಯ ಉತ್ತರವನ್ನು ಕೇಳೋಣ :

**ಆತ್ಮೈವಾಸ್ಯ ಜ್ಯೋತಿರ್ಭವತೀತ್ಯಾತ್ಮನೈವಾಯಂ ಜ್ಯೋತಿಷಾಽಽಸ್ತೇ, ಪಲ್ಯಯತೇ ಕರ್ಮ ಕುರುತೇ ವಿಪಲ್ಯೇತೀತಿ ॥ ಕತಮ ಆತ್ಮೇತಿ ಯೋಽಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯನ್ತರ್ಜ್ಯೋತಿಃ ಪುರುಷಃ ॥**

ಬೃ. ೪–೩–೬ , ೭

'ಆತ್ಮನೇ ಈ ಪುರುಷನಿಗೆ ಜ್ಯೋತಿಯು. ಆತ್ಮನ ಬೆಳಕಿನಿಂದಲೇ ಕುಳಿತಿರುತ್ತಾನೆ, ಹೋಗುತ್ತಾನೆ, ಕೆಲಸವನ್ನು ಮಾಡುತ್ತಾನೆ, ಹಿಂತಿರುಗುತ್ತಾನೆ,' 'ಆತ್ಮನೆಂದರೆ ಯಾರು?', 'ಈ ಪ್ರಾಣಗಳ ನಡುವೆ ವಿಜ್ಞಾನಮಯನಾಗಿರುವ, ಹೃದಯದ ಒಳಗೆ ಇರುವ ಜ್ಯೋತಿಯಾದ ಪುರುಷನಿರುವನಲ್ಲ, ಅವನೇ ಆತ್ಮನು'. ಯಾವ ಹೊರಗಿನ ಬೆಳಕೂ ಇಲ್ಲದಿದ್ದರೂ ನಮ್ಮೊಳಗಿನ ಆತ್ಮನೆಂಬ ಬೆಳಕು ಇದ್ದೇ ಇರುತ್ತದೆ. ಹೊರಗಿನ

ಬೆಳಕುಗಳಿಂದ ನಾವು ವ್ಯವಹರಿಸುತ್ತೇವೆಂದು ಬಗೆಯುವಾಗಲೂ ನಿಜವಾಗಿ ಈ ಆತ್ಮನ ಬೆಳಕಿನಿಂದಲೇ ನಾವು ವ್ಯವಹರಿಸುತ್ತಿರುತ್ತೇವೆ. ಈ ಬೆಳಕು ನಮ್ಮ ಕಾರ್ಯಕರಣ ಸಂಘಾತಕ್ಕೆ ಸೇರಿದ್ದಲ್ಲ; ಅದಕ್ಕಿಂತ ವ್ಯತಿರಿಕ್ತವಾಗಿರುತ್ತದೆ. ಅದರ ಆಸರೆಯಿಂದ ನಮ್ಮ ಸರ್ವವ್ಯವಹಾರವೂ ನಡೆದಿರುತ್ತದೆ. ನಮ್ಮ ಇಂದ್ರಿಯಗಳನ್ನೂ, ಮನಸ್ಸನ್ನೂ ಬಹಿರ್ಮುಖವಾಗಿ ನೋಡದಂತೆ ಮಾಡಿಕೊಂಡು ನಮ್ಮೊಳಗೇ ನಾವು ಸರಿದು ನೋಡುವಾಗ ಅದೇ ಮನಸ್ಸಿನಿಂದ ನಮ್ಮೊಳಗಿನ ಈ ಆತ್ಮನು ನಮಗೆ ತಿಳಿಯ ಬರುತ್ತಾನೆ. ಅವನನ್ನು ಹೇಗೆ ಗುರುತಿಸುವದು ? ಎಂದರೆ, ಯಾಜ್ಞವಲ್ಕ್ಯರು ಹೇಳಿರುವಂತೆ 'ಇಂದ್ರಿಯಗಳ ನಡುವೆ ಇದ್ದುಕೊಂಡಿರುವ ವಿಜ್ಞಾನಮಯಪುರುಷನೇ, ಹೃದಯದ ಒಳಗಡೆ ಇದ್ದುಕೊಂಡಿರುವ ಜ್ಯೋತಿಯ ರೂಪದಲ್ಲಿರುವಾತನೇ' ನಮ್ಮ ಆತ್ಮನು ಎಂದು ಅರಿತುಕೊಳ್ಳಬೇಕು.

ವಿಜ್ಞಾನಮಯನೆಂದರೇನು? ವಿಜ್ಞಾನವೆಂದರೆ ಬುದ್ಧಿಯು, ಅಂತಃಕರಣವು. ಈ ಅಂತಃಕರಣದ ಸಂಪರ್ಕವಿರುವಾಗಲೇ ನಮಗೆ ಆತ್ಮನು - ಸೂರ್ಯಚಂದ್ರರ ಸಂಪರ್ಕದಿಂದ ರಾಹುವು ಕಾಣಿಸಿಕೊಳ್ಳುವಂತೆ - ತಿಳಿದುಬರುತ್ತಾನೆ. ಸರಿಯಾಗಿ ನೋಡಿದರೆ ಈ ಅತಂಃಕರಣವೇ ಎಲ್ಲಾ ವಿಷಯಗಳ ಅರಿವಿಗೂ ಕಾರಣವಾಗಿರುತ್ತದೆ; ನೋಡುವದು, ಕೇಳುವದು - ಮುಂತಾದ ವಿಷಯಜ್ಞಾನವೆಲ್ಲವೂ ಈ ಅಂತಃಕರಣದ ಬೆಳಕಿನಿಂದ ಕೂಡಿಕೊಂಡೇ ಆಗುತ್ತಿರುತ್ತದೆ.

ಇತರೇಂದ್ರಿಯಗಳಂತೆಯೇ ಈ ಅಂತಃಕರಣವೂ ಒಂದು ಕರಣವೇ ಆಗಿರುತ್ತದೆ ಎಂದು ಆಗಲೆ ಹೇಳಿದ್ದಾಗಿದೆ. ಇದರೊಡನೆ ಆತ್ಮನು ಬೆರೆತುಕೊಂಡು ತೋರುವದರಿಂದ ಇದೇ ನಮ್ಮ ಸ್ವರೂಪವಾದ ಆತ್ಮನೆಂದು ಭ್ರಮಿಸುವ ಸಂಭವವಿದೆ. ನಿಜವೇನೆಂದರೆ, ಹೃದಯದಲ್ಲಿರುವ ಈ ಅಂತಃಕರಣದೊಳಗೇ ಅದನ್ನು ವ್ಯಾಪಿಸಿಕೊಂಡು ಬೆಳಗುತ್ತಿರುವ ಚೈತನ್ಯಜ್ಯೋತಿಯೇ ನಿಜವಾದ ಆತ್ಮನು. ಯಾರು ತಮ್ಮೊಳಕ್ಕೇ ಸರಿದುಕೊಂಡು ನೋಡುವರೋ ಅವರಿಗೆ ನೇರಾಗಿ ಈ ಆತ್ಮನ ಅರಿವು ಆಗುತ್ತದೆ. ಆತ್ಮನನ್ನು ನೋಡುವ ಈ ಸಾಧನವೇ ಅನುಭವವೆನಿಸುತ್ತದೆ. ಅಂತಃಕರಣದಲ್ಲಿ ವಿಷಯಗಳನ್ನು ಅರಿಯುವ ಪ್ರತ್ಯಯಗಳು ಆಗುತ್ತಿರುತ್ತವೆ. ಘಟವನ್ನು ನೋಡಿದಾಗ ಘಟಪ್ರತ್ಯಯವಾಗುತ್ತದೆ. ಅನೇಕ ಘಟಗಳನ್ನು ನೋಡಿದಮೇಲೆ ಇದು ಘಟದ ಜಾತಿಗೆ ಸೇರಿದ ವಸ್ತು ಎಂಬ ತಿಳಿವಳಿಕೆ ಬರುತ್ತದೆ. ಘಟಗಳಲ್ಲೆಲ್ಲ ಘಟತ್ವ ಎಂಬ ಧರ್ಮವೊಂದು ಸೇರಿಕೊಂಡಿರುವದೆಂದು ನಮ್ಮ ದೇಶದ ತಾರ್ಕಿಕರು ಅಭಿಪ್ರಾಯ ಪಡುತ್ತಾರೆ. ಒಂದೇ ಬಗೆಯ ಅರಿವಾಗುವದರಿಂದ 'ಘಟ' ಎಂಬ

ಒಂದು ಸಾಮಾನ್ಯ ಪ್ರತ್ಯಯವಾಗುತ್ತದೆಯೇ ಹೊರತು ಹೊರಗೆ ವಸ್ತುವಿನಲ್ಲಿ 'ಜಾತಿ' ಎಂಬುದು ಯಾವದೂ ಇಲ್ಲವೆಂದು ಪಾಶ್ಚಾತ್ತ್ಯರು ಅಭಿಪ್ರಾಯಪಡುತ್ತಾರೆ. ಹೇಗೇ ಇರಲಿ, ವಸ್ತುಗಳನ್ನು ನಾವು ಇಂದ್ರಿಯಗಳಿಂದ ಅರಿಯುವಾಗ ಆಯಾ ವಸ್ತುವಿಗೆ ಹೊಂದುಗೆಯಾದಂತೆ ಒಂದು ಸಾಮಾನ್ಯಪ್ರತ್ಯಯವು ಆಗುವದೆಂಬುದಂತೂ ನಿಶ್ಚಿತ . ಬಾಹ್ಯವಿಷಯಗಳನ್ನು ನಾವು ಅರಿಯುವ ಬಗೆ ಹೀಗೆ. ಇಂಥ ಪ್ರತ್ಯಯಗಳ ಮೂಲಕವೇ ನಾವು ವಸ್ತುಗಳನ್ನು ಕುರಿತು ವಿಚಾರಮಾಡುವೆವು ; ಈ ಪ್ರತ್ಯಯಗಳನ್ನು ಒಂದಕ್ಕೊಂದನ್ನು ಜೋಡಿಸಿಕೊಂಡೇ ಅಭಿಪ್ರಾಯಗಳನ್ನು ಏರ್ಪಡಿಸಿಕೊಳ್ಳುತ್ತೇವೆ. ಆದರೆ ವಿಜ್ಞಾನಮಯಾತ್ಮನನ್ನು ನಾವು ಮನಸ್ಸಿನಲ್ಲಿಯೇ ಅರಿತುಕೊಳ್ಳುತ್ತೇವೆಂದರೆ ಹೀಗಲ್ಲ ಆತ್ಮನ ಅನುಭವವು ಅಂತಃಕರಣದಲ್ಲಿ ತೋರಿಕೊಳ್ಳುತ್ತದೆ ಅಷ್ಟೆ ಇಂದ್ರಿಯಗಳಲ್ಲಾಗುವ ಆಲೋಚನೆ, ಮನಸ್ಸಿನಲ್ಲಾಗುವ ಪ್ರತ್ಯಯ - ಇವುಗಳೇ ಅಲ್ಲದೆ ನಮಗೆ ಅನುಭವವೆಂಬ ಮತ್ತೊಂದು ಸಾಧನವೂ ಇದೆ. ಅಧ್ಯಾತ್ಮವಿಚಾರಕ್ಕೆ ಈ ಅನುಭವವೇ ಪ್ರಧಾನವಾಗಿರುತ್ತದೆ.

ನಮಗೆ ಇಂದ್ರಿಯಗಳ ಮೂಲಕವಾಗಿ ಜ್ಞಾನವಾಗಲಿ, ಮನಸ್ಸಿನ ಮೂಲಕವಾಗಿ ವೇದನೆಗಳಾಗಲಿ, ಅಥವಾ ನೇರಾದ ಅನುಭವದಿಂದಲೇ ಅರಿವಾಗಲಿ - ಈ ಎಲ್ಲವನ್ನೂ ನಾವು ಅರಿತುಕೊಂಡ ಬಳಿಕ 'ಇಂಥ ಇಂದ್ರಿಯದಿಂದ ನೋಡಿದೆನು ; ನನಗೆ ಇಂಥದ್ದೊಂದು ವಿಷಯದ ಬಗ್ಗೆ ಇಂಥದ್ದೊಂದು ತಿಳಿವಳಿಕೆಯಾಯಿತು ; ಭಯ, ಆಶ್ಚರ್ಯ - ಮುಂತಾದ ವೇದನೆಯ ಅನುಭವವಾಯಿತು'- ಎಂದು ಮನಸ್ಸಿನಲ್ಲಿ ಪ್ರತ್ಯಯವನ್ನು ಏರ್ಪಡಿಸಿಕೊಂಡು ಅದಕ್ಕೆ ತಕ್ಕಂತ ಭಾಷೆಯಲ್ಲಿ ಮತ್ತೊಬ್ಬರಿಗೆ ತಿಳಿಯಪಡಿಸುತ್ತೇವೆ. ಹೀಗೆ ವಿಷಯವನ್ನು ತಿಳಿಯುವದಕ್ಕೂ ತಿಳಿಯಿಸಿಕೊಡುವದಕ್ಕೂ ಪ್ರತ್ಯಯಗಳೂ ಮಾತೂ ಸಾಧನವಾಗಿರುತ್ತವೆಯಾದರೂ ಇದೆಲ್ಲ ನಮಗೆ ಆಗುವದೆಂಬುದಕ್ಕೆ ಅನುಭವವೇ ಪ್ರಮಾಣ.

ಅನುಭವವೆಂಬುದು ಎಲ್ಲರಿಗೂ ಇದೆ. ಆದರೆ ಅದನ್ನು ಉಪಯೋಗಿಸಿ ಕೊಳ್ಳುವವರು, ಉಪಯೋಗಿಸಿಕೊಳ್ಳದೆ ಇರುವವರು - ಎಂದು ಜನರಲ್ಲಿ ಎರಡು ಪಂಗಡಗಳಿವೆ. ಆತ್ಮನನ್ನು ಅರಿತುಕೊಳ್ಳುವದಕ್ಕೆ ಇಂದ್ರಿಯಗಳು ಸಾಧನವಾಗುವಂತಿಲ್ಲ . ಅವನನ್ನು ಅನುಭವದಿಂದಲೇ ತಿಳಿದುಕೊಳ್ಳಬೇಕಾಗಿದೆ. ಅಧ್ಯಾತ್ಮವಿದ್ಯೆಯಲ್ಲಿ ಅನುಭವದ ಆಧಾರದಿಂದಲೇ ತರ್ಕವನ್ನೂ ಸಹಾಯಕ್ಕೆ ತೆಗೆದುಕೊಂಡು ಸಿದ್ಧಾಂತ ವನ್ನು ಮಾಡಿಕೊಳ್ಳಬೇಕಾಗುತ್ತದೆ. ಮನಸ್ಸಿನಲ್ಲಿ ಈ ಅನುಭವದಿಂದ ಏರ್ಪಡುವ ಸಿದ್ಧಾಂತವನ್ನು ತರ್ಕದಿಂದ ನಿಲ್ಲಿಸಿಕೊಳ್ಳುವಾಗಲೂ ನಮ್ಮ ಅಭಿಪ್ರಾಯವನ್ನು

ಮತ್ತೊಬ್ಬರಿಗೆ ತಿಳಿಯಿಸಿಕೊಡುವಾಗಲೂ ಪ್ರತ್ಯಯಗಳು ಬೇಕಾಗುತ್ತವೆ. ಆದರೆ ಆತ್ಮನು ಮಾತ್ರ ಯಾವ ಪ್ರತ್ಯಯಕ್ಕೂ ವಿಷಯನಾಗುವಂತೆ ಇರುವದಿಲ್ಲ. ಯಾಜ್ಞವಲ್ಕ್ಯನು ಹೇಳಿರುವ ವಿಜ್ಞಾನಮಯಪುರುಷನನ್ನು ಅನುಭವದಿಂದಲೇ ಅರಿತುಕೊಳ್ಳಬೇಕಾಗಿದೆ. ಇಂದ್ರಿಯಗಳೂ ಮನಸ್ಸೂ ಕರಣಗಳು ; ಅದನ್ನು ಉಪಯೋಗಿಸುವ ಕರ್ತೃವೇ ವಿಜ್ಞಾನಮಯನು. ಇವನ ನಿಜವಾದ ಸ್ವರೂಪವೇ ಆತ್ಮಚೈತನ್ಯಜ್ಯೋತಿಯು. ಇದೆಲ್ಲವನ್ನೂ ನಾವು ಅನುಭವದಿಂದಲೇ ಅರಿತುಕೊಳ್ಳಬೇಕಾಗುತ್ತದೆ. ಕರ್ಮ, ಧ್ಯಾನ, ಭಕ್ತಿ, ಜ್ಞಾನ - ಇವುಗಳ ವಿಷಯವಾಗಿ ನಾವು ಏನೇನು ತಿಳಿದುಕೊಳ್ಳಬೇಕಾಗಿರುವದೋ ಅದಕ್ಕೆಲ್ಲ ಈ ಅನುಭವವೇ ಆಧಾರ. ಈ ಸಾಧನವನ್ನು ಬಳಸಿಕೊಂಡು ಅಧ್ಯಾತ್ಮವಿಚಾರಮಾಡುವ ಬಗೆಯನ್ನು ಇನ್ನು ವಿಚಾರಿಸಬಹುದಾಗಿದೆ.

## ೫. ಅನುಭವ

(2-8-64)

ಆತ್ಮಜ್ಯೋತಿಯ ಆಲಂಬನವಿಲ್ಲದೆ ವ್ಯವಹಾರವು ಸಾಗುವಂತಿಲ್ಲ ಎಂಬುದನ್ನು ಯಾಜ್ಞವಲ್ಕ್ಯರು ಹೇಳಿದ್ದನ್ನು ಕೇಳಿ ಜನಕನು 'ಆತ್ಮನೆಂದರೆ ಯಾರು ? ' ಎಂದು ಪ್ರಶ್ನೆ ಮಾಡಲು 'ಪ್ರಾಣಗಳ (ಇಂದ್ರಿಯಗಳ) ನಡುವೆ, ಅವುಗಳಿಗಿಂತ ವಿಲಕ್ಷಣನಾಗಿ ಕಾಣುವ ವಿಜ್ಞಾನಮಯನೇ , ಹೃದಯದೊಳಗಿರುವ ಜ್ಯೋತಿಯೇ , ಆತ್ಮನು ' - ಎಂದು ಅವರು ಉತ್ತರವನ್ನು ಕೊಟ್ಟರುತ್ತಾರೆ. ವಿಜ್ಞಾನಮಯನೆಂದರೆ ಬುದ್ಧಿ ವಿಜ್ಞಾನದ ಸಂಪರ್ಕದಿಂದಲೇ ತಿಳಿಯಬರುವವನು. ವಿಜ್ಞಾನವೂ ಆತ್ಮನೂ ಇಬ್ಬರೂ ಒಂದೇ ಕಡೆಯಲ್ಲಿ ನಮಗೆ ತೋರುತ್ತಿರುತ್ತಾರೆ. ಆದ್ದರಿಂದ ಅಲ್ಲಿ ವಿಜ್ಞಾನಾಂಶವು ಯಾವದು ? ಆತ್ಮತತ್ತ್ವವು ಯಾವದು ? - ಎಂಬುದನ್ನು ಗ್ರಹಣ ಕಾಲಕ್ಕೆ ಒಕ್ಕಡೆಯಲ್ಲಿ ತೋರುವ ಸೂರ್ಯರಾಹುಗಳನ್ನು ಬಿಡಿಸಿ ತಿಳಿಯುವಂತೆ ವಿಂಗಡಿಸಿ ತಿಳಿದುಕೊಳ್ಳಬೇಕಾಗಿರುತ್ತದೆ.

ಆತ್ಮಜ್ಯೋತಿಯು ಬುದ್ಧ್ಯಾದಿಗಳೊಳಗೆಲ್ಲ ಹೊಳೆಯುತ್ತಿದೆ. ಉತ್ತಮವಾದ ಪಚ್ಚೆಯ ಮಣಿಯನ್ನು ಹಾಲಿನಲ್ಲಿ ಹಾಕಿದರೆ ಹಾಲೂ ಹಚ್ಚಗೇ ಕಾಣಿಸುವದಂತೆ. ಹಾಗೆ ಆತ್ಮನ ಚೈತನ್ಯದ ಛಾಯೆಯು ಬುದ್ಧಿಯಲ್ಲಿ , ಬುದ್ಧಿಯ ಮೂಲಕ ಮನಸ್ಸಿನಲ್ಲಿ , ಮನಸ್ಸಿನ ಮೂಲಕ ಇಂದ್ರಿಯಗಳಲ್ಲಿ , ಅವುಗಳ ಮೂಲಕ ಶರೀರದಲ್ಲಿ - ಹೀಗೆ ಎಲ್ಲೆಲ್ಲಿಯೂ ಕಾಣುತ್ತಿರುವದು. ಆದ್ದರಿಂದಲೇ ಇವುಗಳಲ್ಲೆಲ್ಲ ಜನರಿಗೆ ಆತ್ಮಬುದ್ಧಿಯು

– ನಾನು ಎಂಬ ಭಾವನೆಯು ಆಗುತ್ತಿರುತ್ತದೆ. ನಮಗೆ ಈ ವಿಜ್ಞಾನಮಯಾ ತಿಳಿದುಬರುತ್ತಿರುವ ಬಗೆಯನ್ನು ಶ್ರುತಿಯಲ್ಲಿ ವರ್ಣಿಸಿರುವ ರೀತಿಯನ್ನು ಕೇಳಿ :

**ಸ ವಾ ಅಯಮಾತ್ಮಾ ಬ್ರಹ್ಮ ವಿಜ್ಞಾನಮಯೋ ಮನೋಮಯಃ ಪ್ರಾಣಮಯಶ್ಚಕ್ಷುರ್ಮಯಃ ಶ್ರೋತ್ರಮಯಃ ಪೃಥಿವೀಮಯ ಆಪೋಮಯೋ ವಾಯುಮಯ ಆಕಾಶಮಯಸ್ತೇಜೋಮಯೋऽ ತೇಜೋಮಯಃ ಕಾಮಮಯೋऽಕಾಮಮಯಃ ಕ್ರೋಧ ಮಯೋऽಕ್ರೋಧಮಯೋ ಧರ್ಮಮಯೋऽಧರ್ಮಮಯಃ ಸರ್ವಮಯಸ್ತದ್ಯದೇತದಿದಮಯೋऽದೋಮಯ ಇತಿ ಯಥಾಕಾರೀ ಯಥಾಚಾರೀ ತಥಾ ಭವತಿ ಸಾಧುಕಾರೀ ಸಾಧುರ್ಭವತಿ ಪಾಪಕಾರೀ ಪಾಪೋ ಭವತಿ ಪುಣ್ಯಃ ಪುಣ್ಯೇನ ಕರ್ಮಣಾ ಭವತಿ ಪಾಪಃ ಪಾಪೇನ ॥**

– ಬೃ. ೪–೪–೫

ಈ ಆತ್ಮನು ಬ್ರಹ್ಮವೇ ಆಗಿರುತ್ತಿದ್ದರೂ ಅಜ್ಞಾನದಿಂದ ಸಂಸಾರದಲ್ಲಿ ತೊಳಲುತ್ತಿರುತ್ತಾನೆ. ಈ ಆತ್ಮನು ಬ್ರಹ್ಮವೇ ಎಂಬುದು ನಮಗೇಕೆ ತಿಳಿಯುವದಿಲ್ಲ? – ಎಂದರೆ ಅದಕ್ಕೆ ತಕ್ಕ ಅಧಿಕಾರವಿಲ್ಲದ್ದರಿಂದ. ಅಧಿಕಾರವೆಂದರೆ ಹಣ, ಸ್ಥಾನಮಾನಗಳು – ಮುಂತಾದವುಗಳ ಸಂಪತ್ತಲ್ಲ ; ತನ್ನತನ್ನೊಳಕ್ಕೇ ಸರಿದುಕೊಂಡು ತನ್ನತನ್ನ ಅನುಭವದಿಂದ ಆತ್ಮನನ್ನು ಅರಿತುಕೊಳ್ಳುವದಕ್ಕೆ ಬೇಕಾದ ಯೋಗ್ಯತೆ. ಈ ಯೋಗ್ಯತೆ ಇಲ್ಲದ್ದರಿಂದ, ನಮ್ಮ ಆತ್ಮನು ನಿತ್ಯಶುದ್ಧಬುದ್ಧಮುಕ್ತಸ್ವಭಾವನೇ ಆಗಿರುತ್ತಿದ್ದರೂ ನಾವು ಬುದ್ಧಿ, ಮನಸ್ಸು, ಚಕ್ಷುರಿಂದ್ರಿಯ, ಶ್ರೋತ್ರೇಂದ್ರಿಯ – ಮುಂತಾದ ಉಪಾಧಿಗಳಲ್ಲಿ ತಾದಾತ್ಮ್ಯವನ್ನು ಹೊಂದಿ ಆಯಾ ರೂಪವೇ ನಮ್ಮದೆಂದು ತಪ್ಪಾಗಿ ಭಾವಿಸಿಕೊಂಡು ಬಿಡುತ್ತಿದ್ದೇವೆ. ಶರೀರವೇ ನಾವೆಂದು ಗಟ್ಟಿಯಾಗಿ ನಂಬಿರುವವರು ಅನೇಕರು. ಪೃಥಿವಿ, ಅಪ್ಪು, ತೇಜಸ್ಸು, ವಾಯು, ಆಕಾಶ – ಈ ಭೂತಗಳೇ ಪ್ರಧಾನವಾಗಿರುವ ಶರೀರವು ಜೀವರಿಗೆ ಬೇರೆಬೇರೆಯ ಲೋಕಗಳಲ್ಲಿ ಗಂಟುಬಿದ್ದಿರುತ್ತದೆಯಂತೆ. ಅವುಗಳನ್ನೇ ತಾನು ಎಂದು ಅವನವನು ಭಾವಿಸಿಕೊಂಡು ಬಿಟ್ಟಿರುತ್ತಾನೆ. ಈ ಭೂತಗಳಿಂದಾಗದೆ ಇರುವ ನಾರಕ ಪ್ರೇತಾದಿಶರೀರಗಳು 'ಅತೇಜೋಮಯ' ಶರೀರಗಳೆನಿಸುವವು. ಅವುಗಳನ್ನು ಅಲ್ಲಿರುವ ಜೀವನು ತಾನೆಂದೇ ಇಟ್ಟುಕೊಂಡುಬಿಡುತ್ತಾನೆ ; ಇದರಂತೆ ಇಂದ್ರಿಯಗಳು, ಪ್ರಾಣ, ಮನಸ್ಸು, ವಿಜ್ಞಾನ – ಈ ಉಪಾಧಿಗಳಲ್ಲಿಯೇ ತಾನೆಂಬ ದೃಢಭಾವನೆಯನ್ನು ಹೊಂದಿ 'ಚಕ್ಷುರ್ಮಯ', 'ಶ್ರೋತ್ರಮಯ', 'ಪ್ರಾಣಮಯ' – ಮುಂತಾದ ರೂಪವನ್ನು ತಳೆಯುತ್ತಾನೆ. 'ಇದು

ಬೇಕು, ಅದು ಬೇಕು' ಎಂದು ತಹತಹಪಡುತ್ತಿರುವಾಗ 'ಕಾಮಮಯ'ನಾಗಿ ಬಿಡುತ್ತಾನೆ; ಕಾಮವು ತನಗಿಂತ ಬೇರೆಯಾಗಿದ್ದರೂ ತಾನೇ ಕಾಮಮಯನಾಗಿ ಬಿಡುತ್ತಾನೆ ; ಕಾಮವು ಶಾಂತವಾದರೆ 'ಅಕಾಮಮಯ'ನಾಗುತ್ತಾನೆ ; ಕಾಮಕ್ಕೆ ಅಡ್ಡಿಯಾದರೆ 'ಕ್ರೋಧಮಯ'ನಾಗುತ್ತಾನೆ ; ಆ ಕ್ರೋಧವು ಹೇಗೋ ತೊಲಗಿದರೆ 'ಅಕ್ರೋಧಮಯ'ನಾಗುತ್ತಾನೆ. ಹೀಗೆ ಕಾಮಕ್ರೋಧಗಳಿಂದ 'ಅಧರ್ಮಮಯ' ನೂ ಅಕಾಮಾಕ್ರೋಧಗಳಿಂದ 'ಧರ್ಮಮಯ'ನೂ ಆಗುತ್ತಾನೆ. ಹೆಚ್ಚು ಹೇಳಿದ್ದರಿಂದೇನು? ಅಂತಃಕರಣದ ವೃತ್ತಿಗಳು ಇಷ್ಟೆಂಬ ಲೆಕ್ಕವೇನೂ ಇಲ್ಲವಷ್ಟೆ ? ಆಯಾ ಕ್ಷಣದಲ್ಲಿ ಯಾವಯಾವ ಉಪಾಧಿಯಿಂದ ಕೂಡಿರುವನೋ ಅದರದರ ರೂಪದವನೇ ತಾನೆಂಬ ಭಾವನೆಯಿಂದ ಇವನು ಬಿಗಿವಡೆಯುತ್ತಾನೆ. ಒಟ್ಟಿನಲ್ಲಿ ಎಂಥ ಕರ್ಮವನ್ನು ಮಾಡುತ್ತಾನೋ, ಎಂಥ ಆಚಾರವನ್ನಿಟ್ಟುಕೊಳ್ಳುತ್ತಾನೋ, ಅಂಥವನೇ ಆಗಿಬಿಡುತ್ತಾನೆ. ಒಳ್ಳೆಯದನ್ನು ಮಾಡಿದವನು ಒಳ್ಳೆಯವನಾಗುತ್ತಾನೆ ; ಕೆಟ್ಟ ಕರ್ಮವನ್ನೇ ಮಾಡುವವನು ಕೆಟ್ಟವನೇ ಆಗುತ್ತಾನೆ. ಹೀಗೆ ಪುಣ್ಯಪಾಪಭೂಯಿಷ್ಠವಾದ ಭಾವನೆಯಿಂದ ಪುಣ್ಯಪಾಪಶರೀರಗಳನ್ನು ಪಡೆದು ಸಂಸಾರದಲ್ಲಿ ತೊಳಲುತ್ತಿರುವದೇ ಇವನ ಸ್ವಭಾವವಾಗಿರುವಂತೆ ಆಗಿಬಿಟ್ಟಿರುತ್ತದೆ.

ಸಂಗ್ರಹವಾಗಿ ಹೇಳಿದರೆ ಈವರೆಗಿನ ವಿಚಾರವು ಇಷ್ಟಕ್ಕೆ ಬಂದುನಿಲ್ಲುವದು : ಶರೀರವೆಂಬ ಉಪಾಧಿಯಿಂದ ಶಾರೀರನೆಂದೂ, ಪ್ರಾಣಗಳೆಂಬ (ಇಂದ್ರಿಯಗಳೆಂಬ) ಉಪಾಧಿಯಿಂದ ಜೀವನೆಂದೂ, ವಿಜ್ಞಾನ (ಅಂತಃಕರಣ)ವೆಂಬ ಉಪಾಧಿಯಿಂದ ವಿಜ್ಞಾನಾತ್ಮನೆಂದೂ ಆತ್ಮನಿಗೆ ಮೂರು ಔಪಾಧಿಕನಾಮಗಳುಂಟು. ಇವುಗಳೊಳಗೆ ಶರೀರಾಭಿಮಾನವಿರುವವರಿಗಿಂತ ಇಂದ್ರಿಯಾಭಿಮಾನವಿರುವವರೂ ಇಂದ್ರಿಯಾಭಿ ಮಾನಿಗಳಿಗಿಂತ ವಿಜ್ಞಾನಾಭಿಮಾನಿಗಳೂ ಹೆಚ್ಚುಹೆಚ್ಚಿನ ಭೂಮಿಕೆಯವರು. ಹೇಗೇ ಆಗಲಿ, ನಮ್ಮ ವಿಜ್ಞಾನವು ಯಾವ ಅವಸ್ಥೆಯಲ್ಲಿರುವದೋ ನಾವೂ ಅದೇ ಆಗಿಬಿಡುತ್ತೇವೆ, ತನ್ಮಯರಾಗಿಬಿಡುತ್ತೇವೆ. ಹೀಗೆ ಹೊರಮುಖವಾಗಿರುವ ಮನಸ್ಸಿನಲ್ಲಿಯೇ ಇದ್ದುಕೊಂಡು ಬಗೆಬಗೆಯ ವೃತ್ತಿಗಳ ತದಾತ್ಮ್ಯವನ್ನು ಹೊಂದುತ್ತಿರುವದರಿಂದಲೇ ನಮ್ಮ ನಿಜವಾದ ಚಿನ್ಮಯಸ್ವರೂಪವನ್ನು ನಾವು ಅರಿಯುವದಕ್ಕೆ ಅಡ್ಡಿಯಾಗಿರುತ್ತದೆ. ಆದ್ದರಿಂದಲೇ ;

**ಪರಾಞ್ಚಿ ಖಾನಿ ವ್ಯತೃಣತ್ ಸ್ವಯಮ್ಭೂಸ್ತಸ್ಮಾತ್ ಪರಾಙ್ ಪಶ್ಯತಿ ನಾನ್ತರಾತ್ಮನ್ । ಕಶ್ಚಿದ್ಧೀರಃ ಪ್ರತ್ಯಗಾತ್ಮಾನಮೈಕ್ಷತ್**

**ನ್ ॥**

**ಪರಾಚಃ ಕಾಮಾನನುಯನ್ತಿ ಬಾಲಾಸ್ತೇ ಮೃತ್ಯೋರ್ಯನ್ತಿ ಪಾಶಮ್ । ಅಥ ಧೀರಾ ಅಮೃತತ್ವಂ ವಿದಿತ್ವಾ ಧ್ರುವಮಧ್ರುವೇಷ್ವಿಹ ನ ಪ್ರಾರ್ಥಯನ್ತೇ॥** ಕ. ೨-೧-೧,೨

''ಬ್ರಹ್ಮನು ಇಂದ್ರಿಯಗಳನ್ನು ಬಹಿರ್ಮುಖವಾಗಿಯೇ ತಿರುಗಿಸಿರುತ್ತಾನೆ ; ಆದ್ದರಿಂದ ಜನವು ಸಾಮಾನ್ಯವಾಗಿ ಹೊರಕ್ಕೆ ನೋಡುತ್ತಿರುವದೇ ಹೊರತು ತನ್ನೊಳಗೆ ನೋಡಿಕೊಳ್ಳದೆ ಇರುತ್ತದೆ. ಅವಿವೇಕಿಗಳು ಹೊರಗಿನ ಕಾಮಗಳನ್ನೇ ಬೆನ್ನು ಹತ್ತುತ್ತಿರುವರು ; ಆದ್ದರಿಂದ ಅವರು ಎಲ್ಲೆಲ್ಲಿಯೂ ಹಬ್ಬಿಕೊಂಡಿರುವ ಮೃತ್ಯು ಪಾಶವನ್ನೇ ಹೊಗುವರು. ಆದರೆ ವಿವೇಕಿಗಳಾದವರು ಅಮೃತತ್ತ್ವಕ್ಕೆ ಕಾರಣವಾಗಿರುವ ಕೂಟಸ್ಥನಿತ್ಯತತ್ತ್ವವನ್ನು ಅರಿತುಕೊಂಡವರಾಗಿ ಅನಿತ್ಯವಾದ ಐಹಿಕಭೋಗಗಳನ್ನು ಬಯಸದೆ ಇರುತ್ತಾರೆ '' ಎಂದು ಉಪನಿಷತ್ತು ವಿವೇಕಿಗಳನ್ನೂ ಅವಿವೇಕಿಗಳನ್ನೂ ವಿಂಗಡಿಸಿ ಹೇಳಿರುತ್ತದೆ.

ಅಧ್ಯಾತ್ಮವಿದ್ಯೆಯು ಭಾವನಾಪ್ರಧಾನವೆಂದೂ ತತ್ತ್ವಜ್ಞಾನಪ್ರಧಾನವೆಂದೂ ಎರಡು ಬಗೆಯದಾಗಿರುವದೆಂಬುದನ್ನು ಆಗಲೇ ಹೇಳಿದ್ದಾಗಿದೆ. ನಾವು ಪ್ರಕೃತದಲ್ಲಿ ವಸ್ತುತತ್ತ್ವಜ್ಞಾನವನ್ನೇ ವಿಚಾರಕ್ಕೆ ತೆಗೆದುಕೊಂಡಿರುತ್ತೇವೆ. ವಿಜ್ಞಾನಾತ್ಮನು ವ್ಯವಹಾರ ದಲ್ಲಿ ಧರ್ಮಮಯನಾಗಿಯೂ ಅಧರ್ಮಮಯನಾಗಿಯೂ ಕಾಣಿಸುತ್ತಿರುತ್ತಾನಷ್ಟೆ ? **ಹೀಗೆ ಪಾಪಪುಣ್ಯಯೋನಿಗಳಲ್ಲಿ ಹುಟ್ಟಿ ಸಂಸಾರದಲ್ಲಿ ತೊಳಲುತ್ತಿರುವವವನೇ ಆ ನಿತ್ಯಶುದ್ಧಬುದ್ಧಮುಕ್ತವಾದ ಬ್ರಹ್ಮವೆಂದು ಶ್ರುತಿ ಹೇಳುತ್ತಿದೆಯಲ್ಲ ! ಇದನ್ನು ಹೇಗೆ ನಂಬುವದು ?** -ಎಂಬ ಶಂಕೆ ವಿಚಾರಕರಿಗೆ ಉಂಟಾಗುವದು ಸಹಜವಾಗಿದೆ. ಇದನ್ನು ಇದ್ದದ್ದು ಇದ್ದಂತೆ ತಿಳಿಯಬೇಕಾದರೆ ಮೊಟ್ಟಮೊದಲು ಇಂದ್ರಿಯಗಳ ಹಿಡಿತದಿಂದ ಬಿಡಿಸಿಕೊಂಡು ನಮ್ಮೊಳಗೆ ನಾವು ನೋಡಿಕೊಳ್ಳುವ ಪ್ರತ್ಯಗ್ದೃಷ್ಟಿಯನ್ನು ಸಂಪಾದಿಸಿಕೊಳ್ಳಬೇಕು, ಮನಸ್ಸಿಗೆ ವಿಚಾರದಶೆಯಲ್ಲಿ ಅವಶ್ಯವಾಗಿರುವ ಪ್ರತ್ಯಯಗಳೇ ಅಲ್ಲದೆ ನಮಗೆಲ್ಲರಿಗೂ ತೀರ ನೇರಾಗಿಯೇ ವಿಷಯತತ್ತ್ವವನ್ನು ಕಂಡುಕೊಳ್ಳುವ ಅನುಭವವೆಂಬ ಸಾಧನವೂ ಒಂದಿದೆ ಎಂಬದರಲ್ಲಿ ದೃಢವಾದ ನಂಬಿಕೆಯಿರಬೇಕು. ಆಮೇಲೆ ಅನುಭವವೆಂಬುದು ಯಾವದೆಂಬುದನ್ನು ಕಂಡುಕೊಳ್ಳಬೇಕು. ಅಲ್ಲಿಂದ ಮುಂದಕ್ಕೇ ಆತ್ಮವಿಷಯದ ವಿಚಾರವನ್ನು ಮಾಡುವದಕ್ಕೆ ನಾವು ಅರ್ಹರಾಗುವೆವು. ಆಮೇಲೆ ಸರ್ವಸಂಶಯ ಪರಿಹಾರಕವಾದ ಜ್ಞಾನವು ನಮಗೆ ಲಭಿಸುವದು.

# ೬. ಕಾಮಮಯಪುರುಷ

(6-8-64)

ಸರಿಯಾಗಿ ನೋಡಿದಾಗ ನಮ್ಮ ಆತ್ಮನು ಅಪರಿಚ್ಛಿನ್ನವಾದ ಬ್ರಹ್ಮವೇ ಆಗಿದ್ದರೂ ›ಜ್ಞಾನೋಪಾಧಿಯಿಂದ ನಾವೆಲ್ಲರೂ ವಿಜ್ಞಾನಾತ್ಮರೇ ಆಗಿರುತ್ತೇವೆ. ನಮಗೆ ಎಂಥೆಂಥ ›ಪಾಧಿಗಳಲ್ಲಿ ತಾದಾತ್ಮ್ಯವಾಗಿರುದೋ ತತ್ಕಾಲಕ್ಕೆ ನಾವು ಅದದೇ, ತನ್ಮಯರೇ , ›ಗಿರುತ್ತೇವೆ. ರೇಷ್ಮೆಯ ಹುಳುವಿನಂತೆ ನಮ್ಮ ಸುತ್ತಲೂ ಆಯಾ ಉಪಾಧಿಗೆ ತಕ್ಕಂತೆ ನಾವನೆಯ ಎಳೆಗಳನ್ನು ಸುತ್ತಿಕೊಂಡು ನಮ್ಮ ನಾಶಕ್ಕೆ ನಾವೇ ಕಾರಣರಾಗಿರುತ್ತೇವೆ. ›ಷಯಗಳ ಸಂಗ, ಆ ಸಂಗದಿಂದ ಕಾಮ, ಅದರಿಂದ ಕ್ರೋಧ, ಸಂಮೋಹ, ಸ್ಮೃತಿವಿಭ್ರಮ, ಬುದ್ಧಿನಾಶ - ಹೀಗೆ ಒಂದರಹಿಂದೊಂದು ನಮ್ಮನ್ನು ಸುತ್ತುವರಿದು ಪುರುಷಾರ್ಥಭ್ರಷ್ಟರನ್ನಾಗಿ ಮಾಡಿಬಿಡುತ್ತದೆ . ಆದರೆ ಈ ಎಲ್ಲಾ ವ್ಯವಹಾರಕ್ಕೂ ಆಸರೆಯಾಗಿರುವದು ನಮ್ಮ ಹೃದಯದ ಒಳಗಿರುವ ಅದೇ ಆತ್ಮಜ್ಯೋತಿಯೇ ; ಆ ಜ್ಯೋತಿಯ ಬೆಳಕಿನಿಂದಲೇ ನಮ್ಮ ಎಲ್ಲಾ ವ್ಯವಹಾರವೂ ಸಾಗುತ್ತಿದ್ದರೂ ನಾವು ಅದನ್ನು ಅರಿಯದೆ ಇರುತ್ತೇವೆ.

ಮನುಷ್ಯನು ಎಂಥ ಕರ್ಮವನ್ನು ಮಾಡುತ್ತಾನೋ ಅದಕ್ಕೆ ಅನುಗುಣವಾದ ಫಲವನ್ನು ಪಡೆದುಕೊಳ್ಳುತ್ತಾನೆ , ಪುಣ್ಯಕರ್ಮವನ್ನು ಮಾಡಿದವನು ಪುಣ್ಯಶರೀರವನ್ನೂ ಪಾಪಕರ್ಮವನ್ನು ಮಾಡಿದವನು ಪಾಪಶರೀರವನ್ನೂ ಪಡೆದುಕೊಂಡು ಅದಕ್ಕೆ ಅನುಗುಣವಾಗಿ ವರ್ತಿಸುತ್ತಾನೆ - ಎಂದು ಹಿಂದೆ ಹೇಳಿತ್ತಷ್ಟೆ ? ಅಲ್ಲಿ ಪಾಪಪುಣ್ಯ ಕರ್ಮಗಳಿಗೆ ಮೂಲವು ಯಾವುದು ? -ಎಂಬುದನ್ನು ಉಪನಿಷತ್ತು ಹೀಗೆಂದು ವಿವರಿಸಿ ಹೇಳುತ್ತಿದೆ :

**ಅಥೋ ಖಲ್ವಾಹುಃ ಕಾಮಮಯ ಏವಾಯಂ ಪುರುಷ ಇತಿ ಸ ಯಥಾ ಕಾಮೋ ಭವತಿ ತತ್ಕ್ರತುರ್ಭವತಿ ಯತ್ಕ್ರತುರ್ಭವತಿ ತತ್ಕರ್ಮ ಕುರುತೇ ಯತ್ಕರ್ಮ ಕುರುತೇ ತದಭಿಸಂಪದ್ಯತೇ॥** ಬೃ. ೪-೪-೫

" ಈ ಪುರುಷನು ಕಾಮಮಯನೇ ಆಗಿರುತ್ತಾನೆ . ಎಂಥ ಕಾಮವುಳ್ಳವ ನಾಗಿರುತ್ತಾನೋ ಅಂಥ ಕ್ರತುವನ್ನು ಮಾಡಿಕೊಳ್ಳುತ್ತಾನೆ . ಎಂಥ ಕ್ರತುವನ್ನು ಮಾಡಿಕೊಳ್ಳುತ್ತಾನೋ ಅಂಥ ಕರ್ಮವನ್ನು ಮಾಡುತ್ತಾನೆ . ಎಂಥ ಕರ್ಮವನ್ನು ಮಾಡುತ್ತಾನೋ ಅದರ ಫಲವನ್ನೇ ಸೇರಿಕೊಳ್ಳುತ್ತಾನೆ."

ಮನುಷ್ಯನು ಕರ್ಮವನ್ನು ಮಾಡುವದಕ್ಕೆ ಹೊರಗಿನ ಕರ್ಮೇಂದ್ರಿಯಗಳು ಕಾರಣವಾಗಿರುವವೆಂಬುದು ನಿಜವಾದರೂ ಯಾವ ಕರ್ಮವನ್ನು ಯಾವನು

ಮಾಡುತ್ತಾನೆಂಬುದಕ್ಕೆ ಅವನವನ ಕಾಮವೇ ಕಾರಣವಾಗಿರುತ್ತದೆ. ಇಲ್ಲಿ ಕಾಮವೆಂಬುದು ಉಪಲಕ್ಷಣ. ಯಾವಯಾವದು ನಮ್ಮನ್ನು ಒಳ್ಳೆಯ ಅಥವಾ ಕೆಟ್ಟ ಕರ್ಮವನ್ನು ಮಾಡುವಂತೆ ಹೊರಕ್ಕೆ ದಬ್ಬುವದೋ ಅಂಥ ಪ್ರವರ್ತಕ ದೋಷಗಳೆಲ್ಲವನ್ನೂ ಇಲ್ಲಿ ಕಾಮವೆಂಬ ಮಾತಿನಿಂದ ಸೂಚಿಸಿರುತ್ತದೆ. ಅರ್ಜುನನು ಭಗವಂತನನ್ನು '**ಅಥ ಕೇನ ಪ್ರಯುಕ್ತೋಽಯಂ ಪಾಪಂ ಚರತಿ ಪೂರುಷಃ । ಅನಿಚ್ಛನ್ನಪಿ ವಾರ್ಷ್ಣೇಯ ಬಲಾದಿವ ನಿಯೋಜಿತಃ ॥** ' (ಗೀ. ೩-೩೬) 'ಭಗವಂತನೆ, ಮನುಷ್ಯನು ಮಾಡಬಾರದ ಪಾಪವನ್ನು - ತನ್ನ ಇಚ್ಛೆಯಿಲ್ಲದಿದ್ದರೂ ಮಾಡಿಬಿಡುವನಲ್ಲ , ಇದಕ್ಕೆ ಇವನನ್ನು ಪ್ರೇರಿಸುವವರು ಯಾರು ? - ಹೀಗೆ ಮನುಷ್ಯನನ್ನು ಬಲಾತ್ಕರಿಸುವ ಹೇತುವು ಯಾವದು ? ' ಎಂದು ಕೇಳಲಾಗಿ ಭಗವಂತನು ಉತ್ತರವನ್ನು ಕೊಟ್ಟದ್ದು ಹೀಗಿದೆ :

**ಕಾಮ ಏಷ ಕ್ರೋಧ ಏಷ ರಜೋಗುಣಸಮುದ್ಭವಃ ।**

**ಮಹಾಶನೋ ಮಹಾಪಾಪ್ಮಾ ವಿದ್ಧ್ಯೇನಮಿಹ ವೈರಿಣಮ್ ॥** ಗೀ. ೩-೩೭

ಅರ್ಜುನನೇ, ಇದೇ ಕಾಮವು, ಇದೇ ಕ್ರೋಧವು. ಇದು ರಜೋಗುಣವನ್ನು ಎಬ್ಬಿಸುತ್ತದೆ. ಇದಕ್ಕೆ ಎಷ್ಟು ಆಹಾರವಾದರೂ ಹೊಟ್ಟೆ ತುಂಬದು, ಮಹಾಪಾಪಿಯಿದು. ಇದೇ ಸಂಸಾರದಲ್ಲಿ ವೈರಿಯು.'

ಅರ್ಜುನನು ಪಾಪದ ವಿಷಯಕ್ಕೇ ಪ್ರಶ್ನೆಯನ್ನು ಮಾಡಿದ್ದರೂ ಪುಣ್ಯಕ್ಕೂ ಕಾಮಾದಿದೋಷಗಳೇ ಪ್ರವರ್ತಕವಾಗಿರುತ್ತವೆ. ಆದ್ದರಿಂದಲೇ ಭಗವಂತನು 'ಕಾಮವೇ ಇದು', 'ಕ್ರೋಧವೇ ಇದು' ಎಂದಿರುತ್ತಾನೆ. ಮನುಷ್ಯನಿಗೆ ಎಂಥ ಕಾಮ ವುಂಟಾಗುವದೋ, ಯಾವಬಗೆಯ ಪ್ರವರ್ತಕದೋಷವು ಎದ್ದುಕೊಳ್ಳುವದೋ ಅದಕ್ಕೆ ತಕ್ಕಂಥ ನಿಶ್ಚಯವನ್ನು ಮಾಡಿಬಿಡುತ್ತಾನೆ, ವಿಷಯಸಂಕಲ್ಪದಿಂದ ಕಾಮಾದಿ ದೋಷಗಳೂ ಕಾಮಾದಿಗಳಿಂದ ಅವಕ್ಕೆ ಅನುಗುಣವಾದ ನಿಶ್ಚಯವೂ ಆಗಿಬಿಡುತ್ತದೆ. 'ಹೀಗೆ ಮಾಡಿಯೇತೀರುವೆನು' ಎಂಬ ನಿಶ್ಚಯವೇ ಕ್ರತು. ಆ ಕ್ರತುವಿಗೆ ತಕ್ಕಂತೆ ಕರ್ಮವು ಆಗುತ್ತದೆ ; ಆ ಕರ್ಮಕ್ಕೆ ತಕ್ಕಂತೆ ಫಲಪ್ರಾಪ್ತಿಯಾಗಿ ತನ್ನನ್ನು ಅನುಭವಿಸುವಂತೆ ಬಲಾತ್ಕರಿಸುತ್ತದೆ.

'ಈಗ ಇಂಥ ಕಷ್ಟವನ್ನನುಭವಿಸುವದಕ್ಕೆ ಹಿಂದೆ ಯಾವ ಪಾಪವನ್ನು ಮಾಡಿದ್ದೆನೋ !' ಎಂದು ಬಹುಜನರು ಆಡಿಕೊಳ್ಳುತ್ತಿರುವರು. ಕರ್ಮಕ್ಕೆ ತಕ್ಕಂತೆ ಫಲವಾಗುವದೆಂಬ ನಂಬಿಕೆಯು ನಮ್ಮ ದೇಶದವರ ರಕ್ತದಲ್ಲಿ ಕೂಡಿಕೊಂಡು ಬಿಟ್ಟಿರುತ್ತದೆ. ಆದರೇನು ? ಪಾಪವನ್ನು ಮಾಡುವಾಗ 'ಇದು ಪಾಪವು' ಎಂದು ಗೊತ್ತಾಗುವದೇ ಇಲ್ಲ . ಪ್ರವರ್ತಕದೋಷದಿಂದ ಪ್ರೇರಿತರಾಗಿಯೇ ಜನರು ಆಯಾ

ಕರ್ಮದಲ್ಲಿ ತೊಡಗಿಬಿಡುತ್ತಾರೆ ! ಪುಣ್ಯಪಾಪಗಳು ಅತೀಂದ್ರಿಯತತ್ತ್ವಗಳಾಗಿರುತ್ತವೆ. 'ನಾನು ಧರ್ಮವು, ನಾನು ಅಧರ್ಮವು ಎಂದು ಹೇಳಿಕೊಂಡು ಧರ್ಮಾಧರ್ಮಗಳು ಎಲ್ಲರ ಮುಂದೆಯೂ ಸಂಚರಿಸುವದಿಲ್ಲ' ಎಂದು ಆಪಸ್ತಂಬರು ತಮ್ಮ ಧರ್ಮಸೂತ್ರದಲ್ಲಿ ಬರೆದಿರುತ್ತಾರೆ. ಕಾಡುಕಿಚ್ಚಿನಂತೆ, ಅಥವಾ ಉಕ್ಕೇರಿ ದಡದಮೇಲಕ್ಕೆ ಹರಿದುಬಂದ ಸಮುದ್ರದ ನೆರೆಯಂತೆ, ನಮ್ಮೆದುರಿಗೆ ಬಂದು ಪಾಪಪುಣ್ಯಗಳು ಕಾಣುವಂತಿದ್ದರೆ ನಾವು ಯಾರೂ ಪಾಪವನ್ನು ಮಾಡುತ್ತಿರಲಿಲ್ಲ . ಪಾಪಕ್ಕಾಗಲಿ ಪುಣ್ಯಕ್ಕಾಗಲಿ ನಮ್ಮಲ್ಲಿರುವ ಪ್ರವರ್ತಕದೋಷಗಳೇ ಕಾರಣವಾಗಿರುತ್ತವೆ. ಮನುಷ್ಯನು ಆಯಾ ದೋಷಗಳಿಗನುಗುಣವಾಗಿ ಕರ್ಮವನ್ನು ಮಾಡಿ ಅದೇ ಭಾವನೆಯಿಂದ ಆಯಾ ಫಲವನ್ನು ಪಡೆದುಕೊಳ್ಳುತ್ತಾನೆ.

**ತದೇವ ಸಕ್ತಃ ಸಹ ಕರ್ಮಣೈತಿ ಲಿಙ್ಗಂ ಮನೋ ಯತ್ರ ನಿಷಕ್ತಮಸ್ಯ ।**
**ಪ್ರಾಪ್ಯಾನ್ತಂ ಕರ್ಮಣಸ್ತಸ್ಯ ಯತ್ಕಿಂಚೇಹ ಕರೋತ್ಯಯಮ್ ।**
**ತಸ್ಮಾಲ್ಲೋಕಾತ್ ಪುನರೈತ್ಯಸ್ಮೈ ಲೋಕಾಯ ಕರ್ಮಣ ಇತಿ ನು ಕಾಮಯಮಾನಃ ॥** ಬೃ. ೪-೪-೬

'ಮನುಷ್ಯನು ಕಾಮಪ್ರೇರಿತನಾಗಿ ಯಾವಯಾವ ಬಗೆಯ ಕರ್ಮವನ್ನು ಮಾಡುವನೋ ಆಯಾ ಫಲದಲ್ಲಿ ಆಸಕ್ತನಾಗಿ ಕರ್ಮದೊಡನೆ ಆಯಾ ಫಲಭೋಗಕ್ಕೆ ತೆರಳುತ್ತಾನೆ. ಈ ಲೋಕದಲ್ಲಿ ಮಾಡಿದ ಕರ್ಮವೇನೇನು ಇದೆಯೋ ಅದಕ್ಕೆ ತಕ್ಕಂತೆ ಫಲವನ್ನು ಅನುಭವಿಸಿ ಮುಗಿಸಿದ ಬಳಿಕ ಆ ಲೋಕದಿಂದ ಈ ಕರ್ಮಭೂಮಿಯಾದ ಮನುಷ್ಯಲೋಕಕ್ಕೆ ಮರಳಿಬರುವನು,' ಮನುಷ್ಯನು ಮಾಡುವ ಪಾಪಕರ್ಮವು ತಾರತಮ್ಯದಿಂದ ತನತನಗೆ ತಕ್ಕ ದುಃಖವನ್ನು ಕೊಡುವ ಸ್ಥಾವರಾಂತವಾದ ಯೋನಿಗಳನ್ನು ಕೊಡುವದು. ಮನುಷ್ಯನಿಗಿಂತ ಮೂಕಜಂತುಗಳು, ಮೃಗಗಳು, ಪಕ್ಷಿಗಳು, ಕ್ರಿಮಿಕೀಟಗಳು, - ಅವುಗಳಿಗಿಂತ ಸ್ಥಾವರಪ್ರಾಣಿಗಳು - ಇವುಗಳ ಜನ್ಮವನ್ನು ಪಡೆದು ದುಃಖವನ್ನು ಅಲ್ಲಲ್ಲಿ ಅನುಭವಿಸಿ ಮುಗಿಸಬೇಕಾಗುವದು. ಇದರಂತೆ ಪುಣ್ಯಕರ್ಮವನ್ನೂ ಉಪಾಸನೆಯನ್ನೂ ಮಾಡಿದವರಿಗೆ ತಾರತಮ್ಯದಿಂದ ಮನುಷ್ಯಜನ್ಮದಿಂದ ಹಿಡಿದು ಬ್ರಹ್ಮಲೋಕದವರೆಗೂ ಸುಖತಾರತಮ್ಯವನ್ನು ನೀಡುವ ಉಪಭೋಗಕ್ಕೆಂದು ಪುಣ್ಯವು ಕಾದುಕೊಂಡಿರುತ್ತದೆ. ಹೀಗೆ ಕಾಯಿಕ, ವಾಚಿಕ, ಮಾನಸಿಕ - ಕರ್ಮಗಳು ಪಾಪವು ಹೆಚ್ಚಿದಂತೆ ಅಧೋಗತಿಯನ್ನೂ ಪುಣ್ಯವು ಹೆಚ್ಚಾದಂತೆ ಊರ್ಧ್ವಗತಿಯನ್ನೂ ಕೊಡುವವು ; ಪಾಪಪುಣ್ಯಗಳು ಸಮಪ್ರಮಾಣವಾದಾಗ ಮನುಷ್ಯಜನ್ಮವೇ ಬರುವದು. ಯಾವ ಕರ್ಮಕ್ಕೆ ಯಾವ ಫಲವನ್ನು ಪಡೆಯಬೇಕೋ - ಎಂಥ ಪುಣ್ಯಪಾಪಶರೀರವನ್ನು ಪಡೆದಿರಲಿ - ಆಯಾ ಕರ್ಮದ

ಫಲವನ್ನು ಅನುಭವಿಸಿದ ಬಳಿಕ ಮರಳಿ ಈ ಮನುಷ್ಯಲೋಕಕ್ಕೇ ಬಂದು ಮತ್ತೆ ಕರ್ಮದಲ್ಲಿ ತೊಡಗಬೇಕಾಗುವದು. ಕರ್ಮಫಲಭೋಗಾಂತ್ಯದಲ್ಲಿ ಎಂಥ ಪುಣ್ಯದ ಅಥವಾ ಪಾಪದ ವಾಸನೆಯು ಎದ್ದುಕೊಂಡಿರುವದೋ ಅದಕ್ಕೆ ಅನುಗುಣವಾದ ಜನ್ಮವನ್ನು ಪಡೆದೇ ಇಲ್ಲಿ ಕರ್ಮವನ್ನು ಮಾಡಬೇಕಾಗುವದು. ಹೀಗೆ ಕಾಮವು ನಮ್ಮನ್ನು ಕರ್ಮದಲ್ಲಿ ದೂಡುತ್ತಲೂ ತಕ್ಕ ಫಲವನ್ನು ಉಣ್ಣಿಸುತ್ತಲೂ ಮತ್ತೆಮತ್ತೆ ಕರ್ಮದಲ್ಲಿ ತೊಡಗಿಸುತ್ತಲೂ ಇರುತ್ತದೆ. ಹೀಗಿರುತ್ತದೆ, ಸಂಸಾರದ ರಾಟೆಯ ಚಕ್ರ ! ಕಾಮದ ಆಟ ! **'ಆಶಾ ಯಾ ಯೇ ದಾಸಾಸ್ತೇ ದಾಸಾಃ ಸರ್ವಸ್ಯ ಲೋಕಸ್ಯ'** ಆಶೆಗೆ ಅಡಿಯಾಳಾದವರು ಎಲ್ಲರಿಗೂ ಅಡಿಯಾಳುಗಳೇ ಎಂಬ ಲೋಕೋಕ್ತಿಯಲ್ಲಿ ಈ ತತ್ತ್ವವು ಅಡಗಿರುತ್ತದೆ.

ಅಂತೂ ಹೀಗೆ ಕಾಮಕರ್ಮಗಳ ವಶನಾಗಿ ಈ ನಮ್ಮ ಆತ್ಮನು ಸಂಸಾರದಲ್ಲಿ ತೊಳಲುತ್ತಿದ್ದರೂ ಕರ್ಮವನ್ನು ಮೀರುವುದಕ್ಕೇ ಬರುವದಿಲ್ಲವೆಂಬ ಅಂಜಿಕೆಯೇನೂ ಇಲ್ಲ . ಏಕೆಂದರೆ ನಾವು ಮಾಡುವ ಎಲ್ಲಾ ವ್ಯವಹಾರಕ್ಕೂ ಬೆಳಕಾಗಿ ನಮ್ಮ ಆತ್ಮಜ್ಯೋತಿಯು ಇದ್ದೇ ಇರುತ್ತದೆ. 'ನಾನು ವಿಜ್ಞಾನಾತ್ಮನಾಗಿ ಈಗ ತೋರುತ್ತಿದ್ದರೂ ನನ್ನ ನಿಜವಾದ ಸ್ವರೂಪವಿದು' - ಎಂಬುದನ್ನು ಅನುಭವಾನುಸಾರವಾಗಿ ಅರಿತು ಕೊಂಡು ಎಲ್ಲಾ ಕಾಮಕರ್ಮದ ಪಾಶವನ್ನೂ ಹರಿದುಹಾಕುವದಕ್ಕೆ ಎಲ್ಲರಿಗೂ ಅವಕಾಶವು ಇದ್ದೇ ಇರುತ್ತದೆ. ಅದಕ್ಕೆ ಶಾಸ್ತ್ರದೃಷ್ಟಿಯು ಮಾತ್ರ ಅವಶ್ಯವಾಗುತ್ತದೆ. ಅಷ್ಟೆ.

## ೭. ಆತ್ಮಾನಾತ್ಮರ ಸಂಯೋಗ

(8-8-64)

ನಮಗೆ ಕಲ್ಪಿತರೂಪ, ಪರಮಾರ್ಥರೂಪ - ಎಂದು ಎರಡು ರೂಪ ಗಳುಂಟು. 'ನಾನು' ಎಂದು ನಮಗೆಲ್ಲರಿಗೂ ಅನುಭವದಲ್ಲಿರುವ ರೂಪದಲ್ಲಿ ಈ ಎರಡೂ ಬೆರಕೆಯಾಗಿವೆ. **ವಿಜ್ಞಾನಾತ್ಮ** ಎಂದರೆ ವಿಶೇಷಜ್ಞಾನವುಳ್ಳ ಆತ್ಮನು. ನೋಡುವವ, ಕೇಳುವವ, ಮೂಸುವವ, ಮುಟ್ಟುವವ, ಸವಿಯುವವ - ಎಂದು ಹೊರಗಿನ ವಿಷಗಳನ್ನು ಅರಿಯುವ ರೂಪವು ಪರಿಚ್ಛಿನ್ನರೂಪವು ; ಅದನ್ನೇ ಶಾರೀರಾತ್ಮ, ಜೀವಾತ್ಮ - ಎಂದೂ ಕರೆದಿರುವದು. ಅದು ನಮ್ಮ ಪೂರ್ಣರೂಪವಲ್ಲ. ಇವುಗಳೊಳಗೆಲ್ಲ ಶುದ್ಧವಾದ ಅರಿವಿನ ರೂಪದಿಂದ ವ್ಯಾಪಿಸಿಕೊಂಡಿರುವ 'ಆತ್ಮ' ರೂಪವೇ ನಮ್ಮ ನಿಜವಾದ ರೂಪವು. ಆ ರೂಪವನ್ನು ಅರಿತುಕೊಂಡರೆ ನಾವು

ಎಲ್ಲವನ್ನೂ ಅರಿತಂತೆ ಆಗುವದು. ಆ ರೂಪವನ್ನೇ ಬ್ರಹ್ಮವೆಂದು ಕರೆಯುವದು. ನಾವು ನಿಜವಾಗಿ ಬ್ರಹ್ಮಸ್ವರೂಪರೇ ಆಗಿದ್ದರೂ ಶರೀರ, ಇಂದ್ರಿಯ, ಮನಸ್ಸು - ಇವುಗಳ ಸಂಯೋಗದಿಂದ **ಶಾರೀರಾತ್ಮರಾಗಿದೇವೆ**, **ಜೀವಾತ್ಮರಾಗಿದೇವೆ**, **ವಿಜ್ಞಾನಾತ್ಮ** ರಾಗಿದೇವೆ.

ಈ ಅಭಿಪ್ರಾಯವನ್ನು ಭಗವಂತನು :

**ಯಾವತ್ಸಂಜ್ಞಾಯತೇ ಕಿಞ್ಚಿತ್ಸತ್ತ್ವಂ ಸ್ಥಾವರಜಙ್ಗಮಮ್ ।**
**ಕ್ಷೇತ್ರಕ್ಷೇತ್ರಜ್ಞಸಂಯೋಗಾತ್ ತದ್ವಿದ್ಧಿ ಭರತರ್ಷಭ ॥** ಗೀ. ೧೩-೨೬

ಸ್ಥಾವರಪ್ರಾಣಿಯಾಗಲಿ, ಜಂಗಮಪ್ರಾಣಿಯಾಗಲಿ ಯಾವದೊಂದು ಪ್ರಾಣಿಯು ಹುಟ್ಟುತ್ತಿರುವದೋ ಅದೆಲ್ಲವೂ ಕ್ಷೇತ್ರ , ಕ್ಷೇತ್ರಜ್ಞ - ಇವೆರಡರ ಸಂಯೋಗದಿಂದಲೇ ಹುಟ್ಟುತ್ತಿರುವದು - ಎಂದು ತಿಳಿದುಕೊ ಎಂದು ಹೇಳಿರುತ್ತಾನೆ. ಮಹಾಭೂತಗಳು , ಅಹಂಕಾರ , ಬುದ್ಧಿ, ಅವ್ಯಕ್ತ, ಇಂದ್ರಿಯಗಳು , ಇಂದ್ರಿಯಾರ್ಥ ಗಳು, ಇಚ್ಛೆ, ದ್ವೇಷ, ಸುಖ, ದುಃಖ, ದೇಹೇಂದ್ರಿಯಸಂಘಾತ, ಅದರ ಲ್ಲುಂಟಾಗುತ್ತಿರುವ ಅರಿವು , ಧೃತಿ - ಇವೆಲ್ಲವೂ ಸೇರಿ ಕ್ಷೇತ್ರವೆನಿಸಿರುವದು. ಆ ಕ್ಷೇತ್ರವೂ ಅದನ್ನು ತನ್ನ ನಿತ್ಯಚೈತನ್ಯರೂಪದಿಂದ ಬೆಳಗುತ್ತಿರುವ ನಮ್ಮ ನಿಜವಾದ ಸ್ವರೂಪವೂ ಅವಿವೇಕದಿಂದ ಕಲೆಬೆರಕೆಯಾಗಿಯೇ 'ಶಾರೀರಾತ್ಮನು', 'ಜೀವನು' ಅಥವಾ 'ವಿಜ್ಞಾನಾತ್ಮನು' - ಎಂಬ ಹೆಸರಿನ ಪ್ರಾಣಿಯಾಗಿರುತ್ತಾನೆ. ಈ ರೂಪದಿಂದಲೇ ಜೀವರು ಕಾಮಮಯರು, ಕರ್ತೃಗಳು, ಭೋಕ್ತೃಗಳು - ಎಂದೆನಿಸಿಕೊಂಡು ಬ್ರಹ್ಮಾದಿಸ್ಥಾವರಜನ್ಮದವರೆಗಿನ ಬಗೆಬಗೆಯ ಶರೀರಗಳನ್ನು ಧರಿಸುತ್ತಾ ಸುಖದುಃಖಗಳನ್ನು ಅನುಭವಿಸುತ್ತಾ ಸಂಸಾರದಲ್ಲಿ ತೊಳಲುತ್ತಿರುವರು. ಏನೂ ಅರಿಯದ ಪಶುಪ್ರಾಣಿಗಳಂತಿರಲಿ, ಶಾಸ್ತ್ರಗಳನ್ನು ಓದಿ ಕಲಿತಿರುವೆವೆಂದು ಹೆಮ್ಮೆ ಪಡುತ್ತಿರುವ ಪಂಡಿತರು ಕೂಡ ಈ ಕ್ಷೇತ್ರಕ್ಷೇತ್ರಜ್ಞಸಂಯೋಗರೂಪವಾದ ಅವಿದ್ಯೆಗೆ ಪಕ್ಕಾಗಿರುವವರೇ. ಶ್ರೀಶಂಕರಭಗವತ್ಪಾದರವರು ಪಂಡಿತರಾದ ಜೀವರುಗಳ ವಿಷಯಕ್ಕೆ ಹೀಗೆಂದು ಬರೆದಿರುತ್ತಾರೆ :

**ಅಥ ಕಿಮಿದಂ ಸಂಸಾರಿಣಾಮಿವ 'ಅಹಮೇವಮ್ ', 'ಮಮ ಇದಮ್ ' ಇತಿ ಪಣ್ಡಿತಾನಾಮಪಿ ? ಶೃಣು । ಇದಂ ತತ್ಪಾಣ್ಡಿತ್ಯಂ ಯತ್ ಕ್ಷೇತ್ರೇ ಏವಾತ್ಮ ದರ್ಶನಮ್ । ಯದಿ ಪುನಃ ಕ್ಷೇತ್ರಜ್ಞಮ್ ಅವಿಕ್ರಿಯಂ ಪಶ್ಯೇಯುಃ ತತೋ ನ ಭೋಗಂ ಕರ್ಮ ವಾ ಆಕಾಙ್ಕ್ಷೇಯುಃ, 'ಮಮ ಸ್ಯಾತ್' ಇತಿ । ವಿಕ್ರಿಯೈವ ಹಿ ಭೋಗಕರ್ಮಣೀ । ಅಥೈವಂ ಸತಿ, ಫಲಾರ್ಥಿತ್ವಾತ್**

**ಅವಿದ್ವಾನ್ ಪ್ರವರ್ತತೇ । ವಿದುಷಃ ಪುನರವಿಕ್ರಿಯಾತ್ಮದರ್ಶಿನಃ ಪ್ರವೃತ್ತ್ಯನುಪಪತ್ ಕಾರ್ಯಕರಣಸಙ್ಘಾತ ವ್ಯಾಪಾರೋಪರಮೇ ನಿವೃತ್ತಿರುಪಚರ್ಯತೇ ॥** ಗೀ. ಭಾ. ೧೩-೨.

ಪ್ರಶ್ನೆ : – ಸಂಸಾರಿಗಳಂತೆ ಪಂಡಿತರು ಕೂಡ 'ನಾನು ಇಂಥವನು', 'ಇದು ನನ್ನದೇ' –ಎಂದು ಭಾವಿಸುತ್ತಿರುವರಲ್ಲ ಇದೇಕೆ ?

**ಉತ್ತರ** :– ಕೇಳು. ಕ್ಷೇತ್ರದಲ್ಲಿ ಆತ್ಮಬುದ್ಧಿಯಿರುವದೇ ಅವರ ಈ ಪಾಂಡಿತ್ಯವು. ಹಾಗಲ್ಲದೆ ಅವಿಕಾರಿಯಾದ ಕ್ಷೇತ್ರಜ್ಞನನ್ನೇ ಅರಿತುಕೊಂಡಿದ್ದರೆ, ಆಗ 'ಇದು ನನಗಾಗಲಿ !' ಎಂದು ಭೋಗವನ್ನಾಗಲಿ, ಕರ್ಮವನ್ನಾಗಲೀ ಬಯಸುತ್ತಿರಲಿಲ್ಲ. ಭೋಗಕರ್ಮಗಳು ವಿಕಾರವೇ ಅಲ್ಲವೆ ? ಹೀಗಿರುವದರಿಂದ ಅಜ್ಞನು ಫಲದಾಸೆಯಿಂದ ಕರ್ಮದಲ್ಲಿ ತೊಡಗುತ್ತಿರುತ್ತಾನೆ ; ಅವಿಕ್ರಿಯನಾದ ಆತ್ಮನನ್ನು ಕಂಡುಕೊಂಡಿರುವ ಜ್ಞಾನಿಗೊ, ಎಂದರೆ ಫಲದಾಶೆ ಇರುವದಿಲ್ಲವಾದ್ದರಿಂದ ಕಾರ್ಯಕರಣಸಂಘಾತವು ಅದಕ್ಕಾಗಿ ಯಾವ ಕರ್ಮದಲ್ಲಿಯೂ ತೊಡಗುವದಿಲ್ಲ ವೆಂಬುದನ್ನೇ 'ಕರ್ಮನಿವೃತ್ತಿ'ಯಾಯಿತೆಂದು ಉಪಚಾರಕ್ಕೆ ಕರೆಯುತ್ತಾರೆ – ಎಂಬುದು ಭಾಷ್ಯಾರ್ಥ. ಸುಮ್ಮನೆ ಓದುಬರಹದಿಂದ ಜ್ಞಾನಿಗಳಾಗುವಂತಿಲ್ಲ . ಅಂಥವರನ್ನು **'ಓದಿದ ಮೂರ್ಖರು'** ಎಂದು ಸಮರ್ಥರಾಮದಾಸರು ಕರೆದಿರುತ್ತಾರೆ.

ನಿಜವೇನೆಂದರೆ : ಲೌಕಿಕಜ್ಞಾನವು ಆಯಾ ಫಲಕ್ಕಾಗಿ ಆಯಾ ಕರ್ಮವನ್ನು ಮಾಡುವಂತೆ ಪ್ರೇರಿಸುತ್ತಲೇ ಇರುತ್ತದೆ ; ಆ ಕರ್ಮವು ಮತ್ತೆ ಜೀವನಿಗೆ ಬಂಧಕವಾಗಿ ಬೇರೊಂದು ಶರೀರಧಾರಣೆಗೆ ಕಾರಣವಾಗುತ್ತದೆ. ನಮಗೆ ಆಗಿರುವ ಶರೀರೇಂದ್ರಿಯ ಸಂಯೋಗದಿಂದ ಮುಕ್ತರಾಗುವದಕ್ಕೆ ಮೊಟ್ಟಮೊದಲನೆಯ ಉಪಾಯವೆಂದರೆ ಶಾಸ್ತ್ರದೃಷ್ಟಿಯನ್ನು ಸಂಪಾದಿಸಿಕೊಳ್ಳುವದು.

**ತಸ್ಮಾಚ್ಛಾಸ್ತ್ರಂ ಪ್ರಮಾಣಂ ತೇ ಕಾರ್ಯಾಕಾರ್ಯವ್ಯವಸ್ಥಿತೌ ।**
**ಜ್ಞಾತ್ವಾ ಶಾಸ್ತ್ರವಿಧಾನೋಕ್ತಂ ಕರ್ಮ ಕರ್ತುಮಿಹಾರ್ಹಸಿ ॥** ಗೀ. ೧೬-೨೪

ಸ್ವೇಚ್ಛೆಯಿಂದ ವರ್ತಿಸುತ್ತಿರುವವರು ಕಾಮಕ್ರೋಧಾದಿಪರವಶರಾಗಿರು ವದರಿಂದ ಅವರಿಗೆ ಯಾವ ಪುರುಷಾರ್ಥವೂ ಲಭಿಸುವದಿಲ್ಲ; ಇಹದಲ್ಲಿ ಸುಖವಿಲ್ಲ, ಪರದಲ್ಲಿ ಗತಿಯಿಲ್ಲ . ಆದ್ದರಿಂದ ಶಾಸ್ತ್ರದಲ್ಲಿ ಯಾವದನ್ನು ಮಾಡಬೇಕೆಂದು ಹೇಳಿದೆಯೋ ಅದನ್ನು ಮಾಡಬೇಕು , ಯಾವದನ್ನು ಬಿಡಬೇಕೆಂದು ಹೇಳಿದೆಯೋ ಅದನ್ನು ಬಿಡಬೇಕು. ಇದರಿಂದಲೇ ನಮಗೆ ಕರ್ಮಬಂಧವು ತಪ್ಪುವ ಉಪಾಯವು ಸಿಕ್ಕುತ್ತದೆ.

ಶಾಸ್ತ್ರದಲ್ಲಿ ಹೇಳಿರುವ ಕಾಮ್ಯಕರ್ಮಗಳಿಂದ ಲೌಕಿಕಕರ್ಮಗಳ ಬಂಧವು ತಪ್ಪುತ್ತದೆ. ಆ ಕಾಮ್ಯಕರ್ಮಗಳನ್ನು ಬಿಟ್ಟು ನಿತ್ಯಕರ್ಮವನ್ನೇ ಮಾಡುವವರು ಕಾಮದ ಉಪಟಳಕ್ಕೆ ಸಿಕ್ಕುವ ಸಂಭವವು ಕಡಿಮೆ. ನಿತ್ಯಕರ್ಮವನ್ನಾದರೂ ಭಗವಂತನ ಅರ್ಚನೆ ಎಂಬ ಬುದ್ಧಿಯಿಂದ ಮಾಡುವ ಕರ್ಮಯೋಗವನ್ನು ಅನುಸರಿಸುವದು ಇನ್ನೂ ಮೇಲಿನ ಭೂಮಿಕೆಯು. ಆದರಿಂದ ಕರ್ಮಗಳಿಂದಾಗುವ ಪುಣ್ಯಾಪುಣ್ಯಗಳು ನಮ್ಮನ್ನು ಕಟ್ಟಿಹಾಕದಂತೆ ಮಾಡಿಕೊಳ್ಳಬಹುದು ; ಶರೀರದ ಅಭಿಮಾನವೂ ಸಡಿಲವಾಗುತ್ತದೆ.

ಇಂದ್ರಿಯಗಳು ನಮಗೆ ತೋರಿಸುತ್ತಿರುವ ವಿಷಯಗಳಲ್ಲಿ 'ಇದು ನನಗೆ ಆಗಬೇಕು' - ಎಂಬ ಬುದ್ಧಿಯೇ ಬಂಧಕವಾಗಿರುತ್ತದೆ . ಸತ್ತ್ವರಜಸ್ತಮೋರೂಪವಾದ ತ್ರಿಗುಣಗಳಿಂದಾಗಿರುವ ವಿಷಯಗಳ ಹರಡಿಕೆಯನ್ನೇ ಮಾಯೆ ಎಂದು ಶಾಸ್ತ್ರದಲ್ಲಿ ಕರೆದಿರುತ್ತದೆ. ಅದನ್ನು ತಪ್ಪಿಸಿಕೊಳ್ಳುವದಕ್ಕೂ ಒಂದು ಉಪಾಯವನ್ನು ಶಾಸ್ತ್ರದಲ್ಲಿ ಹೇಳಿದೆ.

**ದೈವೀ ಹ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ ।**

**ಮಾಮೇವ ಯೇ ಪ್ರಪದ್ಯನ್ತೇ ಮಯಾಮೇತಾಂ ತರನ್ತಿ ತೇ ॥** ಗೀ. ೭-೧೪

'ಈ ನನ್ನ ದೈವಮಾಯೆಯು ಗುಣಮಯವಾಗಿರುತ್ತದೆ ; ಇದನ್ನು ದಾಟುವದು ಸಾಮಾನ್ಯರಿಗೆ ಅಳವಡಲಾರದು. ಆದರೆ ನನ್ನನ್ನೇ ಯಾರು ಶರಣುಹೊಂದುವರೋ ಅವರು ಈ ಮಾಯೆಯನ್ನು ದಾಟುವರು' ಎಂದು ಭಗವಂತನು ಅಪ್ಪಣೆ ಕೊಡಿಸಿರುತ್ತಾನೆ. ಹೊರಗೆ ಕಾಣಿಸುತ್ತಿರುವ ವಿಷಯಗಳ ಭೋಗವು ನಮಗೆ ಆಗಬೇಕೆಂದು ಹವಣಿಸುವದೇ ಮಾಯಾಬಂಧವು. ಆದರೆ ಆ ವಿಷಯಗಳಲ್ಲಿಯೇ ಭಗವಂತನ ಮಹಿಮೆಯು ಹೊರಸೂಸುತ್ತಿದೆ. ಶಾಸ್ತ್ರದಲ್ಲಿ ಹೇಳಿಕೊಟ್ಟಿರುವ ರೀತಿಯನ್ನು ಅನುಸರಿಸಿ ಅವುಗಳಲ್ಲಿ ಕಾಣಬರುತ್ತಿರುವ ಹೆಚ್ಚುಗಾರಿಕೆಯು ಭಗವಂತನ **ವಿಭೂತಿಯೇ** ಎಂಬುದನ್ನು ಮನದಂದು ಪೂಜ್ಯಬುದ್ಧಿಯಿಂದ ಕಾಣುತ್ತಾಬಂದಂತೆ ಅಲ್ಲೆಲ್ಲ ಭಗವದ್ಭಾವನೆಯು ನಮ್ಮ ಮನದಲ್ಲಿ ಮೂಡುವದಕ್ಕೆ ಮೊದಲಾಗುತ್ತದೆ. ಆ ಬಳಿಕ ಮಾಯೆಯು ನಮ್ಮನ್ನು ಕಾಡುವದಿಲ್ಲ ; ಮಾಯೆಯು ಮಾಯವಾಗಿ ಅದರ ಸ್ಥಾನದಲ್ಲಿ ಭಗವಂತನ ಮಹಿಮೆಯು ಹೊರತೋರುವದಕ್ಕಾರಂಭಿಸುತ್ತದೆ.

ಅಧ್ಯಾತ್ಮವಿದ್ಯೆಯು ಭಾವನಾಪ್ರಧಾನವೆಂದೂ ಜ್ಞಾನಪ್ರಧಾನವೆಂದೂ ಎರಡು ಬಗೆ - ಎಂದು ಆಗಲೆ ಹೇಳಿದ್ದಾಗಿದೆ. ಆದ್ದರಿಂದ ಉಪಾಸನೆ, ತತ್ತ್ವವಿಚಾರ - ಇವೆರಡನ್ನೂ ಜೊತೆಯಲ್ಲಿಯೇ ನಡೆಯಿಸುತ್ತಾ ಹೋಗಬೇಕು. ಉಪಾಸನೆಯು ಶಾಸ್ತ್ರೋಕ್ತವಾದ ರೀತಿಯಲ್ಲಿ ಗುರೂಪದಿಷ್ಟವಾಗಿರಬೇಕು ; ವಿಚಾರವು

ಶಾಸ್ತ್ರೋಕ್ತವಾಗಿ ಗುರೂಪದಿಷ್ಟಮಾರ್ಗದಿಂದಿರಬೇಕಲ್ಲದೆ ಅನುಭವಾನುಗುಣವಾಗಿಯೂ ಇರಬೇಕು. ಸಾಧನವೂ ಸಿದ್ಧಾಂತವೂ ಸಮರಸವಾಗಿ ಮನಸ್ಸಿಗೆ ಕಾಣುವಂತೆ ಎರಡನ್ನೂ ಹೊಂದುಗಡೆಮಾಡಿಕೊಂಡೇ ವಿಚಾರಮಾರ್ಗದಲ್ಲಿ ಮುನ್ನಡೆಯಬೇಕು.

'ಕ್ಷೇತ್ರಕ್ಷೇತ್ರಜ್ಞರ ಸಂಯೋಗದಿಂದ ನೀನು ಶಾರೀರನಾಗಿರುವೆ. ಶರೀರೇಂದ್ರಿಯಾದಿಗಳು ಮಾಯಾನಿರ್ಮಿತವಾದ ಆನೆಯಂತೆಯೂ ಕನಸಿನಲ್ಲಿ ಕಾಣುವ ವಸ್ತುವಿನಂತೆಯೂ ಗಂಧರ್ವನಗರಾದಿಗಳಂತೆಯೂ, ಹುಸಿತೋರಿಕೆಯಾಗಿದ್ದೇ ಸತ್ಯವಾಗಿರುವಂತೆ ಕಾಣಿಸುತ್ತಿವೆ ' ಎಂದು ಬಲ್ಲವರು ಎಷ್ಟೇ ವಿಧವಾಗಿ ಬೋಧಿಸಿದಮೇಲೂ ಲೌಕಿಕಜನಕ್ಕೆ ಅವುಗಳಲ್ಲಿ ಸತ್ಯತ್ವಬುದ್ಧಿಯು ತೊಲಗದೆ ಇರುತ್ತದೆ. ಆದ್ದರಿಂದ ಶರೀರಾದ್ಯಭಿಮಾನವನ್ನು ತಪ್ಪಿಸುವದಕ್ಕೆ ಶಾಸ್ತ್ರೀಯಸಾಧನಗಳನ್ನು ಮಾಡುತ್ತಾ ತತ್ತ್ವವಿಚಾರವನ್ನು ಮಾಡುತ್ತಿರಬೇಕು ; ಶರೀರ , ಇಂದ್ರಿಯ , ಮನಸ್ಸು - ಇವುಗಳಲ್ಲಿಯೂ ಆತ್ಮನ ಚೈತನ್ಯವು ಹೊರಸೂಸುತ್ತಿರುತ್ತದೆ. ಆದ್ದರಿಂದ ಇವು ಜ್ಞಾನದ್ವಾರಗಳೂ ಆಗಿರುತ್ತವೆ. ಇದರ ಕಡೆಗೆ ಮನಸ್ಸಿಟ್ಟು ವಿಚಾರಮಾಡಬೇಕು.

ಈ ಜೀವನಿಗೂ ಪರಮಾರ್ಥವಾದ ಬ್ರಹ್ಮಕ್ಕೂ ಏನು ಸಂಬಂಧ ? - ಎಂದರೆ

**ಸ ವಾ ಏಷ ಮಹಾನಜ ಆತ್ಮಾಽಜರೋಽಮರೋಽಮೃತೋಽಭಯೋ ಬ್ರಹ್ಮ ॥** ಬೃ. ೪-೪-೨೫

ಇವನೇ ಶರೀರಾದಿಗಳ ಧರ್ಮವಿಲ್ಲದ ಅಮೃತಸ್ವರೂಪನಾದ ಬ್ರಹ್ಮವು. ಇದೇ ಇವರಿಬ್ಬರಿಗೂ ಸಂಬಂಧ . ಆತ್ಮನೇ ಬ್ರಹ್ಮ , ಹಾಗೆಂದು ಅರಿತುಕೊಂಡರೆ ಆಯಿತು . ಅಷ್ಟರಿಂದಲೇ ಬ್ರಹ್ಮವಾಗಿಬಿಡುತ್ತಾನೆ . ಹೀಗಿದ್ದರೂ

**ಸ ವಾ ಅಯಮಾತ್ಮಾ ಬ್ರಹ್ಮ ವಿಜ್ಞಾನಮಯೋ ಮನೋಮಯಃ ಪ್ರಾಣಮಯಃ ॥**

ಬ್ರಹ್ಮವೇ ಆಗಿರುವ ಇವನೇ ಮನೋಮಯಾದಿಧರ್ಮಗಳಿಂದ ಕೂಡಿ ಆಯಾ ಉಪಾಧಿಗಳೊಡನೆ ತಾದಾತ್ಮ್ಯದಿಂದ ವರ್ತಿಸುತ್ತಿರುವದು ಅನಾದಿಯಾದ ಅವಿದ್ಯಾವಾಸನೆಯಿಂದ, ಕಾಮಮಯನಾಗಿ ಕರ್ಮವನ್ನು ಮಾಡುತ್ತಲೇ ಇರುವದರಿಂದ . ಇದನ್ನು ಬಿಡಿಸಿಕೊಳ್ಳುವದಕ್ಕೆಂದೇ ಸಾಧನವನ್ನು ಉಪದೇಶಿಸಿರುತ್ತದೆ.

**ದೇಹಾತ್ಮಜ್ಞಾನವಜ್ಜ್ಞಾನಂ ದೇಹಾತ್ಮಜ್ಞಾನಬಾಧಕಮ್ ।**
**ಆತ್ಮನ್ಯೇವ ಭವೇದ್ ಯಸ್ಯ ಸ ನೇಚ್ಛನ್ನಪಿ ಮುಚ್ಯತೇ ॥**

ಉಪದೇಶಸಾಹಸ್ರಿ , ಪದ್ಯ

'ಈ ದೇಹವೇ ನಾನು' ಎಂದು ಗಟ್ಟಿಯಾಗಿ ಈಗ ಬಿಗಿದುಕೊಂಡಿರುವ ಬುದ್ಧಿಯಂತೆಯೇ 'ಪರಮಾತ್ಮನೇ ನಾನು, ದೇಹಾದಿಗಳು ಮಾಯಾಮಯವಸ್ತುಗಳಂತೆ ಹುಸಿ' ಎಂಬ ಬುದ್ಧಿಯು ಯಾವನಿಗೆ ದೃಢವಾಗುವದೋ ಅವನು ಬೇಡವೆಂದರೂ ಮುಕ್ತನಾಗುತ್ತಾನೆ – ಎಂದು ಆಚಾರ್ಯರು ಹೇಳಿರುತ್ತಾರೆ.

**ಅಶರೀರಂ ವಾವ ಸನ್ತಂ ನ ಪ್ರಿಯಾಪ್ರಿಯೇ ಸ್ಪೃಶತಃ ॥** ಛಾಂ. ೮-೧೨-೧

'ನಾವು ನಿಜವಾಗಿ ಅಶರೀರರಾಗಿಯೇ ಇರುತ್ತೇವೆ. ಶರೀರೇಂದ್ರಿಯ ಮನಸ್ಸುಗಳ ಸಂಬಂಧವು ನಮಗೆ ಎಳ್ಳಷ್ಟೂ ಇರುವದೇ ಇಲ್ಲ' ಎಂಬ ಸಮ್ಯಗ್ಜ್ಞಾನವು ಮೂಡಿದಾಗ ನಮಗೆ ಎಲ್ಲಿಯ ಪ್ರಿಯಾಪ್ರಿಯಗಳು ? ಎಲ್ಲಿಯ ಸುಖದುಃಖಗಳು ? **ಚಿದಾನಂದರು** ಎಷ್ಟು ಜೋರಿನಿಂದ ಈ ಅರ್ಥವನ್ನು ಸಾರಿರುತ್ತಾರೆ !

**'ಬೆಂಕಿಯ ಹೊಗು ಎಂದರೆ ನಾ ಹೊಗುವೆನು ನೀನೀಗಲೇ ಪರಬ್ರಹ್ಮ'** ಹೀಗೆ ಶಪಥಮಾಡುವ ಜ್ಞಾನಿಗಳ ದೃಷ್ಟಿಯು ನಮಗೆ ಬರಬೇಕು. ಅದಕ್ಕಾಗಿ ನಾವು ಸಾಧನಗಳನ್ನು ಮಾಡುತ್ತಾ ಜ್ಞಾನದ್ವಾರಗಳನ್ನು ಅನುಸರಿಸಿಕೊಂಡು ತತ್ತ್ವವಿಚಾರವನ್ನು ಮಾಡುತ್ತಿರಬೇಕು. ಹಾಗಾದರೆ ಮಾತ್ರ ಆತ್ಮಾನಾತ್ಮ ಸಂಯೋಗದ ಕಗ್ಗಂಟನ್ನು ನಾವು ಬಿಚ್ಚಿಕೊಳ್ಳುವದಕ್ಕಾದೀತು.

# ೮. ನಮ್ಮಲ್ಲಿಯೇ ಹುದುಗಿಕೊಂಡಿರುವ ಪರಮಾತ್ಮ

(9–8–64)

**ಅಧ್ಯಾತ್ಮವಿದ್ಯೆ ಅಥವಾ ಬ್ರಹ್ಮವಿದ್ಯೆ** – ಎಂಬುದು ಸರ್ವವಿದ್ಯಾಪ್ರತಿಷ್ಠವಾದದ್ದು. ಅದರಲ್ಲಿಯೇ ಎಲ್ಲಾ ವಿದ್ಯೆಗಳೂ, ಕೊನೆಗಾಣಬೇಕಾಗಿದೆ. ಮಿಕ್ಕ ವಿದ್ಯೆಗಳು ತಮ್ಮತಮ್ಮ ವಿಷಯವನ್ನಷ್ಟೇ ತಿಳಿಸುವದರಿಂದ ಸೀಮಿತವಾಗಿರುತ್ತವೆ. ಇಂದ್ರಿಯಗಳಿಗೆ, ಅಥವಾ ಅವಕ್ಕೆ ಸಹಾಯಕವಾಗಿರುವ ಯಂತ್ರಗಳಿಗೆ, ಗೋಚರವಾಗುವ ಬಾಹ್ಯವಿಷಯಗಳು ಬರಿಯ ತರ್ಕದಿಂದ ಊಹಿಸುವದಕ್ಕೆ ಬರುವಂತಿರುವದಿಲ್ಲ ; ಇಂದ್ರಿಯಕ್ಕೆ ಗೋಚರವಾಗದ ಕೆಲವು ವಿಷಯಗಳನ್ನು ತರ್ಕದಿಂದ ಊಹಿಸುವದಕ್ಕೆ ಬರುತ್ತದೆ. ಇಂದ್ರಿಯಕ್ಕೂ ಪ್ರತ್ಯಯಗಳ ಆಧಾರದಿಂದ ಮಾಡುವ ತರ್ಕಕ್ಕೂ ಮೀರಿರುವ ತತ್ತ್ವವು ಅನುಭವಮಾತ್ರದಿಂದ ತಿಳಿಯತಕ್ಕದ್ದಾಗಿರುತ್ತದೆ. ಇ

ಈವರೆಗೆ ಗೊತ್ತುಪಡಿಸಿ ಕೊಂಡದ್ದಾಗಿದೆ. ಆತ್ಮನಿಗೂ ಶರೀರೇಂದ್ರಿಯಮನಸ್ಸುಗಳಿಗೂ ಗಂಟುಬಿದ್ದುಕೊಂಡಿರುವದರಿಂದ ನಾವು ಇರುವಂತೆ ನಮ್ಮ ಸ್ವರೂಪವನ್ನು ನಿಶ್ಚಯಿಸಿಕೊಳ್ಳುವದಕ್ಕೆ ಅಡ್ಡಿಯಾಗಿರುತ್ತದೆ. ಅನಾತ್ಮವಾದ ಶರೀರಾದಿಗಳೊಡನೆ ಆಗಿರುವ ಸಂಯೋಗವನ್ನು ಕೇವಲ ವಿಚಾರಮಾತ್ರದಿಂದ ಬಿಡಿಸಿಕೊಳ್ಳುವದು ಎಲ್ಲರಿಗೂ ಸಾಧ್ಯವಿಲ್ಲ . ಆದ್ದರಿಂದ ಆತ್ಮನೊಬ್ಬನೇ ಪರಮಾರ್ಥಸತ್ಯವೆಂದೂ ಅನಾತ್ಮವು ಬರಿಯ ಹುಸಿತೋರಿಕೆಯೆಂದೂ ಅನುಭವದಿಂದ ಗೊತ್ತಾಗುವದಕ್ಕೆ ಕೆಲಕೆಲವು ಸಾಧನಗಳನ್ನು ಶಾಸ್ತ್ರದಲ್ಲಿ ಹೇಳಿರುತ್ತದೆ. ಅವುಗಳನ್ನು ಕ್ರಮಬದ್ಧವಾಗಿ ಅನುಷ್ಠಾನಮಾಡುವದು ಅವಶ್ಯ – ಎಂಬುದನ್ನೂ ತಿಳಿದುಕೊಂಡದ್ದಾಗಿದೆ. ತತ್ತ್ವ ವಿಚಾರಕ್ರಮದಿಂದ ನಮ್ಮ ಆತ್ಮಸ್ವರೂಪವನ್ನು ಇದ್ದದ್ದು ಇದ್ದಂತೆ ಅರಿತುಕೊಳ್ಳುವ ಬಗೆ ಹೇಗೆ ? – ಎಂಬುದನ್ನು ಈಗ ಆಲೋಚನೆಗೆ ತೆಗೆದುಕೊಳ್ಳಬಹುದಾಗಿದೆ.

ವೇದಾಂತದ ಪರಮಸಿದ್ಧಾಂತವೇನೆಂದರೆ, ಇರುವದೆಲ್ಲವೂ ಒಂದೇಒಂದು ತತ್ತ್ವವು. ಅದೇ ನಮ್ಮಗಳ ಅಜ್ಞಾನದದೃಷ್ಟಿಯಿಂದ ನಮ್ಮ ಸ್ವರೂಪವಾಗಿಯೂ, ದೇಶ ಕಾಲನಿಮಿತ್ತಗಳ ಕಟ್ಟಿಗೆ ಒಳಪಟ್ಟ ಕ್ರಿಯಾಕಾರಕಫಲಾತ್ಮಕವಾದ ಜಗತ್ತಾಗಿಯೂ ತೋರುತ್ತಿರುತ್ತದೆ . ಈ ಜಗತ್ತಿನಲ್ಲಿ ನಮ್ಮಂತೆಯೇ ಅನೇಕ ಜೀವರುಗಳಿದ್ದುಕೊಂಡು ತಮ್ಮ ತಮ್ಮ ಕರ್ಮಾನುಸಾರವಾಗಿ ಫಲಗಳನ್ನು ಉಪಭೋಗಿಸುತ್ತಾ ಇರುತ್ತಾರೆ. ಆದರೆ ನಿಜವಾಗಿ ಅವರೆಲ್ಲರೂ ಆ ಪರಮಾರ್ಥತತ್ತ್ವವಾದ ಆತ್ಮನೇ ಆಗಿರುತ್ತಾರೆ. ಹೀಗೆ ಬಗೆಬಗೆಯ ನಾಮರೂಪಗಳಿಂದ ವಿಭಕ್ತವಾಗಿ ಅನೇಕ ಜೀವರುಗಳಿಂದೊಡ ಗೂಡಿ ತೋರುತ್ತಿರುವ ಈ ಜಗತ್ತಿಗೆ ವ್ಯಾಕೃತಪ್ರಪಂಚವೆಂದು ಹೆಸರು. ಇದೇ ಪ್ರಪಂಚವೇ ಪ್ರಲಯಕಾಲದಲ್ಲಿ ಅವ್ಯಾಕೃತವಾಗಿರುತ್ತದೆ ; ಬಗೆಬಗೆಯಾಗಿ ಹರಡಿಕೊಂಡು ತೋರುವ ಮರವು ಹುಟ್ಟುವಮುಂಚೆ ಬೀಜರೂಪದಲ್ಲಿರುವಂತೆ ಅವ್ಯಕ್ತರೂಪದಲ್ಲಿದ್ದು ಕೊಂಡಿರುತ್ತದೆ. ಈಶ್ವರನು, ಕರ್ತೃಭೋಕ್ತೃಗಳಾದ ಜೀವರು, ಕ್ರಿಯಾಕಾರಕಫಲಗಳು – ಇವೆಲ್ಲವೂ ಆಗ ವಿಂಗಡವಾಗಿ ತೋರದೆ ಅವ್ಯಕ್ತವಾದ ಶಕ್ತಿರೂಪದಿಂದ ಇದ್ದು ಕೊಂಡುಬಿಟ್ಟಿರುತ್ತವೆ . ನೀರು, ನೊರೆ, ಗುಳ್ಳೆ – ಎಂದು ಮುಂತಾಗಿ ವಿಭಕ್ತವಾಗಿ ತೋರುವದೆಲ್ಲವೂ ನೀರೇ ಆಗಿರುವಂತೆ ಇದೆಲ್ಲವೂ ಅವ್ಯಾಕೃತರೂಪದಲ್ಲಿ ಪರಮಾತ್ಮನಾಗಿಯೇ ಇದ್ದುಕೊಂಡುಬಿಟ್ಟಿರುತ್ತದೆ. ಇಷ್ಟೆಲ್ಲ ವಿಚಿತ್ರ ರೂಪದಿಂದ ಇರುವ ಜಗತ್ತಿನ ಪರಮಾರ್ಥತತ್ತ್ವವೇ ನಮ್ಮ ನಿಜವಾದ ರೂಪವು – ಎಂಬುದನ್ನು ಮನದಟ್ಟುಮಾಡಿಕೊಳ್ಳುವದಕ್ಕೆಂದು ಶ್ರುತಿಯಲ್ಲಿ ಜಗತ್ತಿನ ಸೃಷ್ಟಿಸ್ಥಿತಿ ಲಯಗಳನ್ನು ಉಪಾಯವಾಗಿ ಉಪಯೋಗಿಸಿಕೊಂಡಿರುತ್ತದೆ. ಅದು

ಹೇಳುವದೇನೆಂದರೆ ಈ ಜಗತ್ತು ಅವ್ಯಾಕೃತವಾಗಿತ್ತು , ಈಗ ನಾಮರೂಪಗಳಾಗಿ ವಿಂಗಡಿಸಿಕೊಂಡಿದೆ. ಆ ಪರಮಾತ್ಮನು ಇಲ್ಲಿ , ಎಂದರೆ ಈ ವ್ಯಾಕೃತಜಗತ್ತಿನಲ್ಲಿರುವ ಬ್ರಹ್ಮಾದಿಸ್ಥಾವರಾಂತರವಾಗಿರುವ ದೇಹಗಳಲ್ಲಿ ಒಳಹೊಕ್ಕಿರುತ್ತಾನೆ. ಪರಮಾತ್ಮನೇ ಈ ಜಗತ್ತಿಗೆ ಉಪಾದಾನಕಾರಣ, ಆತನೇ ಇದಕ್ಕೆ ನಿಮಿತ್ತಕಾರಣ ; ಗಡಿಗೆಮಡಿಕೆ ಮುಂತಾದವಕ್ಕೆ ಮಣ್ಣು ಉಪಾದಾನಕಾರಣ, ಕುಂಬಾರನು ನಿಮಿತ್ತಕಾರಣ; ಹೀಗೆ ಜಗತ್ತಿಗೆ ಉಪಾದಾನ, ನಿಮಿತ್ತ - ಎಂದು ಎರಡು ಬೇರೆಬೇರೆ ಕಾರಣಗಳಿಲ್ಲ . ಆ ಪರಮಾತ್ಮನೇ ಜಗತ್ತಿಗೆ ನಿಮಿತ್ತ ಕಾರಣವೂ ಉಪಾದಾನಕಾರಣವೂ ಆಗಿರುತ್ತಾನೆ. ಇವನೇ ಉಪಾದಾನಕಾರಣ - ಎಂದರೆ ಮಣ್ಣೇ ಗಡಿಗೆ, ಮಡಿಕೆ, ಕುಡಿಕೆ - ಮುಂತಾದವುಗಳಾಗಿ ತೋರುತ್ತಿರುವಂತೆ ಜಗದ್ರೂಪವಾಗಿಯೂ ಅದರಲ್ಲಿರುವ ಬಗೆಬಗೆಯ ಜೀವರ ಶರೀರಗಳಾಗಿಯೂ ತೋರುತ್ತಿರುತ್ತಾನೆ. ಆತನೇ ಈ ಜಗತ್ತಿಗೆ ನಿಮಿತ್ತಕಾರಣ ; ಎಂದರೆ ತಾನೇ ತನ್ನನ್ನು ಈ ವ್ಯಾಕೃತರೂಪದಿಂದ ತೋರಿಸಿ ಕೊಂಡಿರುತ್ತಾನೆ, ಮಣ್ಣನ್ನು ಮಡಕೆಯಾಗಿ ಮಾಡುವ ಕುಂಬಾರನಂತೆ ಆತನನ್ನು ಮತ್ತೊಬ್ಬರು ಯಾರೂ ಜಗತ್ತಾಗಿ ಮಾರ್ಪಡಿಸಿಲ್ಲ . ಇನ್ನೊಂದು ವಿಶೇಷವೇನೆಂದರೆ ಅದೇ ಪರಮಾತ್ಮನು ಈ ವ್ಯಾಕೃತವಾದ ನಾಮರೂಪ ಪ್ರಪಂಚದಲ್ಲಿ ಎಲ್ಲರ ಶರೀರದೊಳಗೂ ಹೊಕ್ಕು ಜೀವರೂಪದಿಂದ ತೋರಿಕೊಳ್ಳುತ್ತಿರುತ್ತಾನೆ. ಹೀಗೆ ಜಗದ್ರೂಪದಿಂದಲೂ ಜೀವರೂಪದಿಂದಲೂ ತೋರಿಕೊಳ್ಳುತ್ತಿರುವಾಗ ಆ ಪರಮಾತ್ಮನು ತನ್ನ ರೂಪದಿಂದಲೂ ಇದ್ದುಕೊಂಡಿರುತ್ತಾನೆ. ಇದಲ್ಲವೆ ವಿಚಿತ್ರ !

> **ಸ ಏಷ ಇಹ ಪ್ರವಿಷ್ಟಃ । ಆ ನಖಾಗ್ರೇಭ್ಯೋ ಯಥಾ ಕ್ಷುರಃ ಕ್ಷುರಧಾನೇಽವಹಿತಃ ಸ್ಯಾದ್ವಿಶ್ವಂಭರೋ ವಾ ವಿಶ್ವಂಭರಕುಲಾಯೇ ತಂ ನ ಪಶ್ಯಂನ್ತಿ। ಅಕೃತ್ಸ್ನೋ ಹಿ ಸ ಪ್ರಾಣನ್ನೇವ ಪ್ರಾಣೋ ನಾಮ ಭವತಿ। ವದನ್ ವಾಕ್ಪಶ್ಯಗ್‌ಂಶ್ಚಕ್ಷುಃ ಶೃಣ್ವ ಇಶ್ರೋತ್ರಂ ಮನ್ವಾನೋ ಮನಸ್ತಾನ್ಯಸ್ಯೈತಾನಿ ಕರ್ಮನಾಮಾನ್ಯೇವ। ಸ ಯೋಽತ ಏಕೈಕಮುಪಾಸ್ತೇ ನ ಸ ವೇದಾಕೃತ್ಸ್ನೋ ಹ್ಯೇಷೋಽತ ಏಕೈಕೇನ ಭವತಿ ಆತ್ಮೇತ್ಯೇವೋಪಾಸೀತಾತ್ರ ಹ್ಯೇತೇ ಸರ್ವ ಏಕಂ ಭವನ್ತಿ॥** ಬೃ. ೧-೪-೭

ಆತ್ಮನು ಈ ಶರೀರದೊಳಗೆ ಎರಡು ಬಗೆಯಿಂದ ಪ್ರವೇಶಿಸಿರುತ್ತಾನೆ. ಕ್ಷೌರಿಕನ ಕತ್ತಿಯು ಹಡಪದಲ್ಲಿ ಒಂದು ಕಡೆಯಲ್ಲಿ ಇದ್ದುಕೊಂಡಿರುವಂತೆ **ವಿಶೇಷ** ರೂಪದಿಂದಿರುವ ಬಗೆಯೊಂದು ; ಕಟ್ಟಿಗೆಯೊಳಗೆ ಎಲ್ಲೆಲ್ಲಿಯೂ ಬೆಂಕಿಯು ಅವ್ಯಕ್ತ

ರೂಪದಿಂದ ಇದ್ದುಕೊಂಡಿರುವಂತೆ ಸಾಮಾನ್ಯರೂಪದಿಂದ ಇರುವ ಬಗೆಯೊಂದು. ಉಸಿರಾಡುವ ಪ್ರಾಣ, ಮಾತನಾಡುವವ , ನೋಡುವವ , ಯೋಚನೆಮಾಡುವವ - ಎಂದು ಮುಂತಾಗಿರುವದು ವಿಶೇಷರೂಪವು. ಆಯಾ ಇಂದ್ರಿಯಸ್ಥಾನಗಳಲ್ಲಿ ಮಾತ್ರ ಅವನ ವಿಶೇಷರೂಪವು ಕಂಡುಬರುತ್ತದೆ. ಪಂಚಪ್ರಾಣಗಳು, ಪಂಚ ಜ್ಞಾನೇಂದ್ರಿಯಗಳು, ಪಂಚಕರ್ಮೇಂದ್ರಿಯಗಳು, ಮನಸ್ಸು - ಇವುಗಳ ಮೂಲಕ ವಾಗಿ ತೋರಿಕೊಳ್ಳುವ ರೂಪವು ಒಂದು. ದ್ರಷ್ಟ್ಟ (ನೋಡುವವನು) ಶ್ರೋತೃ , (ಕೇಳುವವನು) - ಮುಂತಾದ ಈ ಹೆಸರುಗಳು ಜೀವನಿಗೆ ಆಯಾ ಕರ್ಮದಿಂದ ಬಂದಿರುತ್ತದೆ. ಇದು ಇವನ ಅಕೃತ್ಸ್ನ (ಅಪೂರ್ಣ)ರೂಪ ; ಈ ರೂಪದಿಂದ ನೋಡಿದರೆ ಇವನನ್ನು ಕಂಡುಕೊಂಡಂತೆ ಆಗುವದಿಲ್ಲ, ಆದರೆ **ಈ ವಿಶೇಷವಾದ ರೂಪದಿಂದಲೇ ಅಲ್ಲದೆ ಇವುಗಳನ್ನೆಲ್ಲಾ ವ್ಯಾಪಿಸಿಕೊಂಡಿರುವ ರೂಪದಿಂದಲೂ ಇಲ್ಲಿಯೇ ಇದ್ದುಕೊಂಡಿರುತ್ತಾನೆ. ಅದೇ ನಮ್ಮಗಳ ಪರಮಾರ್ಥವಾದ ರೂಪ ; ಅದನ್ನೇ ಅರಿತುಕೊಳ್ಳಬೇಕು.**

ಈ ಅಭಿಪ್ರಾಯವನ್ನೇ ಗೀತೆಯಲ್ಲಿಯೂ ಹೇಳಿರುತ್ತದೆ :

**ಉತ್ಕ್ರಾಮನ್ತಂ ಸ್ಥಿತಂ ವಾಪಿ ಭುಞ್ಜಾನಂ ವಾ ಗುಣಾನ್ವಿತಮ್ ।**
**ವಿಮೂಢಾ ನಾನುಪಶ್ಯನ್ತಿ ಪಶ್ಯನ್ತಿ ಜ್ಞಾನಚಕ್ಷುಷಃ ॥** ಗೀ. ೧೫-೧೦

ಪರಮಾತ್ಮನೇ ತನ್ನ ಅಂಶದಿಂದ ಈ ಜಗತ್ತಿನಲ್ಲಿ ಜೀವರೂಪದಿಂದ ಪ್ರವೇಶಿಸಿರುತ್ತಾನೆ. ಅವನೇ ಈ ಶರೀರದಲ್ಲಿದ್ದುಕೊಂಡು ಶ್ರೋತ್ರಾದಿಗಳಿಂದ ಶಬ್ದಾದಿ ವಿಷಯಗಳನ್ನು ಉಪಭೋಗಿಸುತ್ತಾ ಇರುವನು. ದೇಹವನ್ನು ಬಿಟ್ಟು ತೆರಳುತ್ತಲೂ, ದೇಹದಲ್ಲಿದ್ದು ವಿಷಯಗಳನ್ನು ಸೇವಿಸುತ್ತಲೂ ಇರುವ ಇವನ ನಿಜವನ್ನು ಐಹಿಕಪಾರತ್ರಿಕ ವಿಷಯಭೋಗಗಳಿಂದ ಸೆಳೆಯಲ್ಪಡುತ್ತಿರುವ ಚಿತ್ತವುಳ್ಳವರಾಗಿ ಮೋಹಿತರಾಗಿರು ವವರು ಅರಿತುಕೊಳ್ಳದೆ ಇರುತ್ತಾರೆ. ಶಾಸ್ತ್ರದಿಂದಾದ ಅನುಭವರೂಪವಾದ ಜ್ಞಾನಚಕ್ಷುಸ್ಸುಳ್ಳವರು ಅರಿತುಕೊಳ್ಳುತ್ತಾರೆ - ಎಂದು ಭಗವಂತನು ಹೇಳಿರುತ್ತಾನೆ.

**ಪುರುಷಃ ಪ್ರಕೃತಿಸ್ಥೋ ಹಿ ಭುಙ್ಕ್ತೇ ಪ್ರಕೃತಿಜಾನ್ ಗುಣಾನ್ ।**
**ಕಾರಣಂ ಗುಣಸಙ್ಗೋಽಸ್ಯ ಸದಸದ್ಯೋನಿಜನ್ಮಸು ॥** ಗೀ. ೧೩-೨೧
**ಉಪದ್ರಷ್ಟಾಽನುಮನ್ತಾ ಚ ಭರ್ತಾ ಭೋಕ್ತಾ ಮಹೇಶ್ವರಃ ।**
**ಪರಮಾತ್ಮೇತಿ ಚಾಪ್ಯುಕ್ತೋ ದೇಹೇಽಸ್ಮಿನ್ ಪುರುಷಃ ಪರಃ ॥** ಗೀ. ೧೩-೨೨

ಈ ಶರೀರದಲ್ಲಿ ಜೀವನು ಅಜ್ಞಾನದಿಂದ ವಿಷಯಭೋಗಗಳಿಂದ ಸುಖದುಃಖ ಮೋಹಗಳನ್ನು ಪಡೆಯುತ್ತಿರುವನು. ವಿಷಯಸಂಘವೇ ಬಗೆಬಗೆಯ ಜನ್ಮಗಳನ್ನು

ಕೊಟ್ಟು ಅವನನ್ನು ಸಂಸಾರದಲ್ಲಿ ತೊಳಲಿಸುತ್ತಿರುವದು. ಆದರೆ ಇಲ್ಲಿಯೇ ತಾನು ಯಾವ ವ್ಯಾಪಾರವನ್ನೂ ಮಾಡದೆ ಇದ್ದುಕೊಂಡು ಎಲ್ಲವನ್ನೂ ಸಾಕ್ಷಿರೂಪದಿಂದ ನೋಡುತ್ತಿರುವ, ಕಾರ್ಯಕರಣವ್ಯಾಪಾರಗಳಿಗೆ ತನ್ನ ಸಂನಿಧಿಯಿಂದಲೇ ಅವಕಾಶ ವನ್ನು ಕಲ್ಪಿಸುತ್ತಿರುವ, ಅವುಗಳಿಗೆ ಚೈತನ್ಯಾಭಾಸವನ್ನು ಕೊಡುತ್ತಿರುವ, ಸುಖದುಃಖ ಮೋಹಾತ್ಮಕವಾದ ಭೋಗಗಳು ಹುಟ್ಟುವಾಗ, ಅವುಗಳಲ್ಲೆಲ್ಲ ಚಿದ್ರೂಪದಿಂದ ವ್ಯಾಪಿಸಿಕೊಂಡಿರುವ ಮಹಾಭೋಕ್ತೃವಾದ, ಅವುಗಳೆಲ್ಲವನ್ನೂ ತನ್ನ ಅಧೀನದಲ್ಲಿಟ್ಟು ಕೊಂಡಿರುವ ಮಹೇಶ್ವರನಾದ, ಪರಮಾರ್ಥದೃಷ್ಟಿಯಿಂದ ನಿಜವಾದ ಆತ್ಮನಾಗಿರುವದರಿಂದ ಪರಮಾತ್ಮನಾಗಿಯೂ ಇದ್ದುಕೊಂಡಿರುವ ರೂಪವೂ ಇರುತ್ತದೆ. ಅವನೇ ಪರಮಪುರುಷನು.

ಹೀಗೆ ನಮ್ಮೊಳಗೇ ಈ ಅಕೃತ್ಸ್ನರೂಪವೂ ಸಂಪೂರ್ಣವಾದ ಪರಮಾತ್ಮ ರೂಪವೂ ಇದ್ದುಕೊಂಡಿರುತ್ತದೆ. ಒಂದು ವಿಶೇಷರೂಪ, ಒಂದು ಸಾಮಾನ್ಯರೂಪ. ಒಂದು ಸಂಸಾರಿರೂಪ, ಒಂದು ನಿತ್ಯಮುಕ್ತರೂಪ. ಜೀವರೂಪವು ಆಯಾ ಉಪಾಧಿ ಗಳಿಂದ ಕೂಡಿಕೊಂಡು ಕಾಮಮಯ, ಕ್ರೋಧಮಯ - ಎಂದು ಬಗೆಬಗೆಯ ರೂಪಗಳನ್ನು ಅನುಭವಿಸುತ್ತಿರುತ್ತವೆ. ಹೀಗೆ ರಂಗುರಂಗಾಗಿ ಮಾರ್ಪಡುತ್ತಾ ಸಂಗದಿಂದ ಕಾಮ, ಕಾಮದಿಂದ ಕ್ರೋಧ, ಕ್ರೋಧದಿಂದ ಮೋಹ, ಮೋಹದಿಂದ ಬುದ್ಧಿನಾಶ - ಎಂಬ ರೀತಿಯ ಸಂಸಾರವನ್ನು ಅನುಭವಿಸುತ್ತಿರುತ್ತದೆ. ಆದರೆ ಪರಮಾತ್ಮರೂಪವು ಇವುಗಳೊಳಗೇ ಎಲ್ಲೆಲ್ಲಿಯೂ ವ್ಯಾಪಿಸಿಕೊಂಡಿದ್ದರೂ ಯಾವದೊಂದರ ಸಂಬಂಧವೂ ಇಲ್ಲದೆ ನಿತ್ಯಶುದ್ಧಬುದ್ಧಮುಕ್ತಸ್ವಭಾವವಾಗಿರುತ್ತದೆ. ಜನಕನು 'ಈ ಪುರುಷನಿಗೆ ಜ್ಯೋತಿ ಯಾವದು ?' - ಎಂದು ಪ್ರಶ್ನಿಸಲು ಬಗೆಬಗೆಯ ಬಾಹ್ಯಜ್ಯೋತಿಗಳನ್ನು ಸೂಚಿಸಿ ಕೊನೆಗೆ ಆತ್ಮನೇ ಜ್ಯೋತಿಯು - ಎಂದು ಯಾಜ್ಞವಲ್ಕ್ಯರು ನಿರ್ಣಯಿಸಿದರು.

**ಕತಮ ಆತ್ಮೇತಿ ಯೋಽಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯಾನ್ತರ್ಜ್ಯೋತಿಃ।**

'ಈ ಇಂದ್ರಿಯಗಳ ನಡುವೆ, ಮನಸ್ಸಿನೊಳಗೆ ಇರುವ ಜ್ಯೋತಿಸ್ವರೂಪನೇ ಆತ್ಮನು' ಎಂದು ಉತ್ತರವನ್ನು ಕೊಟ್ಟರು. ಸೂರ್ಯನ ಬೆಳಕಿನಲ್ಲಿಯೇ ಓಡಾಡುತ್ತಾ ವ್ಯವಹರಿಸುತ್ತಿದ್ದರೂ ಸೂರ್ಯನು ಯಾರೆಂಬುದನ್ನು ಅರಿಯದೆ ಇರುವ ಮೂಢರಂತೆ ಸ್ವಯಂಜ್ಯೋತಿಯಾಗಿ ನಮ್ಮ ಶರೀರೇಂದ್ರಿಯಮನಸ್ಸುಗಳನ್ನೆಲ್ಲ ತನ್ನ ಉಜ್ಜ್ವಲವಾದ ಚೈತನ್ಯದ ಬೆಳಕಿನಿಂದ ಬೆಳಗುತ್ತಿರುವ ಆತ್ಮನನ್ನೇ ಅರಿತುಕೊಳ್ಳಲಾರದೆ ಇದೆ, ಮೂಢಜನ !

**ಆಶ್ಚರ್ಯವತ್ ಪಶ್ಯತಿ ಕಶ್ಚಿದೇನಮಾಶ್ಚರ್ಯವದ್ವದತಿ ತಥೈವ ಚಾನ್ಯಃ।**
**ಆಶ್ಚರ್ಯವಚ್ಚೈನಮನ್ಯಃ ಶೃಣೋತಿ ಶ್ರುತ್ವಾಪ್ಯೇನಂ ವೇದ ನ ಚೈವ ಕಶ್ಚಿತ್ ॥**
ಗೀ. ೨-೨೯

ಆತ್ಮನೆಂದರೆ ಯಾವದೋ ಒಂದು ಎಂದಿಗೂ ಯಾರೂ ಕಾಣದ ಅದ್ಭುತವಸ್ತುವೆಂದೇ ಜನರು ತಿಳಿದುಕೊಂಡಿರುತ್ತಾರೆ. ಆತ್ಮವಿಷಯವನ್ನು ಹೇಳುವಾಗ ಯಾರಿಗೂ ತಿಳಿಯದ ಯಾವದೋ ಒಂದು ಅದ್ಭುತತತ್ತ್ವವನ್ನು ತಿಳಿಸುವವರಂತೆಯೇ ವಿವರಿಸುವದಕ್ಕೆ ತೊಡಗುತ್ತಾರೆ. ಕೇಳುವವರೂ 'ಇದೇನು ಅದ್ಭುತವೋ ! ಆತ್ಮನಂತೆ ! ಅವನನ್ನು ಹೇಗೆ ನಾವು ಅರಿತುಕೊಂಡೇವು ?' - ಎಂದು ಆಶ್ಚರ್ಯ ವಿಷಯವೆಂಬಂತೆಯೇ ಬೆರಗಾಗಿ ಆತ್ಮವಿಷಯದ ವಿವರಣೆಯನ್ನು ಕೇಳುತ್ತಿರುವರು. ಎಲ್ಲರಿಗೂ ಇವನು ಆತ್ಮನೇ, ಸ್ವರೂಪನೇ ಆದರೂ ಒಬ್ಬರಿಗೂ ಈತನ ಪರಿಚಯವಿಲ್ಲ! ಇದನ್ನು ಹೇಳುವವರೂ ಕೇಳುವವರೂ ಲೋಕದಲ್ಲಿ ಆಶ್ಚರ್ಯವಸ್ತುಗಳೆಂಬಂತೆ ಕಾಣುತ್ತಾರೆ !

ಆದರೆ ನಿಜವೇನು ? ಶರೀರ, ಇಂದ್ರಿಯ, ಮನಸ್ಸು - ಇವುಗಳ ಅಭಿಮಾನದಿಂದ ಜನರು ಬಹಿರ್ಮುಖರಾಗಿಬಿಟ್ಟಿರುತ್ತಾರೆ. ವಿಷಯಗಳಲ್ಲಿಯೇ ನೆಟ್ಟ ದೃಷ್ಟಿ ಯುಳ್ಳವರಾಗಿರುತ್ತಾರೆ. ಅದೊಂದೇ ಆತ್ಮಜ್ಞಾನಕ್ಕೆ ಇರುವ ಅಡ್ಡಿ . ತಮ್ಮ ಸ್ವರೂಪವೇ ಆಗಿರುವ ಅವನನ್ನು ಅರಿತೊಳ್ಳುವದಕ್ಕೆ ಏನು ಅಡ್ಡಿ ಬಂದೀತು ? ಶರೀರಾದ್ಯಭಿಮಾನವನ್ನು ತೊಲಗಿಸಿಕೊಳ್ಳುವ ಸಾಧನವನ್ನು ಮಾಡಿದವರಿಗೆ - ಇಂದ್ರಿಯಜ್ಞಾನ, ಪ್ರತ್ಯಯಗಳ ಆಧಾರದಿಂದಾಗುವ ಕರ್ಮಜ್ಞಾನ - ಇವುಗಳಿಗೆ ಆತ್ಮನು ಸಿಕ್ಕುವದಿಲ್ಲವೆಂಬ ನಿಶ್ಚಯವಾದವರಿಗೆ - ಆತ್ಮನು ಅವರವರ ಅನುಭವದಲ್ಲಿಯೇ ತೋರಿಕೊಳ್ಳುವನು. ಅವನನ್ನು ನೋಡಿಕೊಳ್ಳುವದಕ್ಕೆ ಮತ್ತೆ ಯಾವ ಉಪಕರಣವೂ ಬೇಡ. ಅವನೇ ಅಲ್ಲವೆ, ಮತ್ತೆಲ್ಲವನ್ನೂ ಬೆಳಗಿ ತೋರಿಸುತ್ತಿರುವಾತನು?

**ತದೇತತ್ ಪದನೀಯಮಸ್ಯ ಸರ್ವಸ್ಯ ಯದಯಮಾತ್ಮಾಽನೇನ ಹ್ಯೇತತ್ಸರ್ವಂ ವೇದ ॥** ಬೃ. ೧-೪-೭

**ಸ ವಾ ಏಷ ಮಹಾನಜ ಆತ್ಮಾಽಜರೋಽಮರೋಽಮೃತೋಽಭಯೋ ಬ್ರಹ್ಮ॥** ಬೃ. ೪-೪-೨೫

' ಈ ಆತ್ಮನೆಂಬ ತತ್ತ್ವವನ್ನೇ ಅರಿತುಕೊಳ್ಳುವೆನೆಂಬ ನಿಶ್ಚಯವನ್ನು ಮಾಡಿಕೊಳ್ಳಬೇಕು ; ಏಕೆಂದರೆ ಇದನ್ನು ಅರಿತದ್ದರಿಂದ ಎಲ್ಲವನ್ನೂ ಅರಿತಂತೆ ಆಗುವದು ' -

ಎಂದೂ 'ಈ ನಮ್ಮ ಪ್ರಸಿದ್ಧನಾದ ವಿಜ್ಞಾನಮಯಾತ್ಮನೇ ಹುಟ್ಟಿಲ್ಲದ, ಮುಪ್ಪಿಲ್ಲದ ಸಾವಿಲ್ಲದ ಅಮೃತಸ್ವಭಾವನಾದ ಭಯಕ್ಕೆಡೆಯಿಲ್ಲದ ಬ್ರಹ್ಮವು' ಎಂದೂ ಶ್ರುತಿಯು ಸಾರುತ್ತಿದೆ.

## ೯. ಮೃತ್ಯುವಿನ ರೂಪಗಳು

(13-8-64)

ಅಧ್ಯಾತ್ಮದ ಹಸಿವು ಇರುವ ಜನರು ಹೆಚ್ಚಾಗಿದ್ದರೆ ತತ್ತ್ವದ ವಿಷಯವಾಗಿ ಹೇಳುವವರಿಗೆ ಉತ್ಸಾಹವು ಉಕ್ಕುತ್ತಿರುತ್ತದೆ , ಕೇಳುವವರಿಗೂ 'ಇನ್ನಷ್ಟು ಬೇಕು' - ಎನ್ನಿಸುತ್ತದೆ. ಆದರೆ ಯಾರಿಗೆ ಅಧ್ಯಾತ್ಮವು ಬೇಕಿಲ್ಲವೋ ಅವರಿಗೆ ಹೇಳಿದರೆ ಹೊಟ್ಟೆ ತುಂಬಿದವರಿಗೆ ಅಥವಾ ಅರೋಚಕವಾಗಿರುವವರಿಗೆ ಮೃಷ್ಟಾನ್ನವನ್ನು ಬಡಿಸುವ ಪ್ರಯತ್ನದಂತೆ, ವೃಥಾ ಆಯಾಸವಾಗುತ್ತದೆ. ಒಂದಾನೊಂದು ಅಮೋಘವಾದ ಅಧ್ಯಾತ್ಮಗ್ರಂಥದ ಮುದ್ರಣವು ಬೇಗಬೇಗನೆ ಆಗಲೆಂಬ ಅಭಿಲಾಷೆಯಿಂದ ಇಲ್ಲಿಯೇ ಚಾತುರ್ಮಾಸ್ಯಸಂಕಲ್ಪಕ್ಕೆ ಕುಳಿತದ್ದಾಯಿತು. ಭಗವಂತನ ಕೃಪೆಯಿಂದ ಅದಾದರೂ ನೇರವೇರಲೆಂದು ಹಾರೈಸೋಣ.

**ಸ ವಾ ಏಷ ಮಹಾನಜ ಆತ್ಮಾಽಜರೋಽಮರೋಽಮೃತೋಽಭಯೋ ಬ್ರಹ್ಮ** । ಬೃ. ೪-೪-೨೫.

'ಈ ನಿಮ್ಮ ಆತ್ಮನೇ ಅಜಾದ್ವಿತೀಯಪರಮಾತ್ಮನು , ನಿಮಗೆ ಹುಟ್ಟಿಲ್ಲ , ಮುಪ್ಪಿಲ್ಲ, ಸಾವಿಲ್ಲ, ಅಮೃತನೂ ಅಭಯನೂ ಆದವನು ನೀನು ! ನೀನು ಬ್ರಹ್ಮವೇ !' ಎಂದು ಶ್ರುತಿಯೂ ಬಲ್ಲವರೂ ಕೂಗಿಕೊಂಡರೂ ಶರೀರೇಂದ್ರಿಯಾದಿಗಳಲ್ಲಿ 'ಇದೇ ನಾನು ' ಎಂದು ತಾದಾತ್ಮ್ಯಾಭಿಮಾನವುಳ್ಳವರಿಗೆ ಆತ್ಮಾನುಭವವು ಆಗುವಂತಿಲ್ಲ . ಪ್ರಾಕೃತ ಜನರ ನಿಶ್ಚಯಕ್ಕೆ ಶ್ರುತ್ಯಾಚಾರ್ಯರ ಉಪದೇಶವು ವಿರುದ್ಧವಾಗಿಯೇ ಕಾಣಿಸುತ್ತಿರುತ್ತದೆ. ಇದಕ್ಕೆ ಅವಿದ್ಯೆಯಿಂದ ಶರೀರೇಂದ್ರಿಯಾದಿಗಳೊಡನೆ ಆಗಿರುವ ಸಂಯೋಗವೇ ಕಾರಣ. ಈ ಸಂಯೋಗದಿಂದಲೇ ಜೀವರಿಗೆ ಸಂಸಾರ ದುಃಖವುಂಟಾಗುತ್ತಿರುವದು.

**ಸ್ವಸ್ವಾಮಿಶಕ್ತ್ಯೋಃ ಸ್ವರೂಪೋಪಲಬ್ಧಿಹೇತುಃ ಸಂಯೋಗಃ ।**
**ತಸ್ಯ ಹೇತುರವಿದ್ಯಾ ॥** ಯೋ.ಸೂ. ೨- ೨೩, ೨೪.

'ಇದು ನಾನು', 'ಇದು ನನ್ನದು' - ಎಂಬ ಭಾವದಿಂದ ಆತ್ಮನಿಗೂ ಚಿತ್ತಕ್ಕೂ

ಆಗಿರುವ ಸಂಯೋಗವೇ ಬಂಧಕ್ಕೆ ಕಾರಣವು. ಅದಕ್ಕೆ ಅವಿದ್ಯೆಯೇ, ಮಿಥ್ಯಾಜ್ಞಾನವೇ ಕಾರಣವು. ಆ ಅಜ್ಞಾನವು ಹೋದರೆ ಮತ್ತೆ ಸಂಯೋಗವಾಗುವದಿಲ್ಲ ; ಸಂಯೋಗದಿಂದಾಗುವ ದುಃಖವೂ ಆಗುವದಿಲ್ಲ. ಪುರುಷನು ತನ್ನ ಸ್ವರೂಪದಲ್ಲಿ ನಿಂತುಬಿಡುತ್ತಾನೆ - ಎಂಬ ಕಾರಣದಿಂದ ಈ ಸಂಯೋಗವನ್ನು ಬಿಡಿಸುವದಕ್ಕಾಗಿ **ಪತಂಜಲಿ ಋಷಿಯು** ಯೋಗವನ್ನು ಉಪದೇಶಿಸಿರುತ್ತಾನೆ. ಈ ಅಭಿಪ್ರಾಯವನ್ನು ಯೋಗಸೂತ್ರಕ್ಕೆ ವೃತ್ತಿಯನ್ನು ಬರೆದಿರುವ **ಭೋಜದೇವನು** ಹೀಗೆ ವರ್ಣಿಸಿರುತ್ತಾನೆ:

**ಪತಞ್ಜಲಿಮುನೇರುಕ್ತಿಃ ಕಾಪ್ಯಪೂರ್ವಾ ಜಯತ್ಯಸೌ ।**

**ಪುಂಸಪ್ರಕೃತ್ಯೋರ್ವಿಯೋಗೋಽಪಿ ಯೋಗ ಇತ್ಯುಚ್ಯತೇ ಯಯಾ ॥**

'ಪತಂಜಲಿಮುನಿಯ ವಚನವು ವಿಚಿತ್ರವಾಗಿರುತ್ತದೆ. ಏಕೆಂದರೆ ಪುರುಷನಿಗೂ ಪ್ರಕೃತಿಗೂ ಆಗಿರುವ ವಿಯೋಗವನ್ನೇ ಆತನು 'ಯೋಗ'ವೆಂದು ಕರೆದಿರುತ್ತಾನೆ - ಎಂಬುದು ಈ ಶ್ಲೋಕದ ಅರ್ಥ. ವೇದಾಂತಸಂಮತವಾದ ಅಧ್ಯಾತ್ಮವಿದ್ಯೆಯಲ್ಲಿ ಪಾತಂಜಲಯೋಗವನ್ನು ಪೂರ್ಣವಾಗಿ ಅನುಮೋದಿಸಿರುವದಿಲ್ಲವಾದರೂ ಈ ಒಂದು ವಿಷಯದಲ್ಲಿ ಎರಡು ದರ್ಶನಗಳಿಗೂ ಸಂಮತಿಯಿದೆ. ಹೇಗೆಂದರೆ ಭಗವದ್ಗೀತೆಯಲ್ಲಿ ಪರಮಾತ್ಮನ ದರ್ಶನಕ್ಕೆ ಅಂತರಂಗಸಾಧನವಾಗಿ ಹೇಳಿರುವ ಧ್ಯಾನಯೋಗದಲ್ಲಿ ಈ ಶ್ಲೋಕವಿದೆ.

**ತಂ ವಿದ್ಯಾದ್ ದುಃಖಸಂಯೋಗವಿಯೋಗಂ ಯೋಗಸಂಜ್ಞಿತಮ್ ।**

**ಸ ನಿಶ್ಚಯೇನ ಯೋಕ್ತವ್ಯೋ ಯೋಗೋಽನಿರ್ವಿಣ್ಣಚೇತಸಾ ॥** ಗೀ. ೬-೨೩.

ದುಃಖಸಂಯೋಗದ ವಿಯೋಗವನ್ನೇ ಯೋಗವೆಂಬ ಹೆಸರುಳ್ಳದ್ದೆಂದು ತಿಳಿದು ಕೊಳ್ಳಬೇಕು. ಅಮಂಗಳವಾದ ವಾರವನ್ನು ಮಂಗಳವಾರವೆಂದು ಕರೆಯುವಂತೆ ವಿಪರೀತ ಲಕ್ಷಣೆಯಿಂದಲೇ 'ಯೋಗ'ವೆಂಬ ಹೆಸರನ್ನು ಇಲ್ಲಿ ಬಳಸಿರುತ್ತದೆ. ದುಃಖ ಸಂಯೋಗವಾದರೂ ಹೇಗೆ ಆಗಿದೆ ? - ಎಂದರೆ ಎರಡು ಬೇರೆಬೇರೆಯಾಗಿರುವ ವಸ್ತುಗಳು ಒಂದನ್ನೊಂದು ಮುಟ್ಟುವಾಗ 'ಸಂಯೋಗ'ವೆಂಬ ಸಂಬಂಧವಾಗುವ ದೆಂದೂ ಕಾರ್ಯಕಾರಣಗಳು, ಗುಣಗುಣಿಗಳು, ಕ್ರಿಯಾಕ್ರಿಯಾವತ್ಪದಾರ್ಥಗಳು - ಇವುಗಳಿಗೆ 'ಸಮವಾಯ'ವೆಂಬ ನಿತ್ಯಸಂಬಂಧವಿರುವದೆಂದೂ **ವೈಶೇಷಿಕರು** ತಿಳಿಯುತ್ತಾರೆ. ಕ್ಷೇತ್ರಕ್ಕೂ ಕ್ಷೇತ್ರಜ್ಞನಿಗೂ - ದೇಹಾದಿಗಳಿಗೂ ಆತ್ಮನಿಗೂ - ಈ ಎರಡು ಬಗೆಯ ಸಂಬಂಧವೂ ಆಗುವಂತಿಲ್ಲ ; ಏಕೆಂದರೆ ಆತ್ಮನೂ ದೇಹಾದಿರೂಪವಾದ ಅನಾತ್ಮವೂ ಬೇರೆಬೇರೆಯ ದೇಶಗಳಲ್ಲಿದ್ದು ಒಂದಕ್ಕೊಂದು ತಾಡಹಾಕಿಕೊಂಡಿಲ್ಲ ವಾದ್ದರಿಂದ 'ಸಂಯೋಗ' ಸಂಬಂಧವೆನ್ನುವ ಹಾಗಿಲ್ಲ. ಆತ್ಮನಿಗೂ ಅನಾತ್ಮವಾದ

ದೇಹಾದಿಗಳಿಗೂ ಮಣ್ಣುಮಡಿಕೆಗಳಿಗಿರುವಂತೆ ನಿಜವಾದ ಕಾರ್ಯಕಾರಣ ಸಂಬಂಧವೂ ಇಲ್ಲವಾದ್ದರಿಂದ ಇಲ್ಲಿ 'ಸಮವಾಯ' ಸಂಬಂಧವನ್ನು ಹೇಳುವದಕ್ಕೂ ಇಲ್ಲ . ಆದ್ದರಿಂದ ಆತ್ಮಾನಾತ್ಮಗಳಿಗಿರುವ ಸಂಬಂಧವು ಎಂಥದ್ದು ? - ಎಂದರೆ ಶಂಕರಭಗವತ್ಪಾದರವರು ಹೀಗೆಂದು ಬರೆದಿರುತ್ತಾರೆ :

> ಕ್ಷೇತ್ರಕ್ಷೇತ್ರಜ್ಞಯೋರ್ವಿಷಯವಿಷಯಿಣೋರ್ಭಿನ್ನ ಸ್ವಭಾವಯೋರಿತರೇತರ ತದ್ಧರ್ಮಾಧ್ಯಾಸಲಕ್ಷಣಃ ಸಂಯೋಗಃ, ಕ್ಷೇತ್ರಕ್ಷೇತ್ರಜ್ಞಸ್ವರೂಪವಿವೇಕಾಭಾವ ನಿಬನ್ಧನಃ ರಜ್ಜುಶುಕ್ತಿಕಾದೀನಾಂ ತದ್ವಿವೇಕಜ್ಞಾನಾಭಾವಾತ್ ಅಧ್ಯಾರೋಪಿತ ಸರ್ಪರಜತಾದಿಸಂಯೋಗವತ್ । ಸೋಽಯಮಧ್ಯಾಸಸ್ವರೂಪಃ ಕ್ಷೇತ್ರಕ್ಷೇತ್ರಜ್ಞಸಂಯೋಗಃ ಮಿಥ್ಯಾಜ್ಞಾನಲಕ್ಷಣಃ । ಯಥಾಶಾಸ್ತ್ರಂ ಕ್ಷೇತ್ರಕ್ಷೇತ್ರಜ್ಞಲಕ್ಷಣಭೇದಪರಿಜ್ಞಾನಪೂರ್ವಕಂ ಪ್ರಾಗ್ದರ್ಶಿತ ರೂಪಾತ್ ಕ್ಷೇತ್ರಾತ್ ಮುಞ್ಜಾದಿವ ಇಷೀಕಾಂ ಯಥೋಕ್ತಲಕ್ಷಣಂ ಕ್ಷೇತ್ರಜ್ಞಂ ಪ್ರವಿಭಜ್ಯ 'ನ ಸತ್ತನ್ನಾಸದುಚ್ಯತೇ ' ಇತ್ಯನೇನ ನಿರಸ್ತಸರ್ವೋಪಾಧಿ-ವಿಶೇಷಂ ಜ್ಞೇಯಂ ಬ್ರಹ್ಮ ಸ್ವರೂಪೇಣ ಯಃ ಪಶ್ಯತಿ, ಕ್ಷೇತ್ರಂ ಚ ಮಾಯಾನಿರ್ಮಿತಹಸ್ತಿಸ್ವಪ್ನದೃಷ್ಟವಸ್ತುಗನ್ಧರ್ವನಗರಾದಿವತ್ 'ಅಸದೇವ ಸದಿವಾವಭಾಸತೇ ಇತ್ಯೇವಂ ನಿಶ್ಚಿತವಿಜ್ಞಾನೋ ಯಃ, ತಸ್ಯ ಯಥೋಕ್ತ ಸಮ್ಯಗ್ದರ್ಶನವಿರೋಧಾತ್ ಅಪಗಚ್ಛತಿ ಮಿಥ್ಯಾಜ್ಞಾನಮ್ । ತಸ್ಯ ಜನ್ಮಹೇತೋರಪಗಮಾತ್ 'ಯ ಏವಂ ವೇತ್ತಿ ಪುರುಷಂ ಪ್ರಕೃತಿಂ ಚ ಗುಣೈಃ ಸಹ' ಇತ್ಯನೇನ ವಿದ್ವಾನ್ ಭೂಯೋ ನಾಭಿಜಾಯತೇ ಇತಿ ಯದುಕ್ತಂ ತದುಪಪನ್ನಮುಕ್ತಮ್ ॥ ಗೀ. ಭಾ. ೧೩-೨೬

ಆತ್ಮನಿಗೂ ದೇಹಾದಿಗಳಿಗೂ ನಿಜವಾಗಿ ಯಾವ ಸಂಬಂಧವೂ ಇಲ್ಲವೇಇಲ್ಲ. ಆತ್ಮನು ಯಾವ ಶಬ್ದಕ್ಕೂ ಗೋಚರನಲ್ಲದ ನಿರ್ವಿಶೇಷನಾದ ಅಜಾದ್ವಯಸ್ವಭಾವದ ತತ್ತ್ವವು. ದೇಹಾದ್ಯನಾತ್ಮವಸ್ತುವೋ ಎಂದರೆ ಮಾಯೆಯಿಂದ ನಿರ್ಮಿತವಾಗಿರುವ ಆನೆಯಂತೆಯೂ ಕನಸಿನಲ್ಲಿ ತೋರುವ ವಸ್ತುಗಳಂತೆಯೂ ಆಕಾಶದಲ್ಲಿ ಕಾಣುವ ಗಂಧರ್ವನಗರವೇ ಮುಂತಾದವುಗಳಂತೆಯೂ ಹುಸಿಯಾಗಿದ್ದರೂ ದಿಟವೆಂದೇ ತೋರುತ್ತಿರುವದು. ಇವುಗಳ ನಿಜವನ್ನು ಯಾವನು ಶಾಸ್ತ್ರೋಪದೇಶದಿಂದ ಅರಿತು ನಿಶ್ಚಯಿಸಿಕೊಳ್ಳುವನೋ ಅವನು ಮತ್ತೆ ಹುಟ್ಟುವದೆಂಬುದೇ ಇಲ್ಲ . ಆದ್ದರಿಂದಲೇ ಶ್ರುತಿಯು :

**ಸ ವಾ ಏಷ ಮಹಾನಜ ಆತ್ಮಾಽಜರೋಽಮರೋಽಮೃತೋಽಭಯೋ ಬ್ರಹ್ಮ॥** ಬೃ. ೪-೪-೨೫

ಈ ನಮ್ಮ ವಿಜ್ಞಾನಾತ್ಮನೇ ನಿಜವಾಗಿ ಜನ್ಮರಹಿತನಾಗಿ ಮುಪ್ಪು ಮರಣಗಳಿಲ್ಲದ ಅಮೃತಸ್ವಭಾವನಾದ ಅಭಯರೂಪನಾದ ಸರ್ವವ್ಯಾಪಕನಾದ ಆತ್ಮನಾಗಿರುತ್ತಾನೆ, ಬ್ರಹ್ಮವೇ ಆಗಿರುತ್ತಾನೆ - ಎನ್ನುತ್ತಿದೆ. ಇದನ್ನು ಅರಿತುಕೊಳ್ಳುವದಕ್ಕೆ ಸೂಕ್ಷ್ಮಬುದ್ಧಿಯು ಬೇಕಾಗುತ್ತದೆ. ಬುದ್ಧಿ ಎಂದರೆ ತರ್ಕಕೌಶಲವಲ್ಲ . 'ತರ್ಕದಿಂದ ಈ ಬುದ್ಧಿಯು ಸಿಕ್ಕುವದಿಲ್ಲ' ಎಂದು ಶ್ರುತಿಯು ಸ್ಪಷ್ಟವಾಗಿ ಹೇಳಿಬಿಟ್ಟಿರುತ್ತದೆ . ಇದಕ್ಕೆ ಅನುಭವವೊಂದೇ ಬೇಕು.

ಇಂದ್ರಿಯಗಳಿಂದ ವಿಷಯಗಳನ್ನು ಚೆನ್ನಾಗಿ ನೋಡಿ ಅರಿತುಕೊಳ್ಳುವುದೇ 'ಜ್ಞಾನ'ವೆಂದು ಅನೇಕರ ಭಾವನೆಯಿದೆ. ವಿದ್ಯಾಶಾಲೆಗಳಲ್ಲಿ ಹುಡುಗರ ಇಂದ್ರಿಯ ಪಾಟವವನ್ನು ಹೆಚ್ಚಿಸುವದನ್ನು ಕಲಿಯಿಸಬೇಕೆಂದು ಹವಣಿಸುತ್ತಿರುತ್ತಾರೆ. ಮನ ಮುಟ್ಟಿ ಇಂದ್ರಿಯಗಳಿಂದ- ಅಥವಾ ಯಂತ್ರ ಸಹಾಯವನ್ನು ಪಡೆದಿರುವ ಇಂದ್ರಿಯಗಳಿಂದ - ವಸ್ತು ಸ್ವರೂಪವನ್ನು ಪರೀಕ್ಷಿಸಿ ವಿಚಾರಮಾಡಿ ವಸ್ತುತತ್ತ್ವವನ್ನು ನಿರ್ಧರಿಸುವದೇ ಜ್ಞಾನಾರ್ಜನೆಯ ಮಾರ್ಗವೆಂಬುದು ಭೌತಿಕವಿಜ್ಞಾನಶಾಸ್ತ್ರಜ್ಞರ ಮತ. ಇಲ್ಲಿ ತಾನು ಪ್ರಮಾತೃ ಎಂದರೆ ನಿಶ್ಚಯಿಸಿ ಅರಿತುಕೊಳ್ಳುವವನು ; ವಸ್ತು ಪ್ರಮೇಯ, ಅರಿತುಕೊಳ್ಳತಕ್ಕ ವಿಷಯ ; ಇದರ ಸಾಧನವೇ ಪ್ರಮಾಣ. ಹೀಗೆ ವ್ಯವಹಾರದಲ್ಲಿ ನಮ್ಮ ಜ್ಞಾನವು ಪ್ರಮಾತೃ , ಪ್ರಮಾಣ, ಪ್ರಮೇಯ - ಎಂಬ ಮೂರು ಸಾಧನಗಳಿಂದ ಸಾಧಿಸತಕ್ಕದ್ದಾಗಿರುತ್ತದೆ. ಚಕ್ಷುಃಶ್ರೋತ್ರಾದಿಜ್ಞಾನೇಂದ್ರಿಯಗಳಿಂದ ನಾವು ಜ್ಞಾತೃಗಳಾಗಿರುವಂತೆ, ವಾಕ್ಪಾಣ್ಯಾದಿಕರ್ಮೇಂದ್ರಿಯಗಳಿಂದ ನಾವು ಕರ್ತೃಗಳೂ ಆಗಿರುತ್ತೇವೆ. ಕರ್ಮೇಂದ್ರಿಯಗಳಿಂದ ಕಾರಕಗಳನ್ನುಪಯೋಗಿಸಿಕೊಂಡು ನಾವು ಕರ್ಮಗಳನ್ನು ಮಾಡುತ್ತಿರುವೆವಲ್ಲವೆ ? ಕರ್ತೃ, ಕರಣ, ಕರ್ಮ - ಎಂಬ ಮುಕ್ಕುಪ್ಪೆಯೂ ಜ್ಞಾತೃಜ್ಞಾನಜ್ಞೇಯವೆಂಬ ಮುಕ್ಕುಪ್ಪೆಯಂತೆ ನಮ್ಮ ವ್ಯವಹಾರದಲ್ಲಿ ದ್ದದ್ದೇ. ಜ್ಞಾನದಿಂದ ಇಚ್ಛೆ , ಇಚ್ಛೆಯಿಂದ ನಿಶ್ಚಯ, ನಿಶ್ಚಯದಿಂದ ಕರ್ಮ, ಕರ್ಮದಿಂದ ಫಲ - ಇದಿಷ್ಟೂ ವ್ಯವಹಾರದಲ್ಲಿ ಜೀವರಿಗೆಲ್ಲ ಗಂಟುಬಿದ್ದಿರುತ್ತದೆ.

**ಸ ಯಥಾ ಕಾಮೋ ಭವತಿ ತತ್ಕ್ರತುರ್ಭವತಿ ಯತ್ಕ್ರತುರ್ಭವತಿ ತತ್ಕರ್ಮ ಕುರುತೇ ಯತ್ಕರ್ಮ ಕುರುತೇ ತದಭಿಸಂಪದ್ಯತೇ ॥** ಬೃ. ೪-೪-೫

ಎಂಬ ಶ್ರುತಿಯಲ್ಲಿ ಇದಿಷ್ಟನ್ನೂ ಹೇಳಿರುತ್ತಾರೆ. ಮನುಷ್ಯನು ಎಂಥ ಕರ್ಮವನ್ನು ಮಾಡುತ್ತಾನೋ ಅದಕ್ಕನುಗುಣವಾಗಿ ಫಲವನ್ನು ಪಡೆದುಕೊಂಡು ಸುಖವನ್ನೋ

ದುಃಖವನ್ನೋ  ಅನುಭವಿಸಬೇಕಾಗುತ್ತದೆ. ಆದ್ದರಿಂದ ಅವನಿಗೆ ಜ್ಞಾತೃತ್ವವೂ ಕರ್ತೃತ್ವವೂ ಇರುವಂತೆ **ಭೋಕ್ತೃತ್ವವೂ** ಇರುತ್ತದೆ . **ಭೋಕ್ತೃತ್ವ , ಭೋಗ , ಭೋಗ್ಯ** – ಎಂಬ ಮುಕ್ಕುಪ್ಪೆಯ ವ್ಯವಹಾರವೇ ಸಾಮಾನ್ಯ ಮನುಷ್ಯನ ಜೀವನದ ಗುರಿ. 'ನಾನು', 'ನಾನು' – ಎಂದು  ಜನರು ತಳೆದುಕೊಳ್ಳುತ್ತಿರುವವರಲ್ಲ,  ಅದರಲ್ಲಿ ಈ ಜ್ಞಾತೃತ್ವ , ಕರ್ತೃತ್ವ , ಭೋಕ್ತೃತ್ವ – ಮೂರು ಸೇರಿಕೊಂಡೇ ಇರುತ್ತವೆ.

ಈ ಜ್ಞಾತೃತ್ವಾದಿಗಳೆಲ್ಲ  ಅವಿದ್ಯಾಕ್ಷೇತ್ರದಲ್ಲಿಯೇ ಇರುವವೆಂದೂ ಅವಿದ್ಯಾ ಕಾಮಕರ್ಮಗಳೇ  ಸಂಸಾರಕ್ಕೆ ಬೀಜವೆಂದೂ ಸುಖದುಃಖಗಳ ಭೋಗವೇ ಸಂಸಾರದ ಫಲವೆಂದೂ ವೇದಾಂತಿಗಳು ಜೀವನದ ಜೀವಾಳವನ್ನು ಬಿಡಿಸಿ ತಿಳಿಯಿಸುತ್ತಿದ್ದಾರೆ . ಆದರೆ ಇದೆಲ್ಲ ಅವಿದ್ಯೆಯ ವಿಲಾಸವೆಂಬುದು ಜನರ ಮನಸ್ಸಿಗೆ ಬಂದಿರುವದಿಲ್ಲ ; ಹಾಗೆ ಮನವರಿಕೆಯಾಗಿದ್ದರೆ  'ಇದು ಬೇಕು , ಅದು ಬೇಕು' – ಎಂದು ಅವರು ಹಗಲೂ ಇರುಳೂ ತಹತಹಪಡುತ್ತಿರಲಿಲ್ಲ. ಉಪ್ಪುನೀರನ್ನು ಕುಡಿದವನಿಗೆ ನೀರಡಿಕೆಯು ಹೆಚ್ಚುತ್ತಿರುವಂತೆ  ಕಾಮವು ಉಪಭೋಗಿಸಿದಷ್ಟೂ ಇನ್ನಷ್ಟು ಹೆಚ್ಚುತ್ತಲೇ ಇರುತ್ತದೆ. ನಮಗೆ ವಿಷಯಭೋಗದಿಂದ ಸುಖವು ಬರುವದೆಂದು ಜನರು ತಿಳಿದಿರುವದೂ ಒಂದು ಭ್ರಮೆಯೇ. 'ಯೇ  ಹಿ ಸಂಸ್ಪರ್ಶಜಾ ಭೋಗಾ ದುಃಖಯೋನಯ ಏವ ತೇ ' ಇಂದ್ರಿಯವಿಷಯಗಳ ಸಂಯೋಗದಿಂದ ಆಗುವ ಭೋಗಗಳು ದುಃಖಕ್ಕೇ ಕಾರಣವಾಗಿರುತ್ತವೆ – ಎಂದು  ಗೀತೆಯಲ್ಲಿ ಹೇಳಿರುವದನ್ನು ಮನದಂದರೆ ವಿಷಯಗಳ ಸಂಪಾದನೆಯಲ್ಲಿ ,  ಅವುಗಳ ಭೋಗದಲ್ಲಿ ಮತ್ತೆ ಅವುಗಳನ್ನು ಸಂರಕ್ಷಿಸಿಕೊಳ್ಳುವದ ರಲ್ಲಿ ಮತ್ತು ಅವು ನಷ್ಟವಾದರೆ ಅಳಲುವದರಲ್ಲಿ – ಎಲ್ಲೆಲ್ಲಿಯೂ ದುಃಖವೇ ಇರುತ್ತದೆ ಎಂಬುದು ಮನದಟ್ಟಾದೀತು. ನಾವು ಸುಖವೆಂದು ತಿಳಿದಿರುವದು ನಮಗಿರುವ ಒಂದಾನೊಂದು ತಂಟೆಯ ಪರಿಹಾರಮಾತ್ರ .  **'ಪ್ರತೀಕಾರಂ ವ್ಯಾಧೇಃ ಸುಖಮಿತಿ ವಿಪರ್ಯಸ್ಯತಿ ಜನಃ '** ರೋಗಕ್ಕೆ ಮಾಡಿಕೊಂಡ ಪ್ರತೀಕಾರವನ್ನೇ ಸುಖವೆಂದು ಜನವು ಭ್ರಮಿಸುತ್ತಿರುವದು – ಎಂದು ಸುಭಾಷಿತಕಾರನು ಹೇಳಿರುತ್ತಾನೆ.

ಆದ್ದರಿಂದ ನಿಜವಾಗಿ ನಾವು ಅವಿದ್ಯೆಯನ್ನು ಕಳೆದುಕೊಳ್ಳುವದಕ್ಕೆ  ಮೊದಲು ಪ್ರಯತ್ನಿಸಬೇಕು.

**ಸ ವಾ ಏಷ ಮಹಾನಜ ಆತ್ಮಾಽಜರೋಽಮರೋಽಮೃತೋಽಭಯೋ**

ಬೃ. ೪–೪–೨೫

ಈ ನಮ್ಮ ಆತ್ಮನು ಹುಟ್ಟಿಲ್ಲದ ಮುಪ್ಪು ಸಾವುಗಳಿಲ್ಲದ ಅಭಯ ಬ್ರಹ್ಮವು ಎಂಬುದನ್ನು ಅರಿತುಕೊಂಡರೆ ಸಾಕು , ನಾವು ಮಾಡಿಕೊಂಡಿರುವ ತಪ್ಪುಭಾವನೆಯನ್ನು

ನೀಗಿಕೊಂಡರೆ ಸಾಕು, ಈಗಲೇ ನಿತ್ಯಮುಕ್ತಸ್ವರೂಪದಿಂದಿರುವೆವು. ಮನೆಯಲ್ಲಿ ಎಲ್ಲೆಲ್ಲಿಯೂ ಇಟ್ಟಿರುವ ನಿಲುಗನ್ನಡಿಯಲ್ಲಿ ತನ್ನ ಪ್ರತಿಬಿಂಬಗಳನ್ನೇ ಕಂಡು ಬೇರೆಯ ನಾಯಿಗಳೆಂಬ ಭಾವನೆಯಿಂದ ಬೊಗಳುತ್ತಲೂ ಹಾರಾಡುತ್ತಲೂ ಇರುವ ನಾಯಿ ತನ್ನ ವ್ಯಥೆಯನ್ನು ಪರಿಹರಿಸಿಕೊಳ್ಳುವದಕ್ಕೆ ಇವೆಲ್ಲ ನನ್ನ ಪ್ರತಿಬಿಂಬಗಳು ಮಾತ್ರ, ನಾನೊಬ್ಬನೇ ಇಲ್ಲಿರುವವನು - ಎಂಬ ಅರಿವನ್ನು ಸಂಪಾದಿಸಿಕೊಳ್ಳುವದೊಂದೇ ಉಪಾಯವಷ್ಟೆ? ಇದರಂತೆ ನಾವೂ ನಮ್ಮ ಸ್ವರೂಪವನ್ನು ಅರಿತುಕೊಂಡರೆ ಸಾಕು.

**ಕತಮ ಆತ್ಮೇತಿ ಯೋಽಯಂ ವಿಜ್ಞಾನಮಯಃ ಪ್ರಾಣೇಷು**
**ಹೃದ್ಯಾನ್ತರ್ಜ್ಯೋತಿಃ ಪುರುಷಃ।**

ಆ ನಮ್ಮ ಆತ್ಮನು ಯಾರು ? ಈ ಇಂದ್ರಿಯಗಳೊಡನೆ ಇದ್ದುಕೊಂಡು ಹೃದಯದೊಳಗೆ ಜ್ಯೋತೀರೂಪನಾಗಿರುವ ಪುರುಷನೇ ಅವನು. ಇಂದ್ರಿಯಗಳ ಮೂಲಕವಾಗಿ ನಾವು ವಿಷಯವನ್ನು ಅರಿಯುತ್ತಿರುವಾಗಲೂ ಆ ಆತ್ಮನ ಚೈತನ್ಯದ ಬೆಳಕಿನಿಂದಲೇ ಅರಿಯುತ್ತಿರುವೆವು, ಕರ್ಮಗಳನ್ನು ಮಾಡುತ್ತಿರುವಾಗ ಅವನ ಬೆಳಕಿನಿಂದಲೇ ಮಾಡುತ್ತಿರುವೆವು, ಫಲಗಳನ್ನು ಉಪಭೋಗಿಸುತ್ತಿರುವಾಗಲೂ ಆ ಬೆಳಕಿನಿಂದಲೇ ಉಪಭೋಗಿಸುತ್ತಿರುವೆವು. ನಮ್ಮ ಎಲ್ಲಾ ವ್ಯವಹಾರವೂ ಆತ್ಮನ ಬೆಳಕಿನಿಂದಲೇ ಸಾಗಿರುತ್ತದೆ. ಇದನ್ನು ಅರಿತುಕೊಂಡರೆ ನಾವು ಆತ್ಮಜ್ಞಾನಕ್ಕಾಗಿ ಅಷ್ಟು ಚಡಪಡಿಸಬೇಕಾಗುವದಿಲ್ಲ.

ನಮ್ಮ ಕಾರ್ಯಕರಣಸಂಘಾತದಿಂದಲೇ ನಾವು ಸ್ವತಂತ್ರರಾಗಿ ವ್ಯವಹರಿಸುತ್ತಿದ್ದೇವೆಂಬುದು ತಪ್ಪುತಿಳಿವಳಿಕೆ. ಈ ಕಾರ್ಯಕರಣಸಂಘಾತದಲ್ಲಿ ನಮಗೆ ನಾವೆಂಬ ಅಭಿಮಾನವಿರುವದರಿಂದಲೇ ನಾವು ಮೃತ್ಯುವಿಗೆ ತುತ್ತಾಗುತ್ತಿರುವೆವು. **ಈ ಶರೀರೇಂದ್ರಿಯಗಳೇ ಮೃತ್ಯುವಿನ ರೂಪಗಳು.** ಎಚ್ಚರದಲ್ಲಿ ನಾವು ಈ ಶರೀರೇಂದ್ರಿಯಗಳನ್ನೇ ನಾನೆಂದು ಭಾವಿಸಿಕೊಂಡು ಇವುಗಳ ಕರ್ಮವನ್ನೇ ನಮ್ಮ ಕರ್ಮವೆಂದೂ ಅದರಿಂದಾಗುವ ಫಲವನ್ನು ಭೋಗಿಸುತ್ತಿರುವದೇ ನಮ್ಮ ಸ್ವಭಾವವೆಂದೂ ಭಾವಿಸಿ ಕೊಂಡಿರುತ್ತೇವೆ. ನಾವು ನಮ್ಮ ಬುದ್ಧಿಯು ಎಂದರೆ ಅಂತಃಕರಣವು, ಹೇಳಿದಂತೆ ಕೇಳುತ್ತಾ, ಅದು ತೋರಿಸಿದ ರೂಪಗಳನ್ನೆಲ್ಲ ನಮ್ಮವೆಂದೇ ಭಾವಿಸಿಕೊಳ್ಳುತ್ತಾ ಸಂಸಾರದಲ್ಲಿ ತೊಳಲುತ್ತಿರುವೆವು.

ಈ ಬುದ್ಧಿಯ ತಾದಾತ್ಮ್ಯವನ್ನು ಪಡೆದುಕೊಂಡೇ ಜೀವನು ಇಹಲೋಕಪರ ಲೋಕಗಳಲ್ಲಿ ಸಂಚರಿಸುತ್ತಾ ಇರುತ್ತಾನೆ. ಎಲ್ಲಿ ಯಾವ ಶರೀರವು ಕಂಡರೆ ಅದೇ ತಾನೆಂದು ಭ್ರಮಿಸುವಂತೆ ಮಾಡುತ್ತದೆ, ಈ ಬುದ್ಧಿ. ಈ ಬುದ್ಧಿಯು ಎಚ್ಚರವಾಗಿದ್ದು

ಶರೀರೇಂದ್ರಿಯಗಳೊಡನೆ ವ್ಯವಹರಿಸುತ್ತಿರುವಾಗ ತಾನೇ ಆ ವ್ಯವಹಾರವನ್ನು ಮಾಡುತ್ತಾ ಜ್ಞಾತೃ , ಕರ್ತೃ, ಭೋಕ್ತೃವಾಗಿರುತ್ತೇನೆಂದು ಭಾವಿಸಿಕೊಳ್ಳುತ್ತಾನೆ. ನಿದ್ರೆಯಲ್ಲಿ ಇವುಗಳಿಲ್ಲದಾಗ ತಾನೂ ವ್ಯವಹಾರವನ್ನು ನಿಲ್ಲಿಸಿರುತ್ತೇನೆಂದುಕೊಳ್ಳುತ್ತಾನೆ.

ಜೀವನು ಕಾಮಮಯನಾಗಿರುವದಕ್ಕೆ ಇಂದ್ರಿಯಗಳೇ ಮೂಲ. ಭಗವದ್ಗೀತೆಯಲ್ಲಿ ಹೇಳಿರುವಂತೆ :

**ಇಂದ್ರಿಯಾಣಿಮನೋಬುದ್ಧಿರಸ್ಯಾಧಿಷ್ಠಾನಮುಚ್ಯತೇ ।**
**ಏತೈರ್ವಿಮೋಹಯತ್ಯೇಷ ಜ್ಞಾನಮಾವೃತ್ಯ ದೇಹಿನಮ್ ॥**
**ತಸ್ಮಾತ್ ತ್ವಮಿನ್ದ್ರಿಯಾಣ್ಯಾದೌ ನಿಯಮ್ಯ ಭರತರ್ಷಭ ।**
**ಪಾಪ್ಮಾನಂ ಪ್ರಜಹೀಹ್ಯೇನಂ ಜ್ಞಾನವಿಜ್ಞಾನನಾಶನಮ್ ॥**

ಗೀ. ೩-೪೦, ೪೧

ಇಂದ್ರಿಯಗಳು , ಮನಸ್ಸು , ಬುದ್ಧಿ - ಇವುಗಳೇ ಕಾಮಕ್ಕೆ ಅಧಿಷ್ಠಾನವು. ಅವುಗಳನ್ನು ಆಶ್ರಯಿಸಿಕೊಂಡೇ ಕಾಮವು ಜೀವನಿಗೆ ಮೋಹವನ್ನುಂಟುಮಾಡುತ್ತಿರುವದು. ಅದರಿಂದಲೇ ಇವನಿಗೆ ತತ್ತ್ವಜ್ಞಾನವುಂಟಾಗುವದಕ್ಕೆ ಅಡ್ಡಿಯಾಗಿರುವದು. ಆದ್ದರಿಂದ ಇಂದ್ರಿಯಗಳನ್ನೇ ಮೊದಲು ಬಿಗಿಹಿಡಿದುಕೊಂಡು ಕಾಮವನ್ನು ಜಯಿಸಬೇಕೆಂದು ಭಗವಂತನು ಅರ್ಜುನನಿಗೆ ಉಪದೇಶಮಾಡಿರುತ್ತಾನೆ.

ನಿಜವಾಗಿ ನೋಡಿದರೆ ಈ ಕಾರ್ಯಕರಣಗಳು ನಮಗೆ ಎಂದೆಂದಿಗೂ ಗಂಟುಬಿದ್ದಿರುವವೆ ? ಹಾಗಿಲ್ಲ . ಕನಸನ್ನು ನೋಡಿ . ಅಂತಃಕರಣಕ್ಕೆ ಸ್ವಪ್ನವೃತ್ತಿ ಬಂತೆಂದರೆ ಜೀವನು ತಾನೂ ಸ್ವಪ್ನವಾಗಿಬಿಡುತ್ತಾನೆ ; ಆಗ ಅವನು ಮೊದಲಿನಂತೆ ಶರೀರೇಂದ್ರಿಯಗಳನ್ನು ಆಶ್ರಯಿಸಿಕೊಂಡು ಎಚ್ಚರವಾಗಿಯೇ ಉಳಿಯುವದಕ್ಕೆ ಆಗುವದಿಲ್ಲ . ಅವನು ಅಲ್ಲಿಯೂ ಜ್ಞಾನೇಂದ್ರಿಯವ್ಯವಹಾರವನ್ನೂ ಕರ್ಮೇಂದ್ರಿಯ ವ್ಯವಹಾರವನ್ನೂ ಮಾಡುವವನಂತೆ ಕಾಣಿಸುತ್ತಿರುವದು ನಿಜ. ಆದರೆ ಅದೆಲ್ಲ ಹುಸಿತೋರಿಕೆ ಎಂಬುದು ನಮಗೆಲ್ಲ ಗೊತ್ತಾಗಿಬಿಟ್ಟಿರುವ ವಿಷಯ. 'ಧ್ಯಾಯತೀವ ಲೇಲಾಯತೀವ ' ಇಂದ್ರಿಯಗಳಿಂದ ಅಲ್ಲಿ ಅರಿಯುವವನಂತೆ ಕಾಣಿಸುತ್ತಾನೆ, ಅಷ್ಟೆ. ನಿಜವಾಗಿ ಅಲ್ಲಿ ಅವನು ಕಣ್ಣಿನಿಂದ ನೋಡುವದಿಲ್ಲ ಕಿವಿಯಿಂದ ಕೇಳುವದಿಲ್ಲ ಮೂಗಿನಿಂದ ಮೂಸುವದಿಲ್ಲ ತ್ವಗಿಂದ್ರಿಯದಿಂದ ಮುಟ್ಟುವದಿಲ್ಲ ನಾಲಗೆಯಿಂದ ಸವಿಯುವದೂ ಇಲ್ಲ. ವಾಗಿಂದ್ರಿಯದಿಂದ ಮಾತಾಡುವದಿಲ್ಲ ಹಸ್ತಗಳಿಂದ ಹಿಡಿಯುವದಿಲ್ಲ ಪಾದಗಳಿಂದ ಸಂಚರಿಸುವದಿಲ್ಲ ; ಅಲ್ಲಿ ಜ್ಞಾನೇಂದ್ರಿಯಗಳು

ಇರುವಂತೆ ಕಾಣುತ್ತದೆ ಅವುಗಳಿಂದ ಅರಿಯುವಂತೆಯೂ ಕಾಣಿಸುತ್ತದೆ ; ಇದರಂತೆ ಕರ್ಮೇಂದ್ರಿಯಗಳಿಂದ ಯಾವ ಕೆಲಸವನ್ನೂ ಮಾಡುವದಿಲ್ಲ . ಅಲ್ಲಿ ಶರೀರದ ತೋರಿಕೆಯಿರುತ್ತದೆ , ಇಂದ್ರಿಯಗಳ ತೋರಿಕೆಯಿರುತ್ತದೆ . ಅಷ್ಟೆ . ಆಗ ನಿಜವಾಗಿ **'ಅತಿಕ್ರಾಮತಿ ಮೃತ್ಯೋಃ ರೂಪಾಣಿ'** ಮೃತ್ಯುವಿನ ರೂಪಗಳಾದ ಶರೀರೇಂದ್ರಿಯ ಗಳನ್ನು ದಾಟಿರುತ್ತಾನೆ. ಶರೀರ, ಇಂದ್ರಿಯಗಳು - ಇವುಗಳಿಂದಲಲ್ಲವೆ ನಾವು ವಿಷಯಗಳಲ್ಲಿ ಇಚ್ಛಾದ್ವೇಷಗಳುಳ್ಳವರಾಗಿ , ಕರ್ಮಗಳನ್ನು ಮಾಡಿ , ಸುಖದುಃಖ ಗಳನ್ನು ಉಪಭೋಗಿಸುತ್ತಿರುವದು ? ಆದ್ದರಿಂದ ಇವೇ 'ಮೃತ್ಯುರೂಪಗಳು'. 'ನಿಜವಾಗಿ ಇವು ನಮ್ಮ ಸ್ವಭಾವಕ್ಕೆ ಸೇರಿಲ್ಲ; ಕಾಮಕರ್ಮಗಳು ನಮಗೆ ನಿಜವಾಗಿಯೇ ಗಂಟುಬಿದ್ದಿಲ್ಲ . ನಮ್ಮ ಸ್ವಭಾವವು ಕಾಮಕರ್ಮಗಳನ್ನು ಮೀರಿರುತ್ತದೆ ' ಎಂದು ಕನಸಿನ ಅನುಭವದಿಂದ ನಿರ್ಣಯವಾಗುತ್ತದೆ. ಇವು ನಮ್ಮ ಸ್ವಭಾವವೇ ಆಗಿದ್ದರೆ ಆಗಲೂ ನಮಗೆ ಅಂಟಿಕೊಂಡೇ ಇರಬೇಕಾಗಿತ್ತು . ಆದರೆ ಹಾಗಿಲ್ಲ . ಕನಸಿನ ಅವಸ್ಥೆಯಲ್ಲಿ ನಾವು ಇವುಗಳ ಹಂಗೇ ಇಲ್ಲದೆ ಇರುತ್ತೇವೆ. ಜಾಗ್ರತ್ಸ್ವಪ್ನಗಳ ಸ್ವರೂಪವನ್ನು ಮತ್ತೆಮತ್ತೆ ಪರಿಭಾವನೆಮಾಡುವದರಿಂದ ನಮ್ಮಲ್ಲಿ ಕಾಮವಾಗಲಿ ಕರ್ತೃತ್ವಭೋಕ್ತೃತ್ವಗಳಾಗಲಿ ನಿಜವಾಗಿರುವದಿಲ್ಲವೆಂದು ಸಿದ್ಧವಾಗುತ್ತದೆ.

## ೧೦. ಆತ್ಮನು ಅಸಂಗನು

(15-8-64)

ಅವಿದ್ಯಾಕಾಮಕರ್ಮಗಳೇ ಸಂಸಾರದ ಸ್ವರೂಪ. ಆದ್ದರಿಂದ ಅವೇ ಮೃತ್ಯು . ಅವಿದ್ಯೆಯು ನಮಗೆ ಇದು ಅವಿದ್ಯೆ ಎಂಬುದು ಮನಸ್ಸಿಗೆ ಹತ್ತದಿರುವಾಗಲೂ ಕಾಮವೂ ಕರ್ಮವೂ ಕಾಣಿಸುತ್ತಿರುತ್ತವೆ. ಕಾಮವೆಂಬುದು ಉಪಲಕ್ಷಣ . ಕಾಮ , ಕ್ರೋಧ , ಲೋಭ , ಮೋಹ , ಮದ , ಮಾತ್ಸರ್ಯ - ಮುಂತಾದ ದೋಷ ಗಳೆಲ್ಲವನ್ನೂ ಕಾಮವೆಂಬ ಶಬ್ದದಿಂದ ಗ್ರಹಿಸಬೇಕು. ನಾವು ಕಾಮವಶರಾಗಿ ಧರ್ಮಾಧರ್ಮಗಳನ್ನು ಮಾಡುತ್ತಾ ಅವುಗಳ ಫಲವನ್ನು ಅನುಭವಿಸುವದಕ್ಕಾಗಿಯೇ ಸಂಸಾರದಲ್ಲಿ ತೊಳಲುತ್ತಿರುತ್ತೇವೆ . ಕಾಮವೇ ಜೀವರ ಶತ್ರು , ಆದರೆ ಹಾಗೆಂದು ಎಲ್ಲರಿಗೂ ತಿಳಿದಿರುವದಿಲ್ಲ.

**ಆವೃತಂ ಜ್ಞಾನಮೇತೇನ ಜ್ಞಾನಿನೋ ನಿತ್ಯವೈರಿಣಾ।**
**ಕಾಮರೂಪೇಣ ಕೌನ್ತೇಯ ದುಷ್ಪೂರೇಣಾನಲೇನ ಚ॥** ಗೀ. ೩-೩೯.

ಕಾಮವು ಜ್ಞಾನವನ್ನು ಮುಚ್ಚಿಹಾಕಿ ಅಕಾರ್ಯದಲ್ಲಿ ತೊಡಗಿಸಿಬಿಡುತ್ತದೆ. ವಿವೇಕಿಯಾದವನು 'ಇದೇ ನನ್ನನ್ನು ಅನರ್ಥದಲ್ಲಿ ಮುಳುಗಿಸಿ ಗೋಳಾಡಿಸುತ್ತಿರುವದು. ಆದ್ದರಿಂದ ಇದಕ್ಕೆ ವಶನಾಗಬಾರದು' - ಎಂದು ಮೊದಲೇ ಎಚ್ಚರಿಕೆಯಿಂದಿರುತ್ತಾನೆ. ಆದರೆ ಮೂರ್ಖನಾದವನು ತತ್ಕಾಲಕ್ಕೆ ಕಾಮವನ್ನು ಮಿತ್ರನಂತೆ ಬರಮಾಡಿಕೊಂಡು ದುಃಖವು ಬಂದೊದಗಿದಮೇಲೆ 'ಅಯ್ಯೊ ! ಹಾಳು ಆಶೆಯಿಂದ ಹೀಗೆ ದುಃಖಕ್ಕೆ ಈಡಾದೆನಲ್ಲ! ' ಎಂದು ಕೊರಗುತ್ತಾನೆ . ಜ್ಞಾತೃತ್ವ , ಇಚ್ಛೆ , ಕಾಮ , ಬೇಕಾದದ್ದನ್ನು ಸಂಪಾದಿಸುವದಕ್ಕೆ ಅಥವಾ ಬೇಡವಾದದ್ದನ್ನು ದೂರವಾಗಿರಿಸುವದಕ್ಕೆ ಪ್ರಯತ್ನಿಸುವದು - ಇದೇ ಅಲ್ಲವೆ, ಜೀವನ ಜೀವತ್ವ ?

ಶರೀರೇಂದ್ರಿಯಗಳೇ ಈ ಅವಿದ್ಯಾಕಾಮಕರ್ಮರೂಪವಾದ ಮೃತ್ಯುವಿನ ರೂಪಗಳು . ಅವುಗಳಿಲ್ಲದೆ ಇದ್ದರೆ ಎಲ್ಲಿಯ ಕಾಮ, ಎಲ್ಲಿಯ ಕರ್ಮ ? ಅಂತಃಕರಣಕ್ಕೆ ಸ್ವಪ್ನಾವಸ್ಥೆಯು ಬಂದಾಗ ಜೀವನು ತಾನೇ ಸ್ವಪ್ನತಾದಾತ್ಮ್ಯವನ್ನು ಹೊಂದಿ ಅಲ್ಲಿಯ ದೃಶ್ಯಗಳಲ್ಲಿ ಮಗ್ನನಾಗಿಬಿಡುತ್ತಾನೆ . ಆಗ ಎಚ್ಚರದ ಶರೀರೇಂದ್ರೀಯಗಳ ಹಂಗು ಅವನಿಗೆ ಇರುವದೇ ಇಲ್ಲ . ಶರೀರಾದಿಗಳನ್ನು ಮತ್ತೊಂದು ಶ್ರುತಿಯಲ್ಲಿ 'ಪಾಪ' ಎಂದು ಕರೆದಿರುತ್ತದೆ. ಪಾಪವೆಂದರೆ ಧರ್ಮಾಧರ್ಮಗಳು ; ಅವಕ್ಕೆ ಆಶ್ರಯವಾಗಿರುವದರಿಂದ ಕಾರ್ಯಕರಣಸಂಘಾತವನ್ನೇ ಶ್ರುತಿಯು ಪಾಪವೆಂದಿದೆ.

**ಸ ವಾ ಅಯಂ ಪುರುಷೋ ಜಾಯಮಾನಃ ಶರೀರಮಭಿಸಂಪದ್ಯಮಾನಃ ಪಾಪ್ಮಭಿಃ ಸಂಸೃಜ್ಯತೇ ಸ ಉತ್ಕ್ರಾಮನ್ ಮ್ರಿಯಮಾಣಃ ಪಾಪ್ಮನೋ ವಿಜಹಾತಿ ||** ಬೃ. ೪-೩-೮

ಮನುಷ್ಯನು ಹುಟ್ಟುವಾಗ , ಒಂದು ಶರೀರದಲ್ಲಿ ತಾನೆಂಬ ಅಭಿಮಾನವನ್ನು ತಳೆದು ಪಾಪಗಳ ಸಂಯೋಗವನ್ನು ಪಡೆದುಕೊಳ್ಳುತ್ತಾನೆ , ಅಲ್ಲಿಯ ಕಾರ್ಯಕರಣಗಳ ಸಂಬಂಧವನ್ನು ಪಡೆದುಕೊಳ್ಳುತ್ತಾನೆ ; ಮತ್ತೆ ಪ್ರಾಣೋತ್ಕ್ರಮಣವಾಗಿ ಸಾಯುವಾಗ ಅವುಗಳ ವಿಯೋಗವನ್ನು ಪಡೆಯುತ್ತಾನೆ . ಹೀಗೆ ಕಾರ್ಯಕರಣಗಳನ್ನು ಹೊಂದುತ್ತಲೂ ಬಿಡುತ್ತಲೂ ಮತ್ತೆಮತ್ತೆ ಬೇರೆಬೇರೆಯ ಜನ್ಮಗಳನ್ನು ಪಡೆಯುತ್ತಿರುವನು. ಆದ್ದರಿಂದ ಈ ಪಾಪರೂಪವಾಗಿರುವ ಕಾರ್ಯಕರಣಗಳು ಆತ್ಮನ ಧರ್ಮವಲ್ಲವೆಂದಾಯಿತು. ಅವು ಅವನ ಸ್ವಾಭಾವಿಕಧರ್ಮವೇ ಆಗಿದ್ದರೆ ಅವನನ್ನು ಬಿಟ್ಟು ಹೋಗುವದು ಹೇಗೆ ? ಮತ್ತೆ ಬಂದು ಸೇರಿಕೊಳ್ಳುವದಾದರೂ ಹೇಗೆ ?

ಯಾವ ಶರೀರವು ಜೀವನಿಗೆ ಬರುವದೋ ಅದರಲ್ಲಿಯೇ ಆ ಕಾಲಕ್ಕೆ ತದಾತ್ಮ್ಯವನ್ನು ಪಡೆದುಕೊಳ್ಳುತ್ತಾನೆಂಬುದನ್ನು ಮನಗಾಣಿಸುವದಕ್ಕೆ ದೃಷ್ಟಾಂತವಾಗಿ

ವಿವೇಕಾನಂದರು ಒಂದು ಕಡೆಯಲ್ಲಿ ಇಂದ್ರನಿಗೆ ಪಾಪವಶದಿಂದ ಹಂದಿಯ ಜ
ಬಂದದ್ದನ್ನು ಹೇಳಿರುತ್ತಾರೆ. ಆಗ ಇಂದ್ರನಿಗೆ ಆ ಹಂದಿಯ ಶರೀರವೇ ತಾನೆಂದೂ ಆ ಹಂದಿಯ ಮರಿಗಳೇ ತನ್ನ ಕುಟುಂಬವೆಂದೂ ಬಲವಾದ ಅಭಿಮಾನವು ಇದ್ದು ಬಿಟ್ಟಿತು. ಹೀಗಿದ್ದರೂ ನಮಗೆ ಯಾವ ಶರೀರೇಂದ್ರಿಯಸಂಘಾತದ ಹಂಗೂ ನಿಜವಾಗಿ ಇರುವದಿಲ್ಲ. ಜ್ಞಾನಿಯಾದವನು ನಾನು ನಿತ್ಯವೂ 'ಅಶರೀರನು' ಎಂದು ತಿಳಿದು ಕೊಂಡಿರುತ್ತಾನೆ.

**ಅಶರೀರಂ ವಾವ ಸನ್ತಂ ನ ಪ್ರಿಯಾಪ್ರಿಯೇ ಸ್ಪೃಶತಃ ॥** ಛಾಂ. ೮-೧೨-೧

ಅಶರೀರನಾಗಿರುವಾತನನ್ನು ಪ್ರಿಯವಾಗಲಿ ಅಪ್ರಿಯವಾಗಲಿ ಮುಟ್ಟುವದಿಲ್ಲ, ಪುಣ್ಯಪಾಪಗಳ ಫಲವಾದ ಸುಖದುಃಖಗಳ ಅನುಭವವೇ ಅವನಿಗೆ ಇರುವದಿಲ್ಲ. ಶ್ರೀಶಂಕರಭಗವತ್ಪಾದರು ಈ ಶ್ರುತಿಯನ್ನು ಉದಾಹರಿಸಿ ನಾವು ಸಶರೀರರೆಂಬುದು ಮಿಥ್ಯಾಪ್ರತ್ಯಯಮಾತ್ರವಾಗಿರುತ್ತದೆ - ಎಂಬುದನ್ನು ಸ್ಪಷ್ಟಗೊಳಿಸಿರುತ್ತಾರೆ. ನಮಗೆ ಶರೀರವಿದೆ ಎಂದು ನಾವು ಗಟ್ಟಿಯಾಗಿ ನಂಬಿರುವ ತಪ್ಪು ತಿಳಿವಳಿಕೆಯನ್ನು ಬಿಟ್ಟರೆ ಮತ್ತೆ ಯಾವದೂ ಆ ನಂಬಿಕೆಗೆ ಆಧಾರವಾದ ಪ್ರಮಾಣವಿರುವದಿಲ್ಲ. ಪ್ರತ್ಯಕ್ಷ ಪ್ರಮಾಣ ದಿಂದ ನಾವು ಸಶರೀರರೆಂದು ಸಿದ್ಧವಾಗುವದಿಲ್ಲವೆ ? - ಎಂದರೆ ಪ್ರತ್ಯಕ್ಷ ಪ್ರಮಾಣ ವಾದ ಇಂದ್ರಿಯಗಳಿಗೆ ಆಶ್ರಯವಾಗಿಯೇ ಮೊದಲು ಶರೀರವಿರಬೇಕಾಗುತ್ತದೆ ; ಆ ಶರೀರವು ನಮಗೆ ಹೇಗೆ ಎಲ್ಲಿಂದ ಬಂತು ? ಅದು ನಿಜವಾಗಿ ನಮಗೆ ಸೇರಿದ್ದೆಂಬುದಕ್ಕೆ ಪ್ರಮಾಣವೇನು ? - ಎಂದು ಕೇಳಿದರೆ ಯಾವ ಸದುತ್ತರವೂ ನಮಗೆ ತೋರು ವಂತಿರುವದಿಲ್ಲ. 'ಹಿಂದಿನ ಜನ್ಮದಲ್ಲಿ ಮಾಡಿದ ಕರ್ಮಗಳ ಫಲವೇ ಈಗಿನ ಶರೀರವು' ಎಂಬುದೂ ಸರಿಯಾಗುವದಿಲ್ಲ ; ಏಕೆಂದರೆ ಹಿಂದನ ಜನ್ಮವೆಂಬುದಾಗಲಿ ಅಲ್ಲಿದ್ದ ಶರೀರವಾಗಲಿ ನಿಜವಾಗಿ ಆತ್ಮನಿಗೆ ಸೇರಿತ್ತೆಂಬುದಕ್ಕೆ ಯಾವ ಪ್ರಮಾಣವೂ ಇಲ್ಲ - ಎಂಬ ಆಕ್ಷೇಪವು ಹಾಗೆಯೇ ಉಳಿದುಕೊಂಡುಬಿಡುತ್ತದೆ. ಅದು ಆ ಹಿಂದಿನ ಜನ್ಮದ ಕರ್ಮದ ಫಲವು ಎಂಬುದು ಅನವಸ್ಥೆಗೆ ಕಾರಣವಾಗುತ್ತದೆ . ಏಕೆಂದರೆ ಯಾವದೊಂದು ಜನ್ಮದಲ್ಲಿಯೂ ನಮಗೆ ಶರೀರವು ನಿಜವಾಗಿ ಸಂಬಂಧಿಸಿತ್ತು - ಎಂಬುದಕ್ಕೆ ಯಾವ ಪ್ರಮಾಣವೂ ಇರುವದಿಲ್ಲ. ಒಬ್ಬ ಕುರುಡನು 'ನನಗೆ ಚಿತ್ರದ ರೂಪವನ್ನು ಮತ್ತೊಬ್ಬ ಹುಟ್ಟು ಕುರುಡನು ತೋರಿಸಿದನು' ಎನ್ನುವುದೂ , ಅವನನ್ನು ಕೇಳಿದರೆ ಅವನೂ ಹಾಗೆಯೇ ಮತ್ತೊಬ್ಬ ಹುಟ್ಟುಕುರುಡನ ಪ್ರಾಮಾಣ್ಯವನ್ನು ಹೇಳುವದೂ ಹೇಗೋ ಹಾಗೆಯೇ ಈ ಜನ್ಮಾಂತರಪರಂಪರೆಯನ್ನು ಪ್ರಮಾಣವೆಂದು ಉದಾಹರಿಸುವದಾಗಿದೆ. ಎಲ್ಲರೂ ಶರೀರವು ನಮಗೆ ಸೇರಿದೆ ಎಂದೇ ಹೇಳುತ್ತಿರುವ

ರಲ್ಲ! ನಮ್ಮ ಹಿಂದಿನವರೂ ಹೀಗೆಂದೇ ನಂಬಿದ್ದರಲ್ಲ! – ಎಂಬುದಂತೂ ಎಂದಿಗೂ ಹೊಂದಲಾರದು . ತನ್ನ ಮನೆಯ ಒಡವೆಯೊಂದನ್ನು ಅಕ್ಕಸಾಲೆಗೆ ತೋರಿಸಿದಾಗ ಅವನು ಅದನ್ನು ಒರೆಗಲ್ಲಿನ ಮೇಲೆ ತಿಕ್ಕಿ 'ಇದು ಸರಿಯಾದ ಚಿನ್ನವಲ್ಲ' ಎಂದಮೇಲೂ 'ಬಹಳ ಹಿಂದಿನ ಕಾಲದಿಂದಲೂ ಇದು ಚಿನ್ನದೊಡವೆಯೆಂದೇ ನಮ್ಮ ಮನೆಯವರು ಹೇಳುತ್ತಾ ಬಂದಿದಾರಲ್ಲ !' ಎನ್ನುವಂತೆ ಇದು ಹಾಸ್ಯಾಸ್ಪದವಾದ ಮಾತಾಗಿರುತ್ತದೆ.

ಇದೂ ಅಲ್ಲದೆ ಕನಸಿನಲ್ಲಿ ಶರೀರದ ಹಂಗಿಲ್ಲವೆಂಬುದನ್ನು ಆಗಲೆ ತೋರಿಸಿದ್ದಾಗಿರುತ್ತದೆ . ಆದರೆ ಅದೆಲ್ಲ ಬರಿಯ ಕನಸಲ್ಲವೆ ? ಕನಸನ್ನು ಎಚ್ಚರಕ್ಕೆ ಹೋಲಿಸುವದು ಸರಿಯೆ ? – ಎಂದರೆ ಅದಕ್ಕೆ ಉತ್ತರವು ನಮಗೆಲ್ಲರಿಗೂ ಸ್ಪಷ್ಟ ವಾಗಿದೆ. ಕನಸಿನಲ್ಲಿ ಎಲ್ಲವೂ ಎಚ್ಚರದಂತೆ ನಿಜವೆಂದೇ ಆಗ್ಗೆ ತೋರುತ್ತಿರುತ್ತದೆ . ಆದರೆ ಅದು ಬಾಧಿತವಾಗುವದರಿಂದ ಅದೆಲ್ಲ ಹುಸಿ ಎಂದು ನಾವೆಲ್ಲರೂ ಒಪ್ಪಿರುತ್ತೇವೆ . ಶ್ರುತಿಯೂ ಇದನ್ನೇ ಅನುವಾದಮಾಡಿ ಹೇಳುತ್ತಿರುವದನ್ನು ಕೇಳಿರಿ.

**ನ ತತ್ರ ರಥಾ ನ ರಥಯೋಗಾ ನ ಪನ್ಥಾನಃ ಭವನ್ತ್ಯಥ ರಥಾನ್ ರಥಯೋಗಾನ್ ಪಥಃ ಸೃಜತೇ ನ ತತ್ರಾಽಽನನ್ದಾ ಮುದಃ ಪ್ರಮುದೋ ಭವನ್ತ್ಯಥಾಽಽನನ್ದಾನ್ ಮುದಃ ಪ್ರಮುದಃ ಸೃಜತೇ ನ ತತ್ರ ವೇಶಾನ್ತಾಃ ಪುಷ್ಕರಿಣ್ಯಃ ಸ್ರವನ್ತ್ಯೋ ಭವನ್ತ್ಯಥ ವೇಶಾನ್ತಾನ್ ಪುಷ್ಕರಣೀಃ ಸ್ರವನ್ತೀಃ ಸೃಜತೇ ಸ ಹಿ ಕರ್ತಾ ॥** ಬೃ. ೪–೩–೧೦

"ಅಲ್ಲಿ ಗಾಡಿಗಳಿರುವದಿಲ್ಲ , ಅವಕ್ಕೆ ಕಟ್ಟಿದ ಕುದುರೆ ಮುಂತಾದವು ಇರುವದಿಲ್ಲ. ಆ ಗಾಡಿಗಳು ಓಡಾಡುವ ರಸ್ತೆಗಳೂ ಇರುವದಿಲ್ಲ ; ಆದರೂ ಗಾಡಿಗಳನ್ನೂ ಕುದುರೆ ಮುಂತಾದ ಪ್ರಾಣಿಗಳನ್ನೂ ಯಾನಗಳು ನಡೆಯುವ ಹಾದಿಗಳನ್ನೂ ಸೃಷ್ಟಿಮಾಡಿಕೊಳ್ಳುತ್ತಾನೆ. ಅಲ್ಲಿ ಆನಂದಗಳಿರುವದಿಲ್ಲ , ಮೋದ ಗಳಿರುವದಿಲ್ಲ, ಪ್ರಮೋದಗಳಿರುವದಿಲ್ಲ ; ಆದರೂ ಆನಂದಗಳನ್ನೂ , ಮೋದಗಳನ್ನೂ, ಪ್ರಮೋದಗಳನ್ನೂ ಸೃಷ್ಟಿಮಾಡಿಕೊಳ್ಳುತ್ತಾನೆ. ಅಲ್ಲಿ ಕುಂಟೆಗಳಿರುವದಿಲ್ಲ , ಕೆರೆಕಟ್ಟೆಗಳಿರುವದಿಲ್ಲ , ಹರಿಯುವ ನದಿಗಳುರುವದಿಲ್ಲ , ಆದರೂ ಕುಂಟೆಗಳನ್ನೂ ಕಟ್ಟೆಗಳನ್ನೂ ಹೊಳೆಗಳನ್ನೂ ಸೃಷ್ಟಿಮಾಡಿಕೊಳ್ಳುತ್ತಾನೆ . ಅವನೇ ಕರ್ತೃವಲ್ಲವೆ ?" ಎಂದು ಶ್ರುತಿ ಹೇಳುತ್ತಿದೆ . ಮಲಗಿದಾತನಿಗೆ ಮಲಗಿದ್ದಲ್ಲಿಯೇ ನಿದ್ರೆ ಬಂದಿದೆ . ಆದರೂ ಅವನೊಳಗೇ ವಿಶಾಲವಾದ ಭೂಮಿ , ನದಿ , ಕೆರೆ , ಕುಂಟೆ , ಗಾಡಿ , ಕುದರೆ , ರಸ್ತೆ , ಪ್ರಿಯವಾದ ವಸ್ತುಗಳ ಲಾಭದಿಂದ ಆಗುವ ಹರ್ಷಾದಿಗಳು , ಅಪ್ರಿಯವಾದ ಘಟನೆಗಳಿಂದಾಗುವ ದುಃಖಗಳು ,

ಕಾಮಕ್ರೋಧಗಳು , ಭಯಾದಿಗಳು , ಎಲ್ಲವೂ ಎಚ್ಚರದಲ್ಲಿ ಹೇಗೋ ಹಾಗೆಯೇ ಅಲ್ಲಿಯೂ ಕಾಣುತ್ತಿರುತ್ತವೆ ! ಹೆಚ್ಚೇಕೆ ? ಎಚ್ಚರದಲ್ಲಿ ತೋರುವಂತೆಯೇ ಅಧ್ಯಾತ್ಮ , ಅಧಿಭೂತ , ಅಧಿದೈವ - ಎಂಬ ಮೂರು ವಿಂಗಡದ ಪ್ರಪಂಚವೇ ಅಲ್ಲಿ ನಿಜವಾಗಿರುವಂತೆಯೇ ಗೋಚರವಾಗುತ್ತದೆ - ಎಂಬುದು ಎಲ್ಲರಿಗೂ ಅನುಭವದಲ್ಲಿರುತ್ತದೆ. ಸ್ವಪ್ನದಲ್ಲಿ ಏನೂ ಇರುವದಿಲ್ಲವಾದರೂ ಜೀವನೇ ಅದನ್ನೆಲ್ಲ 'ಸೃಷ್ಟಿಮಾಡಿಕೊಳ್ಳುತ್ತಾನೆ' ಎಂದು ಶ್ರುತಿ ಹೇಳುವದರಿಂದ ಕನಸಿನಲ್ಲಿ ಪ್ರಾತಿಭಾಸಿಕವಸ್ತುಗಳು ಸೃಷ್ಟವಾಗಿರುತ್ತವೆ ಎಂದು ಈಗಿನ ಕೆಲವರು ವೇದಾಂತಿಗಳು ಅಭಿಪ್ರಾಯಪಟ್ಟಿರುತ್ತಾರೆ. ಶ್ರುತಿಯಲ್ಲಿಯೂ

> **ಸ ಯತ್ರ ಪ್ರಸ್ವಪಿತ್ಯಸ್ಯ ಲೋಕಸ್ಯ ಸರ್ವಾವತೋ ಮಾತ್ರಾಮಪಾದಾಯ ಸ್ವಯಂ ವಿಹತ್ಯ ಸ್ವಯಂ ನಿರ್ಮಾಯ ಸ್ವೇನ ಭಾಸಾ ಸ್ವೇನ ಜ್ಯೋತಿಷಾ ಪ್ರಸ್ವಪಿತ್ಯತ್ರಾಯಂ ಪುರುಷಃ ಸ್ವಯಂಜ್ಯೋತಿರ್ಭವತಿ ॥** ಬೃ. ೪-೩-೯.

'ಈ ಜಾಗ್ರಲ್ಲೋಕದ ಒಂದಂಶವನ್ನು ತೆಗೆದುಕೊಂಡು ಈ ರೂಪವನ್ನು ತಾನೇ ನಾಶಮಾಡಿ ತಾನೇ ಹೊಸದೊಂದನ್ನು ನಿರ್ಮಾಣಮಾಡಿಕೊಂಡು ಕನಸು ಕಾಣುತ್ತಿರುತ್ತಾನೆ ' ಎಂದಿದೆ. ಆದ್ದರಿಂದ ಈ ಶ್ರುತಿಯ ಬಲದಿಂದ ಅಲ್ಲಿ ಪ್ರಾತಿಭಾಸಿಕ (ತೋರಿಕೆಯ) ದೃಶ್ಯಗಳು ಹೊಸದಾಗಿ ಸೃಷ್ಟಿಯಾಗಿರುತ್ತವೆ - ಎಂದು ಅವರು ಕಲ್ಪಿಸಿರುತ್ತಾರೆ. ಆದರೆ 'ಕನಸಿನಲ್ಲಿ ನಾನು ಪ್ರಪಂಚವನ್ನೂ ಅಲ್ಲಿಯ ವಸ್ತುಗಳನ್ನೂ ಸೃಷ್ಟಿಮಾಡಿಕೊಂಡಿದ್ದೆ ' ಎಂದು ಯಾರೂ ಭಾವಿಸುವದಿಲ್ಲ . ಅಲ್ಲಿ ಯಾವದೊಂದೂ ಇರಲಿಲ್ಲ . 'ಹುಸಿತೋರಿಕೆಯನ್ನೇ ನಿಜವೆಂದು ಆಗ್ಗೆ ಎಣಿಸಿದ್ದೆನು ' ಎಂದಲ್ಲವೆ , ಎಲ್ಲರೂ ಹೇಳುತ್ತಾರೆ ? ಶಂಕರಾಚಾರ್ಯರವರೂ ಈ ವಿಷಯವನ್ನು ಚರ್ಚೆಮಾಡಿ ಸೂತ್ರಭಾಷ್ಯದಲ್ಲಿ ಹೀಗೆಂದು ಬರೆದಿರುತ್ತಾರೆ :

> **"ಏವಂ ನಿಮಿತ್ತಮಾತ್ರತ್ವಾತ್ ಸುಪ್ತೋ 'ರಥಾದೀನ್ ಸೃಜತೇ ಸ ಹಿ ಕರ್ತಾ' ಇತಿ ಚೋಚ್ಯತೇ ನ ತು ಪ್ರತ್ಯಕ್ಷಮೇವ ಸುಪ್ತೋ ರಥಾದೀನ್ ಸೃಜತಿ । ನಿಮಿತ್ತತ್ವಂ ತು ಅಸ್ಯ ರಥಾದಿಪ್ರತಿಭಾನನಿಮಿತ್ತಮೋದತ್ರಾಸಾದಿದರ್ಶನಾತ್ ತನ್ನಿಮಿತ್ತಭೂತಯೋಃ ಸುಕೃತದುಷ್ಕೃತಯೋಃ ಕರ್ತೃತ್ವೇನ ಇತಿ ವಕ್ತವ್ಯಮ್ ।"**

ಜೀವನು ನಿಮಿತ್ತಮಾತ್ರನಾಗಿರುವದರಿಂದ ಗಾಡಿಯೇ ಮುಂತಾದವನ್ನು ಸೃಷ್ಟಿಮಾಡಿಕೊಳ್ಳುತ್ತಾನೆಂದು ಶ್ರುತಿಯಲ್ಲಿ ಹೇಳಿದ ಗಾಡಿಯೇ ಮುಂತಾದವುಗಳು ತೋರುವ ನಿಮಿತ್ತದಿಂದ ಸಂತೋಷ, ಭಯ - ಮುಂತಾದವುಗಳುಂಟಾಗುವದರಿಂದ

ಆ ಸಂತೋಷಾದಿಗಳಿಗೆ ನಿಮಿತ್ತವಾದ ಪುಣ್ಯಪಾಪಗಳನ್ನು ಇವನು ಮಾಡಿದ್ದನಾದ್ದರಿಂದ ಇವನು ಈ ಕನಸಿಗೆ ನಿಮಿತ್ತವಾಗಿರುತ್ತಾನೆಂದು ಹೇಳಬೇಕು –ಎಂದು ಆಚಾರ್ಯರು ಸ್ಪಷ್ಟವಾಗಿ ಹೇಳಿರುತ್ತಾರೆ. ಲೋಕದಲ್ಲಿ ನಮಗೆ ಯಾವಯಾವ ದೃಶ್ಯಗಳು ಕಾಣುತ್ತವೆಯೋ ಅವುಗಳಲ್ಲಿ ಒಳ್ಳೆಯದು , ಕೆಟ್ಟದ್ದು – ಎಂಬ ಭಾವನೆಯನ್ನು ನಾವು ನಾವೇ ಕಲ್ಪಿಸಿಕೊಳ್ಳುತ್ತಿರುವೆವು . ಆದ್ದರಿಂದಲೇ ಅಲ್ಲವೆ, ಒಬ್ಬನಿಗೆ ಒಳ್ಳೆಯದೆಂದು ತೋರುವ ಪದಾರ್ಥವೇ ಮತ್ತೊಬ್ಬನಿಗೆ ಕೆಟ್ಟದ್ದೆಂದು ತೋರುತ್ತದೆ ? ಹೀಗೆ ನಮ್ಮ ನಮ್ಮ ಕರ್ಮಾನುಸಾರವಾಗಿ ನಮ್ಮ ನಮ್ಮ ಮನಸ್ಸಿನಲ್ಲಿ ಉಂಟಾಗುವ ಭಾವನೆಗಳೇ ನಮನಮಗೆ ಆಗುವ ಸುಖದುಃಖಾದಿಗಳಿಗೆ ಕಾರಣವಾಗುತ್ತವೆ ಎಂಬುದು ಯುಕ್ತವೂ ಆಗಿರುತ್ತದೆ. ಕನಸಿನಲ್ಲಿ ತೋರುವ ದೃಶ್ಯಗಳು ಅಲ್ಲಿ ನಿಜವಾಗಿ ಹುಟ್ಟುತ್ತವೆ ಎಂದು ಯಾರೂ ಬಗೆಯುವದಿಲ್ಲ. ಹೀಗೆಯೇ ಕಪ್ಪೆಯ ಚಿಪ್ಪನ್ನು ಬೆಳ್ಳಿಯೆಂದೂ ಹಗ್ಗವನ್ನು ಹಾವೆಂದೂ ಮರಳುಬಯಲನ್ನು ಕೆರೆಯೆಂದೂ ವಿಕಲ್ಪಿಸುವಾಗಲೂ ಆಯಾ ಸ್ಥಲದಲ್ಲಿ ಬೆಳ್ಳಿಯೇ ಮುಂತಾದ ವಸ್ತುಗಳು ನಿಜವಾಗಿ ಅಲ್ಲಿರುವದೇಇಲ್ಲವೆಂಬುದು ನಮ್ಮೆಲ್ಲರಿಗೂ ತಿಳಿದೇ ಇರುವ ಮಾತು. ಆದರೂ ಕೆಲವರು ವೇದಾಂತಿಗಳು ಅಲ್ಲಿ ನಿಜ ವಾಗಿಯೇ .ತಿಭಾಸಿಕರಜತ, ಪ್ರಾತಿಭಾಸಿಕಸರ್ಪ , ಪ್ರಾತಿಭಾಸಿಕಜಲ – ಮುಂತಾದ ಪದಾರ್ಥಗಳು ತೋರಿಕೆಯ ಕಾಲಕ್ಕೆ ಹುಟ್ಟಿರುವವೆಂದೂ ಅವಕ್ಕೆ 'ಅವಿದ್ಯೆ'ಯೇ ಉಪಾದಾನಕಾರಣವೆಂದೂ ಕಲ್ಪಿಸಿಕೊಂಡು ಜಿಜ್ಞಾಸುಗಳ ಮನಸ್ಸಿನಲ್ಲಿ ಇಲ್ಲದ ಗಲಿಬಿಲಿಯನ್ನುಂಟುಮಡುತ್ತಿರುವದರಿಂದ ಇಲ್ಲಿ ಪ್ರಾಸಂಗಿಕವಾಗಿ ಅವರ ವಾದವು ಶ್ರುತಿಭಾಷ್ಯಯುಕ್ತ್ಯನುಭವಗಳಿಗೆ ವಿರುದ್ಧವೆಂಬುದನ್ನು ಹೇಳಬೇಕಾಗಿ ಬಂತು. ಇರಲಿ . ಪ್ರಕೃತದಲ್ಲಿ ಭಾಷ್ಯಕಾರರು ವಿಚಾರಮಾಡಿ ಸ್ವಪ್ನಶ್ರುತಿಯ ವಿಷಯಕ್ಕೆ ಕೊಟ್ಟಿರುವ ತೀರ್ಪನ್ನು ಇಲ್ಲಿ ಮನದಂದುಕೊಳ್ಳುವದರಿಂದ ಲಾಭವಿದೆ. ಅವರು ಹೇಳುವದೇನೆಂದರೆ :

**'ತಸ್ಮಾತ್ ರಥಾದ್ಯಭಾವವಚನಂ ಶ್ರುತ್ಯಾ ರಥಾದಿಸೃಷ್ಟಿವಚನಂ ತು ಭಕ್ತ್ಯಾ ಇತಿ ವ್ಯಾಖ್ಯೇಯಮ್ ।'**

ಆದ್ದರಿಂದ ಗಾಡಿ ಮುಂತಾದವುಗಳಿಲ್ಲವೆಂಬುದರಲ್ಲಿಯೇ ಶ್ರುತಿಯ ವಾಕ್ಯಕ್ಕೆ ತಾತ್ಪರ್ಯವು. ಜೀವನು ಸೃಷ್ಟಿಮಾಡಿಕೊಳ್ಳುತ್ತಾನೆಂಬುದು ಗೌಣ ಎಂದು ವ್ಯಾಖ್ಯಾನಮಾಡಿಕೊಳ್ಳಬೇಕು – ಎಂಬುದು ಭಾಷ್ಯಕಾರರ ಅಭಿಪ್ರಾಯ.

ಪ್ರಕೃತ ಶ್ರುತಿವಾಕ್ಯಕ್ಕೆ ಮುಖ್ಯವಾಗಿ ಏತರಲ್ಲಿ ತಾತ್ಪರ್ಯವಿದೆ ಎಂಬುದನ್ನು ವಾಕ್ಯಶೇಷದಿಂದ ತಿಳಿದುಕೊಳ್ಳಬೇಕಾಗಿರುತ್ತದೆ. ಜಾಗ್ರದವಸ್ಥೆಯ ಅನುಭವದ ವಾಸನಾರೂಪವಾದ ಅಂಶವನ್ನು ತೆಗೆದುಕೊಂಡು ಕನಸಿನಲ್ಲಿ ಆ ತನ್ನ ಭಾವದಿಂದ ಅಲ್ಲಿ

ಬೆಳಗುತ್ತಿರುತ್ತಾನೆ. ಅದೇ ಇಲ್ಲಿ ತೋರಿಕೆಯ ಪ್ರಪಂಚರೂಪದಲ್ಲಿ ಬೆಳಗುತ್ತಿರುವದು ; ಅದನ್ನು ಶ್ರುತಿಯಲ್ಲಿ 'ಸ್ವೇನ ಭಾಸಾ' ಎಂದಿದೆ. ಅದನ್ನು ಅರಿಯುವದೇ ಆತ್ಮನ ಚೈತನ್ಯರೂಪವಾದ ವಿಷಯಿಯು. ಇದನ್ನೇ ಶ್ರುತಿಯಲ್ಲಿ 'ಸ್ವೇನಜ್ಯೋತಿಷಾ' ಎಂದಿದೆ. ಭಾಷ್ಯಕಾರರೂ **'ಸ್ವೇನ ಚ ಜ್ಯೋತಿಷಾ ತದ್ವಿಷಯಿಣಾ ವಿವಿಕ್ತರೂಪೇಣ ಅಲುಪ್ತದೃಕ್ಸ್ವಭಾವೇನ ತದ್ಭಾರೂಪಂ ವಾಸನಾತ್ಮಕಂ ವಿಷಯೀಕುರ್ವನ್ ಪ್ರಸ್ವಪಿತಿ'** ವಾಸನಾತ್ಮಕವಾದ ಆ ಭಾರೂಪವನ್ನು ತನ್ನ ನಾಶವಿಲ್ಲದ ದೃಕ್ಸ್ವಭಾವದ ಜ್ಯೋತಿಯಿಂದ ವಿಷಯೀಕರಿಸುತ್ತಾ ಕನಸು ಕಾಣುತ್ತಿರುತ್ತಾನೆ – ಎಂದು ವಿವರಿಸಿರುತ್ತಾರೆ. 'ಈ ಅವಸ್ಥೆಯಲ್ಲಿ ಈ ಆತ್ಮನು ಸ್ವಯಂಜ್ಯೋತಿಯಾಗಿರುತ್ತಾನೆ ' ಎಂದು ಶ್ರುತಿಯು ತನ್ನ ಅಭಿಪ್ರಾಯವನ್ನು ಸ್ಪಷ್ಟವಾಗಿ ಹೇಳಿ ಮುಗಿಸಿರುತ್ತದೆ. ಎಚ್ಚರದವಸ್ಥೆಯಲ್ಲಿ ಹೇಗೆ ನಮ್ಮ ವ್ಯವಹಾರವೆಲ್ಲವೂ ಆತ್ಮಜ್ಯೋತಿಯ ನೆರವಿನಿಂದಲೇ ಸಾಗುತ್ತಿರುವದೋ ಹಾಗೆಯೇ ಇಲ್ಲಿಯೂ ಸಾಗುತ್ತಿರುತ್ತದೆ . ಆದರೆ ಆತ್ಮಜ್ಯೋತಿಯಿಂದ ವ್ಯವಹಾರವೆಲ್ಲ ಸಾಗುವದೆಂಬುದು ಕನಸಿನಲ್ಲಿ ಸ್ಪಷ್ಟವಾಗಿ ಅನುಭವಕ್ಕೆ ಬರುತ್ತದೆ. ಏಕೆಂದರೆ ಅಲ್ಲಿ ಹೊರಗಿನ ಸೂರ್ಯಚಂದ್ರಾದಿಗಳ ಬೆಳಕೂ ಇಲ್ಲ , ಎಚ್ಚರದಲ್ಲಿದ್ದ ಇಂದ್ರಿಯಗಳ ಬೆಳಕು ಕೂಡ ಅಲ್ಲಿರುವದಿಲ್ಲ ತೋರುವ ಪ್ರಪಂಚವೆಲ್ಲವೂ ವಾಸನಾತ್ಮಕವಾಗಿ ವಿಷಯವಾಗಿಬಿಟ್ಟಿರುತ್ತದೆ ; ಅದನ್ನು ಅನುಭವಿಸುವ ನಮ್ಮ ಆತ್ಮಸ್ವರೂಪವು ವಿಷಯವಾದ ಪ್ರಪಂಚಕ್ಕಿಂತ ಬೇರೆಯಾಗಿದ್ದುಕೊಂಡು ಅದನ್ನು ತನ್ನ ಜ್ಯೋತಿಯಿಂದಲೇ ಬೆಳಗುತ್ತಿರುತ್ತದೆ . ಈ ಅನುಭವವನ್ನು ನಾವು ಮತ್ತೆ ಮತ್ತೆ ಮನಸ್ಸಿಗೆ ತಂದುಕೊಳ್ಳುತ್ತಿರಬೇಕು . ಎಚ್ಚರದಿಂದ ಕನಸಿನಲ್ಲಿ ಮುಳುಗಿಮುಳುಗಿ ಮತ್ತೆಮತ್ತೆ ಎಚ್ಚರಕ್ಕೆ ಬಂದಂತೆ ಕಲ್ಪಿಸಿಕೊಂಡು ಆ ಎರಡವಸ್ಥೆಗಳ ಅನುಭವಗಳನ್ನು ಹೋಲಿಸಿ ನೋಡಿದರೆ ನಾವು ಶಾರೀರರಲ್ಲ , ಜೀವರೂ ಅಲ್ಲ , ಸ್ವಪ್ನಜಾಗರಿತಗಳೆರಡಕ್ಕೂ ಹೊರಚ್ಚಾಗಿರುವ ಚಿನ್ಮಾತ್ರಜ್ಯೋತೀರೂಪರು ಎಂಬುದು ಮನದಟ್ಟಾಗುವದು. ಕಾಠಕಶ್ರುತಿಯಲ್ಲಿ ಇದೇ ಅರ್ಥವನ್ನು

**ಸ್ವಪ್ನಾನ್ತಂ ಜಾಗರಿತಾನ್ತಂ ಚೋಭೌ ಯೇನಾನುಪಶ್ಯತಿ ।**
**ಮಹಾನ್ತಂ ವಿಭುಮಾತ್ಮಾನಂ ಮತ್ವಾ ಧೀರೋ ನ ಶೋಚತಿ ॥**

ಕಾ. ೨-೧-೪

'ಸ್ವಪ್ನ , ಜಾಗರಿತ – ಈ ಎರಡವಸ್ಥೆಗಳನ್ನೂ ಯಾವ ಚೈತನ್ಯರೂಪದಿಂದ ಕಾಣುತ್ತಿರುವನೋ ಅವನೇ ಮಹಾವಿಭುವಾದ ಆತ್ಮನಾದ ನಾನು' ಎಂದು ಅರಿತುಕೊಂಡ ವಿವೇಕಿಯು ಶೋಕಿಸುವದಿಲ್ಲ – ಎಂದು ಹೇಳಿದೆ. ಈ ಎರಡೂ ಅವಸ್ಥೆಗಳಲ್ಲಿ

ಸೇರದೆಯೇ ಇವುಗಳನ್ನು ಬೆಳಗುತ್ತಿರುವ ಅನುಭವಸ್ವರೂಪವು ನಮ್ಮದು . ಈ ಅನುಭವವನ್ನು ಚೆನ್ನಾಗಿ ಅಳವಡಿಸಿಕೊಂಡಮಾತ್ರದಿಂದ ನಮಗೆ ಅನಾತ್ಮವನ್ನು ಹೊರುವ ಭಾರವನ್ನು ಇಳಿಸಿಕೊಂಡಂತೆ ಆಗುವದು .

ಈಗ ಇನ್ನೊಂದು ವಿಷಯವನ್ನು ಮನಸ್ಸಿಗೆ ತಂದುಕೊಳ್ಳಬೇಕಾಗಿದೆ. ಎಚ್ಚರದಿಂದ ಕನಸಿಗೆ ಹೋದಾಗ ಮೃತ್ಯುರೂಪಗಳಾದ ಶರೀರೇಂದ್ರಿಯಗಳ ಹಂಗನ್ನು ಬಿಟ್ಟಿರುತ್ತಾನಾದರೂ ಅಲ್ಲಿ ಸುಖದುಃಖಾದಿಗಳನ್ನು ಅನುಭವಿಸುತ್ತಲೇ ಇರುತ್ತಾನಷ್ಟೆ ? ಆ ಸುಖದುಃಖಭಯಾದಿಗಳು ಆತ್ಮನ ಸ್ವಭಾವವಲ್ಲವೆನ್ನುವದು ಹೇಗಾದೀತು ? ಹೊರಗಿನ ವಿಷಯಗಳು ಇರಲಿ , ಇಲ್ಲದಿರಲಿ ; ಹಿಗ್ಗುವದು , ಕುಗ್ಗುವದು , ಅಂಜುವದು - ಮುಂತಾದ ಧರ್ಮಗಳನ್ನಂತೂ ಅನುಭವಿಸಿಯೇತೀರಬೇಕಷ್ಟೇ ? - ಎಂದು ಯಾರಿಗಾದರೂ ಶಂಕೆಯುಂಟಾಗಬಹುದು. ಸ್ವಪ್ನಜಾಗರಿತಗಳ ಅನುಭವವು ಮತ್ತೆಮತ್ತೆ ಆಗುವದೆಂಬುದನ್ನು ಮನದಂದರೆ ಈ ಶಂಕೆಗೂ ಪರಿಹಾರವು ದೊರೆತಂತೆ ಆಗುತ್ತದೆ. ಹೇಗೆಂದರೆ :

**ಸ ವಾ ಏಷ ಏತಸ್ಮಿನ್ ಸ್ವಪ್ನೇ ರತ್ವಾ ಚರಿತ್ವಾ ದೃಷ್ಟ್ವೈವ ಪುಣ್ಯಂ ಚ ಪಾಪಂ ಚ ಪುನಃ ಪ್ರತಿನ್ಯಾಯಂ ಪ್ರತಿಯೋನ್ಯಾದ್ರವತಿ ಬುದ್ಧಾಂತಾಯೈವ ಸ ಯತ್ತತ್ರ ಕಿಞ್ಚಿತ್ ಪಶ್ಯತ್ಯನನ್ವಾಗತಸ್ತೇನ ಭವತ್ಯಸಂಗೋ ಹ್ಯಯಂ ಪುರುಷ ಇತಿ ॥**

**ಸ ವಾ ಏಷ ಏತಸ್ಮಿನ್ ಬುದ್ಧಾಂತೇ ರತ್ವಾ ಚರಿತ್ವಾ ದೃಷ್ಟ್ವೈವ ಪುಣ್ಯಂ ಚ ಪಾಪಂ ಚ ಪುನಃ ಪ್ರತಿನ್ಯಾಯಂ ಪ್ರತಿಯೋನ್ಯಾದ್ರವತಿ ಸ್ವಪ್ನಾಂತಾಯೈವ ॥**

ಬೃ. ೪-೩-೧೬, ೧೭

ಈ ಆತ್ಮನು ಕನಸಿನಲ್ಲಿ ಸುಖದುಃಖಗಳನ್ನು ಅನುಭವಿಸುತ್ತಲೂ ಇಷ್ಟರು , ಮಿತ್ರರು , ಶತ್ರುಗಳು - ಮುಂತಾದವರೊಡನೆ ವ್ಯವಹಾರವನ್ನು ಮಾಡುತ್ತಲೂ ಇರುವಂತೆ ತೋರುತ್ತಿದ್ದರೂ ಮತ್ತೆ ಎಚ್ಚರದವಸ್ಥೆಗೇ ಹಿಂತೆರಳುತ್ತಾನೆ ; ಇದರಂತೆ ಎಚ್ಚರದಲ್ಲಿಯೂ ವ್ಯವಹರಿಸುವಂತಿದ್ದು ಆಯಾ ಕಾರಣದಿಂದ ಸುಖದುಃಖಗಳನ್ನು ಅನುಭವಿಸಿ ಮತ್ತೊಮ್ಮೆ ಕನಸಿಗೆ ಬರುತ್ತಾನೆ. ಹೀಗೆ ಎಚ್ಚರದಲ್ಲಿಯೂ ಕನಸಿನಲ್ಲಿಯೂ ಪುಣ್ಯಪಾಪಗಳನ್ನು ಸುಮ್ಮನೆ ನೋಡುತ್ತಿದ್ದು ಮತ್ತೊಂದು ಅವಸ್ಥೆಗೆ ಹೋಗಿ ಬಿಡುವದರಿಂದ ಆ ಅವಸ್ಥೆಗಳಲ್ಲಿ ತನಗೆ ಸಂಬಂಧಿಸಿದಂತೆ ಕಾಣುವ ಪುಣ್ಯಪಾಪಗಳಾಗಲೀ, ಸುಖದುಃಖಗಳಾಗಲೀ ಇವನಿಗೆ ತಟ್ಟುವಂತೆಯೇ ಇಲ್ಲ. ಇವನು ಅಸಂಗನಾಗಿಯೇ ಇರುತ್ತಾನೆ. ಆದ್ದರಿಂದ ಈ ಆತ್ಮನಿಗೆ ಕರ್ಮಗಳಾಗಲಿ

ಅವುಗಳ ಫಲವನ್ನು ಅಭವಿಸುವದರಿಂದಾಗುವ ಸುಖದುಃಖಾದಿಗಳಾಗಲಿ ಸ್ವಭಾವವಲ್ಲವೆಂದೇ ಆಯಿತು.

ಶ್ರುತಿಯಲ್ಲಿ ಜೀವನು ಜಾಗ್ರದವಸ್ಥೆಯಲ್ಲಿ ಕೂಡ ಪುಣ್ಯಪಾಪಗಳನ್ನು ಮಾಡುವದಿಲ್ಲವೆಂದೂ ಅವುಗಳ ಫಲಭೋಗವಾಗಲಿ ಸುಖಾದಿಗಳಾಗಲಿ ಅವನಿಗೆ ಅಂಟುವದೇ ಇಲ್ಲವೆಂದೂ 'ದೃಷ್ಟ್ವೈವ - ಸುಮ್ಮನೆ ನೋಡಿ' ಎಂಬ ಮಾತಿನಿಂದ ಹೇಳಿರುವದನ್ನು ಲಕ್ಷಿಸಬೇಕು ಎಚ್ಚರದಲ್ಲಿ ಮೃತ್ಯುವಿನ ರೂಪಗಳಾದ ಕಾರ್ಯಕರಣಗಳಿರುವವೆಂದೂ ಸ್ವಪ್ನಕ್ಕೆ ಹೋದಾಗ ಅವನು ದಾಟಿರುವನೆಂದೂ ಮೊದಲು ಹೇಳಿದ್ದರಿಂದ ಎಚ್ಚರದಲ್ಲಿ ಇವನು ಪುಣ್ಯಪಾಪಗಳಿಗೆ ಕರ್ತೃವೇ ಎಂದು ಹೇಳಿದಂತೆ ಆಗಿತ್ತು ಆದರೆ ಈಗ ಎಚ್ಚರದಲ್ಲಿಯೂ ಪುಣ್ಯಪಾಪಗಳನ್ನು ನೋಡುತ್ತಿರುವನೇ ಹೊರತು ಮಾಡುವದಿಲ್ಲ' ಎಂದು ದೃಷ್ಟ್ವೈವ (ಸುಮ್ಮನೆ ನೋಡಿಯೇ) ಎಂಬ ಮಾತಿನಿಂದ ಹೇಳಿರುತ್ತದೆ ಇದು ಒಂದಕ್ಕೊಂದು ವಿರುದ್ಧವಾಗಲಿಲ್ಲವೆ ? – ಎಂದರೆ ಇದಕ್ಕೆ ಸಮಾಧಾನವನ್ನು ಶಂಕರಭಗವತ್ಪಾದರವರು ಹೀಗೆ ಹೇಳಿರುತಾರೆ :

> **'ಆತ್ಮನೈವಾಯಂ ಜ್ಯೋತಿಷಾಽಽಸ್ತೇ' ಇತ್ಯಾದಿನಾ ಆತ್ಮಜ್ಯೋತಿಷಾ ಅವಭಾಸಿತಃ ಕಾರ್ಯಕರಣಸಙ್ಘಾತೋ ವ್ಯವಹರತಿ । ತೇನ ಅಸ್ಯ ಕರ್ತೃತ್ವಮುಪಚರ್ಯತೇ, ನ ಸ್ವತಃ ಕರ್ತೃತ್ವಮ್ । ತಥಾ ಚೋಕ್ತಂ 'ಧ್ಯಾಯತೀವ ಲೇಲಾಯತೀವ' ಇತಿ ಬುದ್ಧ್ಯಾದ್ಯುಪಾಧಿಕೃತಮೇವ ನ ಸ್ವತಃ। ಇಹ ತು ಪರಮಾರ್ಥಾಪೇಕ್ಷಯಾ ಉಪಾಧಿನಿರಪೇಕ್ಷ ಉಚ್ಯತೇ ದೃಷ್ಟ್ವೈವ ಪುಣ್ಯಂ ಚ ಪಾಪಂ ಚ ನ ಕೃತ್ವಾ ಇತಿ । ತೇನ ನ ಪೂರ್ವಾಪರ ವ್ಯಾಘಾತಾಶಙ್ಕಾ ॥**

'ಆತ್ಮನೆಂಬ ಬೆಳಕಿನಿಂದಲೇ ಈ ಪುರುಷನು ಕುಳ್ಳಿರುತ್ತಾನೆ 'ಎಂದು ಮುಂತಾಗಿ ಹೇಳಿದ್ದರಲ್ಲಿ ಆತ್ಮಜ್ಯೋತಿಯಿಂದ ಬೆಳಗುವ ಕಾರ್ಯಕರಣಸಂಘಾತವು ವ್ಯವಹರಿಸುತ್ತಿರುತ್ತದೆ ಎಂದು ಹೇಳಿತ್ತು . ಆದ್ದರಿಂದ ಕಾರ್ಯಕರಣಗಳ ಕರ್ತೃತ್ವವನ್ನೇ ಆತ್ಮನದೆಂದು ಉಪಚಾರಕ್ಕಾಗಿ ಹೇಳಿತ್ತು . ಆದ್ದರಿಂದಲೇ 'ಧ್ಯಾನಮಾಡುತ್ತಿರುವವನಂತೆ, ಚಲಿಸುತ್ತಿರುವವನಂತೆ ' ಕಾಣುತ್ತಾನೆ ಎಂದು ಹೇಳಿದ್ದು . ಅದರಿಂದ ಬುದ್ಧಿಯೇ ಮುಂತಾದ ಉಪಾಧಿಗಳಿಂದಲೇ ಇವನಲ್ಲಿ ಕರ್ತೃತ್ವವು ಕಾಣುತ್ತದೆ . ಸ್ವತಃ ಕೃರ್ತತ್ವವಿಲ್ಲ ಎಂದು ಹೇಳಿದಂತೆಯೇ ಆಯಿತು . ಈಗ ಪರಮಾರ್ಥದೃಷ್ಟಿಯಿಂದ ನೋಡಿದರೆ ಎಂದರೆ ಉಪಾಧಿಗಳಹಂಗನ್ನು ಬಿಟ್ಟು ನೋಡಿದರೆ ಇವನು ಪುಣ್ಯಪಾಪಗಳನ್ನು

ಮಾಡುವದೇ ಇಲ್ಲ ; ಅದನ್ನು ನೋಡುತ್ತಲೇ ಇರುತ್ತಾನೆ ಎಂದಿದೆ ಆದ್ದರಿಂದ ಒಂದಕ್ಕೊಂದು ವಿರುದ್ಧವಲ್ಲ - ಎಂಬುದು ಭಾಷ್ಯದ ಅಭಿಪ್ರಾಯ .

ಈ ದೃಷ್ಟಿಯಿಂದ ನೋಡಿದರೆ ನಮಗೆ ಅವಿದ್ಯಾಕೃತವಾದ ಕಾರ್ಯಕರಣಗಳ ಸಂಬಂಧದಿಂದಲೇ ಕರ್ತೃತ್ವವೂ ಭೋಕ್ತೃತ್ವವೂ ಗಂಟುಬಿದ್ದಿರುವಂತೆ ತೋರುತ್ತಿರುತ್ತದೆ ; ನಿಜವಾಗಿ ನಮ್ಮ ಸ್ವರೂಪದಲ್ಲಿ ಯಾವ ಪುಣ್ಯಪಾಪಗಳ ಸೋಂಕೂ ಇರುವದೇ ಇಲ್ಲ. ಕನಸಿನಲ್ಲಿಯೂ ಎಚ್ಚರದಂತೆಯೇ ನಮಗೆ ಶರೀರಾದಿಗಳಿರುವಂತೆಯೂ ಅಲ್ಲಿಯೂ ನಾವು ಎಚ್ಚರದಂತೆ ಒಂದು ಪ್ರಪಂಚವನ್ನು ನೋಡುತ್ತಾ , ಪಾಪಪುಣ್ಯಗಳನ್ನು ಮಾಡುತ್ತಾ , ಸುಖದುಃಖಗಳನ್ನನುಭವಿಸುವಂತೆ ತೋರುತ್ತಿದ್ದರೂ ಎಚ್ಚರವಾಗುತ್ತಲೂ ಅದೆಲ್ಲ ಬಾಧಿತವಾಗಿ ಹುಸಿಯೇ ಆಗಿಬಿಡುತ್ತದೆ. ಒಂದವಸ್ಥೆಯ ದೃಶ್ಯಗಳು ಮತ್ತೊಂದರಲ್ಲಿರುವದಿಲ್ಲ . ಆದ್ದರಿಂದ ನಮ್ಮ ನಿಜವಾದ ಸ್ವರೂಪದಲ್ಲಿ ಶರೀರತ್ವವಾಗಲಿ ಜೀವತ್ವವಾಗಲಿ ಇರುವದೇಇಲ್ಲ - ಎಂದಾಯಿತು.

## ೧೧. ಅವಿದ್ಯಾಕಾಮಕರ್ಮರಹಿತನಾದ ಆತ್ಮ

(16-8-64)

ಈ ಶರೀರದಲ್ಲಿ ನಮಗೆ ಎರಡು ಆತ್ಮರೂಪಗಳು ಕಾಣಬರುತ್ತಿರುತ್ತವೆ. ಕರ್ತೃತ್ವಭೋಕ್ತೃತ್ವಗಳಿಂದ ಕೂಡಿರುವ **ಶಾರೀರ** ಅಥವಾ **ಜೀವ** - ಎಂಬ ರೂಪವೊಂದು; ಯಾವ ಕರ್ಮದ ಸಂಬಧವೂ ಇಲ್ಲದ ಅಸಂಗನಾಗಿ ಸಾಕ್ಷಿಯಾಗಿರುವ ರೂಪವೊಂದು. ಇದನ್ನು ಶ್ರುತಿಯಲ್ಲಿ ಹೀಗೆಂದು ವರ್ಣಿಸಿರುತ್ತದೆ :

**ದ್ವಾ ಸುಪರ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷಂ ಪರಿಷಸ್ವಜಾತೇ ।**
**ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತಿ ಅನಶ್ನನ್ನನ್ಯೋಽಭಿಚಾಕಶೀತಿ ॥**

**ಸಮಾನೇ ವೃಕ್ಷೇ ಪುರುಷೋ ನಿಮಗ್ನೋಽನೀಶಯಾ ಶೋಚತಿ ಮುಹ್ಯಮಾನಃ । ಜುಷ್ಟಂ ಯದಾ ಪಶ್ಯತ್ಯನ್ಯಮೀಶಮಸ್ಯ ಮಹಿಮಾನಮಿತಿ ವೀತಶೋಕಃ ॥** ಮುಂ. ೩-೧-೧,೨.

"ಎರಡು ಹಕ್ಕಿಗಳು ಜೊತೆಯಲ್ಲಿಯೇ ಇದ್ದು, ಸಖರಾಗಿದ್ದುಕೊಂಡು ಒಂದೇ ವೃಕ್ಷವನ್ನು ಅಪಿಕೊಂಡಿವೆ . ಅವುಗಳೊಳಗೆ ಒಂದು ಹಣ್ಣನ್ನು ಸವಿಯುತ್ತಿರುತ್ತದೆ ; ಇನ್ನೊಂದು ತಿನ್ನದೆ ನೋಡುತ್ತಲೇ ಇರುತ್ತದೆ . ಒಂದೇ ಮರದಲ್ಲಿ ಮುಳುಗಿರುವ

ಜೀವನು ಅಶಕ್ತಿಯಿಂದ ಮೋಹಿತನಾಗಿ ಶೋಕಿಸುತ್ತಿರುವನು ಸೇವನೆಮಾಡಿ ಮತ್ತೊಬ್ಬನಾದ ಈಶನನ್ನು ಯಾವಾಗ ಕಂಡುಕೊಳ್ಳುವನೋ ಆಗ ಈತನ ಮಹಿಮೆಯೇ ಎಂದು ಶೋಕರಹಿತನಾಗುವನು.''

ಇಲ್ಲಿ ಜೀವ, ಈಶ್ವರ – ಎಂಬ ಇಬ್ಬರನ್ನು ಪಕ್ಷಿಗಳ ರೂಪಕದಿಂದ ವರ್ಣಿಸಿದೆ ಎಂದೂ ಈಶ್ವರಸಾಕ್ಷಾತ್ಕಾರದಿಂದ ಜೀವನಿಗೆ ಶೋಕವು ಹೋಗುವದೆಂದು ಉಪದೇಶಿಸಿದೆಯೆಂದೂ ದ್ವೈತಿವೇದಾಂತಿಗಳು ನಂಬಿರುತ್ತಾರೆ. ಎರಡನೆಯ ಮಂತ್ರದ ಅಕ್ಷರಾರ್ಥವನ್ನು ಹಿಡಿದು ನೋಡಿದರೆ ಹಾಗೆಂದೇ ಕಾಣಿಸುತ್ತಿದೆ . ಮತ್ತು ಸಾಮಾನ್ಯಜನರ ಬುದ್ಧಿಯಿಂದ ನೋಡುವಾಗ ಈ ಅರ್ಥವೇ ಸರಿಯೆಂದೇ ತೋರುತ್ತದೆ ಏಕೆಂದರೆ ನಾವೇ ಪರಮಾತ್ಮಸ್ವರೂಪರು ಎಂಬುದು ಯಾರಿಗೂ ಒಪಾಗಲಾರದು , ನಮಗಿಂತ ಬೇರೆಯಾಗಿರುವ ಈಶ್ವರನ ಉಪಾಸನೆಯನು ಮಾಡಿದರೆ ಆತನ ಅನುಗ್ರಹದಿಂದ ನಮಗೆ ಶೋಕಾದಿಗಳ ಪರಿಹಾರವಾಗಬಹುದು ಎಂಬುದೂ ವಿಶ್ವಾಸಕ್ಕೆ ಅರ್ಹವಾಗಿ ತೋರುತ್ತದೆ .

ಆದರೆ ಶ್ರುತಿಯು ನಿರ್ವಿಶೇಷವಾದ 'ಅಕ್ಷರ'ವೆಂಬ ಹೆಸರಿನ ಬ್ರಹ್ಮವನ್ನು ತಿಳಿಸುವ ಪರವಿದ್ಯೆಯನ್ನು ಹೇಳುವದಕ್ಕೆ ಪ್ರಾರಂಭಿಸಿ ನಮಗೆ ಕಾಣಿಸುತ್ತಿರುವದೆಲ್ಲವೂ ಬ್ರಹ್ಮವೇ ಎಂದು ಹೇಳಿದಬಳಿಕ ಈ ಸುಪರ್ಣವಾಕ್ಯವನ್ನು ನಮ್ಮ ಮುಂದೆ ಇಟ್ಟಿರುತ್ತದೆ. ಒಂದೇ ಶರೀರದಲ್ಲಿ ನಮಗೆ ಇಬ್ಬರು ಆತ್ಮರು ಇರುತ್ತಾರೆಂದು ಹೇಳುವದು ಯುಕ್ತಿಗೂ ಸರಿಯಾಗುವದಿಲ್ಲ . ಆದ್ದರಿಂದ ನಮ್ಮ ಅನುಭವದಲ್ಲಿರುವ ವಿಕಾರಿಸ್ವರೂಪವನ್ನು ಅನುವಾದಮಾಡಿಕೊಂಡು ಅದರ ಅವಿಕಾರಿಯಾದ ಬ್ರಹ್ಮಸ್ವರೂವನ್ನು ತಿಳಿಸುವದಕ್ಕೆ ಈ ವಾಕ್ಯವು ಬಂದಿದೆ ಎಂದು ಹೇಳುವದು ಪ್ರಕರಣಕ್ಕೂ ವಾಕ್ಯದ ಅಭಿಪ್ರಾಯಕ್ಕೂ ಹೊಂದುಗಡೆಯಾಗುತ್ತದೆ . ನಮಗೆ ಶರೀರಾದಿಗಳುಂಟೆಂದೂ ನಾವು ಕರ್ತೃಭೋಕ್ತೃ ಸ್ವರೂಪರೆಂದೂ ಲೋಕಾನುಭವದಿಂದಲೇ ನಮಗೆ ಗೊತ್ತಿರುತ್ತದೆ . ಆದ್ದರಿಂದ ಅವಿದ್ಯಾಕಾಮಕರ್ಮರೂಪವಾದ ಮೃತ್ಯುವಿಗೆ ನಾವು ಸಿಕ್ಕಿಕೊಂಡು ನರಳುತ್ತಿದೇವೆಂಬುದನ್ನು ತಿಳಿಸಿ ಆ ಬಳಿಕ ನಮ್ಮ ನಿಜವಾದ ನಿರ್ವಿಕಾರವಾದ ಆತ್ಮಸ್ವರೂಪವನ್ನು ಹೇಳುವದಕ್ಕೆ ಈ ಶ್ರುತಿಯು ಬಂದಿದೆಯೆಂಬುದೇ ಸ್ವಾಭಾವಿಕವಾದ ಅರ್ಥವೆಂದು ತಿಳಿಯಬೇಕು .

ಶರೀರವು ಬಾಲ್ಯ , ಯೌವನ – ಮುಂತಾದ ಅವಸ್ಥಾಭೇದಗಳನ್ನು ಪಡೆಯುತಿದ್ದರೂ ಅದನ್ನೇ ನಾನು ಎಂದು ತಿಳಿಯುತಿರುವದು ನಮಗೆಲ್ಲ ಸ್ವಾಭಾವಿಕವಾಗಿಬಿಟ್ಟಿರುತ್ತದೆ . 'ಅನಿತ್ಯಾಶುಚಿದುಃಖಾನಾತ್ಮಸು ನಿತ್ಯಶುಚಿಸುಖಾತ್ಮ

ಖ್ಯಾತಿರವಿದ್ಯಾ' (ಯೋ. ಸೂ ೨-೫) ಎಂದಿರುವಂತೆ ಅನಿತ್ಯವಾಗಿ ಅಶುಚಿಯಾಗಿ, ದುಃಖರೂಪವಾಗಿ ಇರುವ ಅನಾತ್ಮವಸ್ತುವಿನಲ್ಲಿ ಇದು ನಿತ್ಯವು , ಶುಚಿಯು, ಸುಖವು, ಆತ್ಮನು ಎಂದರೆ ನಾನೇ - ಎಂಬ ಬುದ್ಧಿಯು ನಮಗೆ ಯಾರೂ ಹೇಳಿಕೊಡದಿದ್ದರೂ ಬಂದುಬಿಟ್ಟಿರುತ್ತದೆ. ಇದರಲ್ಲಿರುವ ಅಭಿಮಾನದಿಂದಲೇ ನಮಗೆ ಶಾರೀರಾತ್ಮನೆಂಬ ಹೆಸರು ಬಂದಿದೆ. ಆದರೆ ಈಗಾಗಲೆ ನಾವು ವಿಚಾರಮಾಡಿ ನಿಶ್ಚಯಿಸಿರುವಂತೆ ಎಚ್ಚರದಲ್ಲಿರುವ ಈ ನಮ್ಮ ರೂಪವು ನಮ್ಮ ಕನಸಿನಲ್ಲಿರುವದಿಲ್ಲ ; ಆ ಕನಸಿನಲ್ಲಿ ತೋರುವ ನಮ್ಮ ರೂಪವು ಈಗಿರುವದಿಲ್ಲ. ಆದರೆ ಈ ಎರಡವಸ್ಥೆಗಳನ್ನೂ ನಾವೇ ಒಂದಾಗುತ್ತಲೊಂದನ್ನು ಪಡೆಯುತ್ತಿರುವಂತೆ ತೋರುತ್ತಿರುವದರಿಂದ ನಾವು ಅಸಂಗಸ್ವರೂಪರೇ, ಅಶರೀರರೇ , ಅವಸ್ಥೆಗಳಲ್ಲಿ ನಾವು ಕಾಣುತ್ತಿರುವ ಪುಣ್ಯಪಾಪಗಳು ನಮ್ಮ ಸ್ವರೂಪಕ್ಕೆ ನಿಜವಾಗಿ ಅಂಟಿಕೊಂಡಿಲ್ಲ ಎಂದು ನಿಶ್ಚಯವಾಗುತ್ತದೆ. ನಮ್ಮ ಆತ್ಮನು ಇವೆರಡಕ್ಕಿಂತ ಬೇರೆಯಾಗಿರುತ್ತಾನೆ, ಇವೆರಡಕ್ಕೂ ಸಾಕ್ಷಿಯಾಗಿರುತ್ತಾನೆ ; ಅವನಿಗೆ ಸಾಕ್ಷ್ಯವಾದ ಅವಸ್ಥೆಗಳ ಸೋಂಕು ಇಲ್ಲವೇ ಇಲ್ಲ ಎಂದು ಅನುಭವಾನುಸಾರವಾಗಿಯೇ ವಿವೇಕಿಯಾದವನು ನಿಶ್ಚಯಿಸಿಕೊಳ್ಳಬಹುದಾಗಿರುತ್ತದೆ.

ಸರಿಯಾಗಿ ನೋಡಿದರೆ ಕನಸಿನ ಅವಸ್ಥೆಯನ್ನು ಪರೀಕ್ಷಿಸದೆಯೇ ಎಚ್ಚರವೆಂದು ನಾವು ಕರೆಯುತ್ತಿರುವ ಈ ಅವಸ್ಥೆಯಲ್ಲಿರುವ ಸಾಕ್ಷಿರೂಪವನ್ನು ಸರಿಯಾಗಿ ಪರೀಕ್ಷೆ ಮಾಡಿಕೊಂಡರೂ ನಮ್ಮ ಆತ್ಮನ ನಿತ್ಯಶುದ್ಧಬುದ್ಧಮುಕ್ತಸ್ವರೂಪವು ಅನುಭವಕ್ಕೆ ಬರುವಂತಿದೆ. ಹೇಗೆಂದರೆ ಭಗವದ್ಗೀತೆಯಲ್ಲಿ ಹೇಳಿರುವಂತೆ

**ಅವಿನಾಶಿ ತು ತದ್ವಿದ್ಧಿ ಯೇನ ಸರ್ವಮಿದಂ ತತಮ್ ।**
**ವಿನಾಶಮವ್ಯಯಸ್ಯಾಸ್ಯ ನ ಕಶ್ಚಿತ್ಕರ್ತುಮರ್ಹತಿ ॥**
**ಅನ್ತವನ್ತ ಇಮೇ ದೇಹಾ ನಿತ್ಯಸ್ಯೋಕ್ತಾಃ ಶರೀರಿಣಃ**
**ಅನಾಶಿನೋಽಪ್ರಮೇಯಸ್ಯ ತಸ್ಮಾದ್ಯುಧ್ಯಸ್ವ ಭಾರತ ॥** ಗೀ. ೨-೧೭, ೧೮

ನಮ್ಮ ಆತ್ಮನು ಸದ್ರೂಪನಾಗಿರುತ್ತಾನೆ, ಏಕೆಂದರೆ ಅವನ ಸ್ವರೂಪವು ಎಂದಿಗೂ ಎಲ್ಲಿಯೂ ಮಾರ್ಪಡುವದಿಲ್ಲ . ಎಲ್ಲವನ್ನೂ ಆತ್ಮಜ್ಯೋತಿಯಿಂದ ಬೆಳಗುತ್ತಿರುವ ಈ ರೂಪದಲ್ಲಿ ಯಾವ ವಿಕಾರವೂ ಕಾಣಬರುವದಿಲ್ಲ; ಯಾವಯಾವ ವಿಕಾರವು ಕಾಣಬರುವದೋ ಅದೆಲ್ಲವೂ ಇವನಿಗೆ ಸಾಕ್ಷ್ಯವೇ ಆಗಿರುತ್ತದೆ . ಇನ್ನು ಈ ಚೈತನ್ಯಕ್ಕೆ ಇಲ್ಲಿಗೆ ಮುಗಿಯಿತೆಂಬ ವಸ್ತುಪರಿಚ್ಛೇದವೂ ಇಲ್ಲ. ಆಕಾಶವು ಹೇಗೆ ಯಾವ ಅಡೆತಡೆಯೂ ಇಲ್ಲದೆ ಎಲ್ಲಾ ಪದಾರ್ಥಗಳನ್ನೂ ವ್ಯಾಪಿಸಿಕೊಂಡೇ ಇರುವದೋ,

ಸರಿಯಾಗಿ ನೋಡಿದರೆ ಹೇಗೆ ಎಲ್ಲವೂ ಆಕಾಶದ ಕಾರ್ಯವೇ ಆಗಿರುವದರಿಂದ ಆಕಾಶವೇ ಆಗಿರುವದೋ ಹಾಗೆಯೇ, ಈ ಆತ್ಮಚೈತನ್ಯವು ಶರೀರೇಂದ್ರಿಯಮನಸ್ಸು ಗಳೆಂಬಿವೆಲ್ಲವನ್ನೂ ವ್ಯಾಪಿಸಿಕೊಂಡೇ ಇರುತ್ತದೆ ; ಏಕೆಂದರೆ ಚೈತನ್ಯದಿಂದ ವ್ಯಾಪ್ತವಾಗದ , ನ್ಯದಿಂದ ಬೆಳಗದೆ ಇರುವದೆಂದು ಕಲ್ಪಿಸಬಹುದಾದ ವಸ್ತುವೇ ಲೋಕದಲ್ಲಿಲ್ಲ . 'ಇದೆ' ಎಂದರೇ ಚೈತನ್ಯದಿಂದ ಬೆಳಗತ್ತಿರುವದು . ಅಲ್ಲವೇ ? ಆದ್ದರಿಂದ ಸರ್ವಗತವಾಗಿ , ತಾನೇತಾನಾಗಿ ಎಲ್ಲೆಲ್ಲಿಯೂ ವ್ಯಾಪಿಸಿರುವ ಈ ಆತ್ಮ ತತ್ತ್ವದ ಸ್ವರೂಪವು ಒಂದಿಷ್ಟೂ ಮಾರ್ಪಡುವಂತಿಲ್ಲ . ಆದ್ದರಿಂದ ಇದು ನಿತ್ಯ ಸದ್ರೂಪವಾಗಿರುತ್ತದೆ . ಇನ್ನು ಶರೀರಾದಿಗಳೊ , ಎಂದರೆ ಲೋಕದೃಷ್ಟಿಯಿಂದ ನೋಡಿದಾಗ ಅವು ಮಾರ್ಪಡುತ್ತಲೂ ಇರುವವು ; ಮೇಲೆ ಹೇಳಿದಂತೆ ಚೈತನ್ಯಕ್ಕೆ ವಿಷಯವಾಗಿಯೇ ಬೆಳಗುತ್ತಿರುವವು , ಚೈತನ್ಯವ್ಯಾಪ್ತವಾಗಿಯೂ ಇರುವದರಿಂದ ಚೈತನ್ಯದೃಷ್ಟಿಯಿಂದ ನೋಡಿದಾಗ ಅವು ಇರುವದೇ ಇಲ್ಲವೆಂದು ಗೊತ್ತಾಗಿಬಿಡುತ್ತದೆ. ಆದ್ದರಿಂದ ಶಂಕರಭಗವತ್ಪಾದರವರು ಹೇಳಿರುವಂತೆ –

> **"ಯಥಾ ಮೃಗತೃಷ್ಣಿಕಾದೌ ಸದ್ಬುದ್ಧಿರನುವೃತ್ತಾ ಪ್ರಮಾಣನಿರೂಪಣಾನ್ತೇ ವಿಚ್ಛಿದ್ಯತೇ ಸ ತಸ್ಯಾನ್ತಃ, ತಥೇಮೇ ದೇಹಾಃ ಸ್ವಪ್ನಮಾಯಾ ದೇಹಾದಿವಚ್ಚಾನ್ತವನ್ತಃ ॥"**

ಹೇಗೆ ಬಿಸಿಲುಕುದುರೆಯ ನೀರು 'ಇದೆ' ಎಂದೇ ತೋರುತ್ತಿದ್ದದ್ದು ಚೆನ್ನಾಗಿ ನಿರುಕಿಸಿ ನೋಡಿದಮೇಲೆ ಇಲ್ಲವೆಂಬ ಬುದ್ಧಿಯಿಂದ ಬಾಧಿತವಾಗುವದೋ, ಹೇಗೆ ಸ್ವಪ್ನದೇಹ , ಮಾಯಾದೇಹ – ಮುಂತಾದವುಗಳು ನಿಜವೆಂದು ಆಗ್ಗೆ ತೋರುತ್ತಿದರೂ ಎಚ್ಚರವಾಗುತ್ತಲೂ, ಅಥವಾ ಮಾಯೆಯನ್ನು ಉಪಸಂಹಾರಮಾಡುತ್ತಲೂ ಇರಲೇ ಇಲ್ಲವೆಂದು ಬಾಧಿತವಾಗುವವೋ ಹಾಗೆಯೇ ಈ ಎಚ್ಚರದ ದೇಹಗಳೂ ಬಾಧಿತ ವಾಗುವದರಿಂದ ಅಂತವಂತಗಳಾಗಿರುತ್ತವೆ. ಸಕ್ಕರೆಯಿಂದ ಮಾಡಿದ ಗಣಪತಿಯ ಅವಯವಗಳೆಲ್ಲವೂ ಸಕ್ಕರೆಯೇ ಆಗಿರುವಂತೆ ಅವೆಲ್ಲವೂ ಆತ್ಮನೇ ಆಗಿರುತ್ತವೆ. ಯಾರು ಹೀಗೆ ಸೂಕ್ಷ್ಮದೃಷ್ಟಿಯಿಂದ ಪರೀಕ್ಷೆಮಾಡಲಾರರೋ ಅಂಥವರಿಗಾಗಿಯೇ ಶ್ರುತಿಯಲ್ಲಿ ಕನಸಿನ ಅನುಭವದಿಂದ ಶರೀರಾದಿಗಳ ಮಿಥ್ಯಾತ್ವವನ್ನೂ ಆತ್ಮನ ಅಸಂಗತ್ವವನ್ನೂ ಮನಗಾಣಿಸಿಕೊಟ್ಟಿರುತ್ತದೆ.

ಆತ್ಮನಿಗೆ ಅನಾತ್ಮಸಂಬಂಧವಿಲ್ಲವೆಂಬುದು ಸ್ವಪ್ನ ವಿಚಾರದಿಂದಲೇ ಸ್ಪಷ್ಟವಾಗಿ ಕಾಣಬರುತ್ತದೆಯಷ್ಟೆ ? ಸುಷುಪ್ತಿಯ ಅನುಭವವನ್ನು ಮನದಂದರಂತೂ ಇದು ಇನ್ನೂ ಸುಸ್ಫುಟವಾಗುತ್ತದೆ. ಹೇಗೆಂದರೆ :

**ತದ್ವಾ ಅಸ್ಯೈತದತಿಚ್ಛನ್ದಾ ಅಪಹತಪಾಪ್ಮಾಭಯಂ ರೂಪಮ್ । ತದ್ಯಥಾ ಪ್ರಿಯಯಾ ಸ್ತ್ರಿಯಾ ಸಂಪರಿಷ್ವಕ್ತೋ ನ ಬಾಹ್ಯಂ ಕಿಂಚನ ವೇದ ನಾನ್ತರಮ್ ಏವಮೇವಾಯಂ ಪುರುಷಃ ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತೋ ನ ಬಾಹ್ಯಂ ಕಿಂಚನ ವೇದ ನಾನ್ತರಂ ತದ್ವಾ ಅಸ್ಯೈತದಾಪ್ತಕಾಮಮಾತ್ಮಕಾಮಮಕಾಮಂ ರೂಪಂ ಶೋಕಾನ್ತರಮ್ ॥**

ಬರಿನಿದ್ರೆಯು ನಮ್ಮ ಅವಸ್ಥೆ ಎಂಬ ವಿಷಯಕ್ಕೆ ಯಾರಿಗೂ ಸಂಶಯವಿಲ್ಲವಷ್ಟೆ? ಅಲ್ಲಿರುವ ಆತ್ಮಸ್ವರೂಪವನ್ನು ಸ್ವಲ್ಪ ವಿಮರ್ಶಿಸಿ ನೋಡೋಣ. ಅಲ್ಲಿ (೧) ಯಾವ ಕಾಮವೂ ಇರುವದಿಲ್ಲ . ಸುಷುಪ್ತಿಯಲ್ಲಿ ಯಾರಿಗಾದರೂ ಏತರದಾದರೂ ಆಶೆಯುಂಟಾಯಿತೆಂದಾಗಲಿ, ಉಂಟಾಗುವ ಸಂಭವವಿದೆಯೆಂದಾಗಲಿ ಕಲ್ಪಿಸುವದ ಕ್ಕಾದೀತೇನು ? ಎಂದಿಗೂ ಇಲ್ಲ . (೨) ಅಪಹತಪಾಪ್ಮವಾದ ರೂಪವದು. ಪಾಪವೆಂಬ ಮಾತನ್ನು ಇಲ್ಲಿ ಪುಣ್ಯಪಾಪಗಳಿಗೆರಡಕ್ಕೂ ಉಪಯೋಗಿಸಿದೆ. ಅಲ್ಲಿ ಯಾರೂ ಪುಣ್ಯವನ್ನಾಗಲಿ ಪಾಪವನ್ನಾಗಲಿ ಮಾಡುವಂತಿಲ್ಲವೆಂಬುದೂ ಸ್ಪಷ್ಟ. (೩) ಅಭಯರೂಪವದು . ಎರಡನೆಯ ವಸ್ತುವಿನಿಂದಲ್ಲವೆ, ಭಯವಾಗುವದು ? ಸುಷುಪ್ತಿಯಲ್ಲಿ ಎರಡನೆಯ ವಸ್ತು ಯಾವದಿದೆ ? ಯಾವದೂ ಇಲ್ಲ . ಅಲ್ಲಿ ಆತ್ಮನು ತಾನೊಬ್ಬನೇ ಇರುತ್ತಾನೆ ; ಕನಸಿನಲ್ಲಿ ಕಲ್ಪಿಸುವಂತೆ , ಅವನಿಗಿಂತ ವ್ಯತಿರಿಕ್ತವಾದ ಎರಡನೆಯ ವಸ್ತುವನ್ನು ಅಲ್ಲಿ ಯಾರೂ ಕಲ್ಪಿಸಿಕೊಳ್ಳುವದಿಲ್ಲ . ಅವಿದ್ಯೆಯಿಂದ ಎರಡನೆಯ ವಸ್ತುವನ್ನು ಕಲ್ಪಿಸುತ್ತಾರೆ ; ಆದರೆ ಅಲ್ಲಿ ಅವಿದ್ಯೆಯೇ ಇಲ್ಲದ್ದರಿಂದ ದ್ವಿತೀಯ ವಸ್ತುವಿನ ಕಲ್ಪನೆಯೂ ಇಲ್ಲ, ಆ ಎರಡನೆಯ ವಸ್ತುವಿನಿಂದಾಗುವ ಅಂಜಿಕೆ ಎಲ್ಲಿಂದ ಬರಬೇಕು ?

ಆ ಸುಷುಪ್ತಿಯಲ್ಲಿ ಎಚ್ಚರಕನಸುಗಳಲ್ಲಿರುವಂತೆ ಕರ್ತೃರೂಪವೊಂದು, ಸಾಕ್ಷಿರೂಪವೊಂದು – ಹೀಗೆ ಎರಡು ರೂಪಗಳಿರುವದಿಲ್ಲ . ಪ್ರಿಯಳಾದ ತನ್ನ ಸ್ತ್ರೀಯಿಂದಾಲಿಂಗಿತನಾಗಿ ಅವಳಲ್ಲಿ ಐಕ್ಯವಾಗಿ ಬಿಟ್ಟಿರುವವನಂತೆ ಜೀವನು ಪ್ರಾಜ್ಞ ಪರಮೇಶ್ವರನಿಂದ ಆಲಿಂಗಿತನಾಗಿ ಆತನಲ್ಲಿ ಒಂದಾಗಿಬಿಟ್ಟಿರುತ್ತಾನೆ . ಆದ್ದರಿಂದ ಅಲ್ಲಿ ವಿಶೇಷ ಜ್ಞಾನವೇ ಇರುವದಿಲ್ಲ . ಅಲ್ಲಿ ಸರ್ವಕಾಮಗಳನ್ನೂ ಪಡೆದುಕೊಂಡಿರುವ ರೂಪವಿರುವದು , ಏಕೆಂದರೆ ಎಲ್ಲಾ ಕಾಮಗಳೂ ಆತ್ಮನೇ ಆಗಿಬಿಟ್ಟಿರುತ್ತವೆ ; ಆದ್ದರಿಂದ ಅದು ಅಕಾಮರೂಪವು , ಶೋಕರಹಿತವಾದ ರೂಪವು. ಸುಷುಪ್ತಿ ಯಲ್ಲಿರುವ ರೂಪದಲ್ಲಿ ಅವಿದ್ಯಾಕಾಮಕರ್ಮಗಳೇ ಇಲ್ಲದ್ದರಿಂದ ಅಲ್ಲಿ ಏತರ ಸಂಬಂಧವೂ ಆತ್ಮನಿಗಿರುವದಿಲ್ಲ. ಹೇಗೆಂದರೆ :

**ಅತ್ರ ಪಿತಾಽಪಿತಾ ಭವತಿ ಮಾತಾಽಮಾತಾ ಲೋಕಾ ಅಲೋಕಾ ದೇವಾ ಅದೇವಾ ವೇದಾ ಅವೇದಾಃ । ಅತ್ರ ಸ್ತೇನೋಽಸ್ತೇನೋ ಭವತಿ ಭ್ರೂಣಹಾಽಭ್ರೂಣಹಾ ಚಾಂಡಾಲೋಽಚಾಂಡಾಲಃ ಪೌಲ್ಕ - ಸೋಽಪೌಲ್ಕಸಃ ಶ್ರಮಣೋಽಶ್ರಮಣಸ್ತಾಪಸೋಽತಾಪಸೋಽನನ್ವಾಗತಂ ಪುಣ್ಯೇನಾಽನನ್ವಾಗತಂ ಪಾಪೇನ ತೀರ್ಣೋ ಹಿ ತದಾ ಸರ್ವಾನ್ ಶೋಕಾನ್ ಹೃದಯಸ್ಯ ಭವತಿ ॥** ಬೃ. ೪-೩-೨೨

ಎಚ್ಚರದಲ್ಲಿ ತಂದೆ , ಮಗ - ಎಂಬ ಸಂಬಂಧವು ತಂದೆ ಜನಕನಾಗಿರುವದರಿಂದ, ಅಲ್ಲವೆ ? ಇಲ್ಲಿ ಆ ಕರ್ಮದ ಸಂಬಂಧವು ಇರುವದಿಲ್ಲವಾದ್ದರಿಂದ ತಂದೆಯು ತಂದೆಯಲ್ಲ , ಮಗನು ಮಗನೂ ಅಲ್ಲ . ಹೀಗೆಯೇ ತಾಯಿಯು ತಾಯಿಯಲ್ಲ ; ಹಡೆದ ಕರ್ಮದಿಂದಲಲ್ಲವೆ , 'ತಾಯಿ' ಎನಿಸಿರುವದು ? ಆ ಕರ್ಮದ ಸಂಬಂಧವು ತಪ್ಪಿ ಹೋಗಿರುವದರಿಂದ ಆಕೆ ಈಗ ತಾಯಿಯಲ್ಲ . ಹೀಗೆಯೇ ಶಾಸ್ತ್ರೋಕ್ತವಾದ ಕರ್ಮಗಳನ್ನು ಮಾಡುವದರಿಂದ ಲೋಕಗಳನ್ನು ಪಡೆದುಕೊಳ್ಳುತ್ತಾನೆ ; ಆದರೆ ಸುಷುಪ್ತಿಯಲ್ಲಿ ಆ ಕರ್ಮದ ಸಂಬಂಧವಿಲ್ಲದ್ದರಿಂದ ಲೋಕಗಳು ಲೋಕಗಳಾಗಿ ಉಳಿದಿರುವದಿಲ್ಲ . ಅದರಂತೆ ಯಾವ ದೇವತೆಯನ್ನು ಉದ್ದೇಶಿಸಿ ಕರ್ಮವನ್ನು ಮಾಡುವರೋ ಆ ದೇವತೆ ದೇವತೆಯಾಗಿರುವದಿಲ್ಲ . ಕರ್ಮಕ್ಕೆ ಸಾಧ್ಯಸಾಧನಗಳ ಸಂಬಂಧವನ್ನು ಹೇಳುವ ವೇದಗಳು ಬೇಕು . ಮನುಷ್ಯನು ಕರ್ಮಸಂಬಂಧವನ್ನು ಮೀರಿರುವದರಿಂದ , ಅಲ್ಲಿ ವೇದಗಳೂ ವೇದಗಳಾಗಿರುವದಿಲ್ಲ. ಇದರಂತೆ 'ಬ್ರಹ್ಮಸ್ವವನ್ನು ಅಪಹರಿಸಿದ್ದ ಕಳ್ಳನು ಇಲ್ಲಿ ಕಳ್ಳನಲ್ಲ. ಭ್ರೂಣಹತ್ಯಾದೋಷವೂ ಈಗ ಉಳಿದಿರುವದಿಲ್ಲ . ನಿಕೃಷ್ಟಜಾತಿಯಲ್ಲಿ ಹುಟ್ಟಿದ್ದ ಚಾಂಡಾಲನೂ ಇಲ್ಲಿ ಚಾಂಡಾಲನಲ್ಲ . ಶೂದ್ರನಿಂದ ಕ್ಷತ್ರಿಯಳಲ್ಲಿ ಹುಟ್ಟಿದ ಪುಲ್ಕಸನೂ ಪುಲ್ಕಸನಾಗಿರುವದಿಲ್ಲ . ಇದರಂತೆ ಆಶ್ರಮಗಳ ಸಂಬಂಧದಿಂದ ಸಂನ್ಯಾಸಿ, ವಾನಪ್ರಸ್ಥ - ಎನ್ನಿಸಿಕೊಂಡಿದ್ದವರೂ ಆ ಆಶ್ರಮದವರಾಗಿರುವದಿಲ್ಲ. ಹೆಚ್ಚೇನು, ಇಲ್ಲಿ ಯಾವ ಪುಣ್ಯದ ಸಂಬಂಧವೂ ಇರುವದಿಲ್ಲ. ಯಾವ ಪಾಪದ ಸಂಬಂಧವೂ ಇರುವದಿಲ್ಲ. ಹೃದಯವನ್ನಂಟಿಕೊಂಡಿರುವ ಯಾವ ಕಾಮಗಳೂ ಇಲ್ಲಿರುವದಿಲ್ಲವಾದ್ದರಿಂದ ಯಾವ ಕರ್ಮವೂ ಇಲ್ಲ .

ಹೀಗೆ ಯಾವ ಕಾಮವೂ ಇಲ್ಲದೆ, ಯಾವ ಕರ್ಮವೂ ಇಲ್ಲದೆ ಇರುವದು ನಮ್ಮೆಲ್ಲರ ಅನುಭವದಲ್ಲಿದೆಯಾದರೂ ಅಲ್ಲಿ ನಮಗೆ ಏತರ ಅರಿವೂ ಇರುವದೇ

ಇಲ್ಲವಾದ್ದರಿಂದ ಇವನು ಸ್ವಯಂಜ್ಯೋತಿಯಾಗಿರುತ್ತಾನೆಂಬುದೂ ಹೋಗಿರುವದಿಲ್ಲವೆ ? ಇವನು ಚೈತನ್ಯಸ್ವಭಾವದವನೇ ಆಗಿದ್ದಿದ್ದರೆ ಅಲ್ಲಿಯೂ ಆ ಚೈತನ್ಯವು ತೋರಿಕೊಳ್ಳಬೇಕಾಗಿತ್ತು. ಆದರೆ ಹಾಗಿಲ್ಲ; ಏಕೆಂದರೆ ಸುಷುಪ್ತಿಯಲ್ಲಿ ನಮಗೆ ಏನೂ ಕಾಣಿಸುವದಿಲ್ಲ, ಏನೂ ಕೇಳಿಬರುವದಿಲ್ಲ, ಏತರ ಅರಿವೂ ಆಗುವದಿಲ್ಲ; ಅದ್ದರಿಂದ ನಾವು ಅಚೇತನಸ್ವಭಾವದವರೇ ಎಂದಾಯಿತಲ್ಲ! – ಎಂದು ಯಾರಾದರೂ ಶಂಕಿಸಬಹುದು. ಆದರೆ ಈ ಶಂಕೆ ಸರಿಯಲ್ಲ, ಏಕೆಂದರೆ :

**ಯದ್ವೈ ತನ್ನ ಪಶ್ಯತಿ ಪಶ್ಯನ್ ವೈ ತನ್ನ ಪಶ್ಯತಿ ನ ಹಿ ದ್ರಷ್ಟುರ್ದೃಷ್ಟೇರ್ವಿಪರಿಲೋಪೋ ವಿದ್ಯತೇಽವಿನಾಶಿತ್ವಾತ್ । ನ ತು ತದ್ದ್ವಿತೀಯಮಸ್ತಿ ತತೋಽನ್ಯದ್ ವಿಭಕ್ತಂ ಯತ್ ವಿಪಶ್ಯೇತ್ ॥** ಬೃ. ೪-೩-೨೩.

"ಅಲ್ಲಿ ನೋಡುವದಿಲ್ಲವೆಂಬುದು ನಿಜ ; ಆದರೆ ಅವನು ನೋಡುವ ಸಾಮರ್ಥ್ಯವನ್ನೇನೂ ಕಳೆದುಕೊಂಡಿರುವದಿಲ್ಲ . ಅವನ ನೋಟವೆಂಬ ಶಕ್ತಿಗೆ ಲೋಪವೇ ಇಲ್ಲವಷ್ಟೆ? ಏಕೆಂದರೆ ಅದಕ್ಕೆ ನಾಶವಾಗುವ ಸ್ವಭಾವವೇ ಇಲ್ಲ. ಆದರೆ ಅವನಿಗಿಂತ ಬೇರೆಯಾಗಿ ಎರಡನೆಯದಾಗಿ ಯಾವದೊಂದೂ ಇರುವದಿಲ್ಲ . ಅದಿದ್ದರಲ್ಲವೆ ಕಂಡಾನು ?" ಸುಷುಪ್ತಿಯಲ್ಲಿ ಕಾಣುವದು, ಕೇಳುವದು – ಮುಂತಾದ ಅರಿವುಗಳಿಲ್ಲದ್ದಕ್ಕೆ ಎರಡು ಬಗೆಯ ಕಾರಣಗಳನ್ನು ಕಲ್ಪಿಸಬಹುದು, ಆತ್ಮನಿಗೆ ಕಾಣುವ ಸಾಮರ್ಥ್ಯವೇ ಅಲ್ಲಿರುವದಿಲ್ಲವೆಂಬುದೊಂದು, ಕಾಣಬಹುದಾದ ಎರಡನೆಯ ವಸ್ತುವೇ ಅಲ್ಲಿರುವದಿಲ್ಲವೆಂಬುದೊಂದು. ಕುರುಡನಿಗೆ ಏನೂ ಕಾಣಿಸುವದಿಲ್ಲ. ಕಿವುಡನಿಗೆ ಏನೂ ಕೇಳಿಸುವದಿಲ್ಲ ; ಏಕೆಂದರೆ ಚಕ್ಷುರಿಂದ್ರಿಯವೂ ಶ್ರವಣೇಂದ್ರಿಯವೂ ಅವರಿಗಿಲ್ಲ . ಆದರೂ ಕಣ್ಣಿದ್ದರೂ ಮನೆ ಬರಿದಾಗಿದ್ದರೆ ಅಲ್ಲಿ ಏನು ಕಾಣಬೇಕು ? ಯಾವ ಸದ್ದೂ ಇಲ್ಲದೆಡೆಯಲ್ಲಿ ಏನು ಕೇಳಬೇಕು ? ಒಬ್ಬ ಮುದುಕಿಗೆ ನೇತ್ರವೈದ್ಯನು ಚಿಕಿತ್ಸೆಯನ್ನು ಮಾಡಲಾಗಿ ಅವಳಿಗೆ ಕಣ್ಣಿನ ಪಾಟವವು ಮೊದಲಿನಂತೆ ಸರಿಯಾಯಿತು. ಆಗ ವೈದ್ಯನು 'ನನ್ನ ಚಿಕಿತ್ಸೆಗಾಗಿ ಕೊಡಬೇಕಾಗಿದ್ದ ದಕ್ಷಿಣೆಯನ್ನು ಕೊಡು' ಎಂದನು. ಅವಳು 'ಸ್ವಾಮಿ, ನನ್ನ ಕಣ್ಣು ನೆಟ್ಟಗಾಗಿದ್ದರೆ ಮನೆಯಲ್ಲಿ ಪದಾರ್ಥಗಳೇಕೆ ಕಾಣಿಸುವದಿಲ್ಲ ?' ಎಂದು ಕೇಳಿದಳಂತೆ. ನಿಜವೇನೆಂದರೆ; ಆ ಮೋಸಗಾರವೈದ್ಯನು ಮುದುಕಿಗೆ ಕಣ್ಣು ಕಾಣಿಸುವದಿಲ್ಲವೆಂಬುದರ ಲಾಭವನ್ನು ಪಡೆದುಕೊಂಡು ಮನೆಯಲ್ಲಿದ್ದ ಬೆಲೆಯುಳ್ಳ ಪದಾರ್ಥಗಳನ್ನು ಒಂದೊಂದಾಗಿ ಸಾಗಿಸಿಬಿಟ್ಟಿದ್ದನು ! ಕಣ್ಣೇನೋ ಬಂದಿತ್ತು, ಆದರೆ ಕಾಣಬಹುದಾದ ಸಾಮಾನುಗಳೇ ಅಲ್ಲಿರಲಿಲ್ಲ ! ಸುಷುಪ್ತಿಯಲ್ಲಿ ಯಾರಿಗೂ ಯಾವ ವಸ್ತುವೂ

ಕಾಣಿಸುವದಿಲ್ಲವಲ್ಲ, ಇದೇಕೆ ? ಅಲ್ಲಿ ನಮಗೆ ಅರಿಯುವ ಶಕ್ತಿಯಿಲ್ಲವೆಂಬುದಲ್ಲ. ಕಾರಣ , ಏಕೆಂದರೆ ಸುಷುಪ್ತಿಯನ್ನು ನಾವು ಅರಿಯುತ್ತೇವೆ. 'ನನಗೆ ಗಾಢನಿದ್ರೆ ಬಂದಿತ್ತು, ಏತರ ಅರಿವೂ ಆಗಲಿಲ್ಲ' ಎಂದಲ್ಲವೆ, ನಮ್ಮ ಅನುಭವವನ್ನು ಎಚ್ಚತ್ತ ಬಳಿಕ ಪರಾಮರ್ಶಿಸಿ ಹೇಳಿಕೊಳ್ಳುವದು ? ಸುಷುಪ್ತಿಯಲ್ಲಿ ನಮ್ಮ ಸ್ವರೂಪಕ್ಕಿಂತ ಬೇರೆಯಾಗಿ ಎರಡನೆಯದೇನೂ ಇರುವದೇ ಇಲ್ಲ. ಇಲ್ಲಿ ಎರಡನೆಯದೆಂದರೆ ಜ್ಞೇಯವಾದ ವಸ್ತುವೆಂದು ಮಾತ್ರ ಅರ್ಥವನ್ನು ಮಾಡಬೇಕಾಗಿಲ್ಲ. ಏಕೆಂದರೆ ನಮಗೆ ಸಾಮಗ್ರಿಯಾಗಿರುವ ದೇಹ, ಇಂದ್ರಿಯ, ಮನಸ್ಸು - ಎಲ್ಲವೂ ನಮ್ಮ ಸ್ವರೂಪಕ್ಕಿಂತ ಎರಡನೆಯದೇ. ಅದು ಯಾವದೂ ಅಲ್ಲಿರುವದೇ ಇಲ್ಲ, ನಮಗೆ ತನಿನಿದ್ರೆಯಲ್ಲಿ ಶರೀರದ, ಇಂದ್ರಿಯದ, ಮನಸ್ಸಿನ ಅಥವಾ ವಿಷಯದ ಅರಿವೇ ಇಲ್ಲ ; ಏಕೆಂದರೆ ಅದೊಂದು ನಮಗಿಂತ ಬೇರೆಯಾಗಿರುವದೇ ಇಲ್ಲ. ನಮ್ಮ ಪ್ರಾಜ್ಞಾತ್ಮ (ಪರಮಾತ್ಮ ಚೈತನ್ಯ) ಸ್ವರೂಪದಲ್ಲಿ ನಾವು ಒಂದಾಗಿಬಿಟ್ಟಿರುತ್ತೇವೆ. ಹೊರಗೆ ಮತ್ತೆ ಯಾವದೊಂದೂ ಉಳಿದಿರುವದೇ ಇಲ್ಲ. 'ಆಗ ಮತ್ತೇತರ ಅರಿವೂ ನನಗೆ ಆಗಲಿಲ್ಲ' ಎಂಬುದೇ ನಮ್ಮ ಅನುಭವ. ಆದ್ದರಿಂದ ನಮ್ಮ ಅರಿಯುವ ಚೈತನ್ಯಶಕ್ತಿ ಇದ್ದೇ ಇತ್ತು ; ಅದಕ್ಕಿಂತ ಬೇರೆ ಯಾವದೊಂದು ಇರಲೇಇಲ್ಲ. ಆ ಚೈತನ್ಯವೊಂದಿದ್ದರೆ ಸಾಕು. ಆಗ ಹೊರಗೆ ನಿಜವಾಗಿ ವಸ್ತುವಿರಲಿ, ಹುಸಿತೋರಿಕೆಯ ವಸ್ತುವಿರಲಿ, ನಮಗೆ ಅದರ ಅರಿವಾಗಿಬಿಡುತ್ತದೆ. ಉದಾರಹಣೆಗೆ ನೋಡಿರಿ.

> **ಯತ್ರ ವಾ ಅನ್ಯದಿವ ಸ್ಯಾತ್ ತತ್ರಾನ್ಯೋಽನ್ಯತ್ ಪಶ್ಯೇತ್ ಅನ್ಯೋಽನ್ಯತ್ ಜಿಘ್ರೇತ್ ಅನ್ಯೋಽನ್ಯದ್ರಸಯೇತ್ ಅನ್ಯೋಽನ್ಯದ್ವದೇತ್ ಅನ್ಯೋಽನ್ಯಚ್ಛೃಣುಯಾತ್ ಅನ್ಯೋಽನ್ಯನ್ ಮನ್ವೀತ ಅನ್ಯೋಽನ್ಯತ್ ಸ್ಪೃಶೇತ್ ಅನ್ಯೋಽನ್ಯದ್ ವಿಜಾನೀಯಾತ್ ॥** ಬೃ. ೪-೩-೩೧

ಕನಸಿನಲ್ಲಿ ನಿಜವಾಗಿ ಏನೊಂದು ಇರುವದಿಲ್ಲ. ಅಲ್ಲಿರುವದೆಲ್ಲ, ವಾಸನಾಮಯವಾದ ವಿಕಲ್ಪವು ಮಾತ್ರವೇ . ಅಲ್ಲಿ ಏನೋ ನಮಗಿಂತ ಬೇರೆ ಇದ್ದಂತೆ ತೋರುತ್ತಿರುತ್ತದೆ. ಅದನ್ನೇ ನಾವು ಅಲ್ಲಿ ಕಾಣುತ್ತೇವೆ, ಮೂಸುತ್ತೇವೆ, ಸವಿಯುತ್ತೇವೆ, ಕೇಳುತ್ತೇವೆ, ಆಲೋಚಿಸುತ್ತೇವೆ, ಮುಟ್ಟುತ್ತೇವೆ, ಅರಿತುಕೊಳ್ಳುತ್ತೇವೆ . ಅಲ್ಲವೆ ? ಎಚ್ಚರದಲ್ಲಿ ತಾನೆ ಮತ್ತೇನು ? ಕನಸಿನಂತೆ ಯಾವದೋ ಎರಡನೆಯದಿರುವದೆಂದು ಅವಿದ್ಯೆಯಿಂದ ನಾವು ಕಲ್ಪಿಸಿಕೊಂಡೇ ಅದನ್ನು ವಿಶೇಷಜ್ಞಾನದಿಂದ ಅರಿಯುತ್ತಿರುತ್ತೇವೆ. ಆದರೆ ಎಲ್ಲವೂ ಆತ್ಮನೇ ಆಗಿಬಿಟ್ಟಿರುವಾಗ ಯಾರು ಏನನ್ನು ಏತರಿಂದ ಅರಿಯಬೇಕು ? ಸುಷುಪ್ತಿಯಲ್ಲಿ ನಾವು ಒಬ್ಬರೇ ಅದ್ವಿತೀಯರಾಗಿರುತ್ತೇವೆ.

ಆದ್ದರಿಂದಲೇ ಅಲ್ಲಿ ಏತರ ಅರಿವೂ ನಮಗೆ ಇಲ್ಲ, ಅದ್ವಿತೀಯ ಸ್ವಯಂಜ್ಯೋತಿ ರೂಪರೇ ನಾವು ಎಂಬುದಕ್ಕೆ ಈ ಅನುಭವವು ಸಾಲದೆ ?

## ೧೨. ಕಾಮಿಯಾದ ಅಜ್ಞ, ನಿಷ್ಕಾಮಿಯಾದ ಜ್ಞಾನಿ

(20-8-64)

ವಸ್ತುಸ್ಥಿತಿಯು ಎಂದಿಗೂ ಮಾರ್ಪಡದೆ ಇದ್ದಂತೆಯೇ ಇರುತ್ತದೆ. ಅದು ನಮ್ಮ ಎದುರಿಗೇ ಇರುತ್ತಿದ್ದರೂ ನಾವೇ ಲಕ್ಷ್ಯವಿಟ್ಟು ನೋಡುವವರೆಗೆ ಅದರ ನಿಜವು ನಮ್ಮ ಮನಸ್ಸಿಗೆ ಹತ್ತುವದಿಲ್ಲ. ಕಾಶಿಯಲ್ಲಿ ಒಬ್ಬ ರಾಜನ ಹೆಂಡತಿಯು ಗಂಗಾನದಿಯಲ್ಲಿ ಸ್ನಾನವನ್ನು ಮಾಡಿ ತನಗೆ ಉಂಟಾದ ಚಳಿಯನ್ನು ಕಳೆದುಕೊಳ್ಳುವದಕ್ಕಾಗಿ ನದಿಯ ದಡದ ಮೇಲಿದ್ದ ಒಂದು ಗುಡಿಸಲಿಗೇ ಬೆಂಕಿಯನ್ನು ಹತಿಸಿ ಮೈಕೈ ಕಾಯಿಸಿಕೊಳ್ಳುವದಕ್ಕೆ ಯತ್ನಿಸಿದಳಂತೆ. ಆಕೆಯು ಸಂದರಿಯೂ ರಾಜನಿಗೆ ಅತ್ಯಂತ ಪ್ರಿಯಳೂ ಆಗಿದ್ದರೂ ರಾಜನು ನ್ಯಾಯಪ್ರಿಯನಾಗಿದ್ದದ್ದರಿಂದ ಆಕೆಯ ಮೈಮೇಲಿದ್ದ ಆಭರಣಗಳನ್ನೆಲ್ಲ ತೆಗೆಯಿಸಿ ಆಕೆಗೆ ಹರಕುಚಿಂದಿಯ ಬಟ್ಟೆಗಳನ್ನು ಉಡಿಸಿ ಅರಮನೆಯಿಂದ ಹೊರದೂಡಿಸಿದನಂತೆ. "ನಿನಗೆ ಬಡತನವೆಂದರೇನೆಂಬುದು ಅನುಭವಕ್ಕೆ ಬಂದಿಲ್ಲ; ಬಡವರನ್ನು ನೋಡಿದೀಯೆ, ಆದರೆ ಅವರ ಕಷ್ಟಸುಖಗಳು ನಿನಗೆ ಮನದಟ್ಟಾಗಿಲ್ಲ. ನೀನು ಬಡತನದ ಸ್ಥಿತಿಯನ್ನು ನೇರಾಗಿ ಅನುಭವಿಸದೆ, ನೀನು ಮಾಡಿದ ಈ ಪಾಪಕೃತ್ಯದ ವಿಷಯಕ್ಕೆ ಹೇಗೆ ಪಶ್ಚಾತ್ತಾಪವು ಬಂದೀತು ? " ಎಂದು ಆ ರಾಣಿಗೆ ತಿಳಿಸಿಕೊಟ್ಟನಂತೆ.

ನಮಗೆ ಪ್ರತಿದಿನವೂ ಎಚ್ಚರ, ಕನಸು, ತನಿನಿದ್ರೆಗಳು ಬಂದುಹೋಗುತ್ತಿರುತ್ತವೆ. ಎಚ್ಚರದಲ್ಲಿ ಶರೀರೇಂದ್ರಿಯಗಳ ಸಂಬಂಧವಿದ್ದು, ವ್ಯವಹಾರವನ್ನು ಮಾಡುತ್ತಿರುವಂತೆ ತೋರುತ್ತಿರುತ್ತದೆ. ಕನಸಿನಲ್ಲಿ ಮನಸ್ಸಿನ ವಾಸನಾಮಯಪ್ರಪಂಚವನ್ನು ಕಲ್ಪಿಸಿಕೊಂಡು ಎಚ್ಚರದಂತೆಯೇ ವ್ಯವಹಾರವನ್ನನುಭವಿಸುತ್ತಿರುವಂತೆ ಭಾವಿಸಿಕೊಳ್ಳುತ್ತಿರುತ್ತೇವೆ. ನಿಜವಾಗಿ ಅಲ್ಲಿ ಎಚ್ಚರದ ಶರೀರೇಂದ್ರಿಯಗಳೆಂಬ ಮೃತ್ಯುರೂಪಗಳನ್ನು ದಾಟಿಯೇ ಇರುತ್ತೇವೆ. ಸುಷುಪ್ತಿಯಲ್ಲಂತೂ ಅದ್ವಿತೀಯನಾದ ಪ್ರಾಜ್ಞಪರಮಾತ್ಮನಲ್ಲಿಯೇ ಒಂದಾಗಿರುತ್ತೇವೆ. ಹೀಗಿದ್ದರೂ ನಮಗೆ ಅಜಾದ್ವಿತೀಯ ತತ್ತ್ವಮಾತ್ರಸ್ವರೂಪರು ನಾವೆಂಬುದು ಮನವರಿಕೆಯಾಗುವದೇ ಇಲ್ಲ. ಕಾಶಿಯ

ರಾಣಿಗೆ ಮತ್ತೊಬ್ಬರ ಬಡತನವನ್ನು ಅನುಭವಕ್ಕೆ ತಂದುಕೊಂಡಬೇಕಾಗಿತು ; ಇಲ್ಲಿ ನಮಗೆ ಎಂದೆಂದಿಗೂ ಇರುವ ಅವಿದ್ಯಾಕಾಮಕರ್ಮರಹಿತವಾದ ನಮ್ಮದೇ ಆದ ಅದ್ವಿತೀಯಾತ್ಮಸ್ವಭಾವವನ್ನೇ ಅನುಭವಕ್ಕೆ ತಂದುಕೊಡುವ ಪ್ರಸಂಗವು ಬಂದಿರುತ್ತದೆ . ಇದಕ್ಕೇನು ಕಾರಣ ? ಸ್ವಭಾವದಿಂದ ನಾವೆಲ್ಲರೂ ಎಚ್ಚರದ ವ್ಯವಹಾರಕ್ಕೇ ಹೆಚ್ಚಿನ ಬೆಲೆಯನ್ನು ಕೊಡುತ್ತಿದ್ದೇವೆ . ನಮ್ಮ ವ್ಯವಹಾರವೆಲ್ಲವೂ ಯಾವ ಆತ್ಮಜ್ಯೋತಿಯಿಂದ ಸಾಗುತ್ತಿರುವದೋ ಆ ಜ್ಯೋತಿಯಕಡೆಗೆ ನಮ್ಮ ಮನಸ್ಸು ಹರಿಯುವದೇ ಇಲ್ಲ . ಆದ್ದರಿಂದಲೇ ಜನಕನು **'ಕಿಂ ಜ್ಯೋತಿರಯಂ ಪುರುಷಃ'** (ಈ ಮನುಷ್ಯನಿಗೆ ಜ್ಯೋತಿ ಯಾವದು ? ) ಎಂದು ಕೇಳಿರುತ್ತಾನೆ. ಯಾಜ್ಞವಲ್ಕ್ಯರು **'ಆತ್ಮೈವಾಸ್ಯ ಜ್ಯೋತಿಃ '** (ಆತ್ಮನೇ ಇವನಿಗೆ ಬೆಳಕು) ಎಂದು ಹೇಳಿದ ಮೇಲೂ 'ಆತ್ಮನೆಂದರೆ ಯಾರು ?' ಎಂದು ಕೇಳಿರುತ್ತಾನೆ . ನಮಗೆ ವ್ಯವಹಾರದ ಯಾವಯಾವ ಅವಸ್ಥೆಯಲ್ಲಿ ಯಾವಯಾವದು 'ನಾನು' ಎಂಬ ಪ್ರತ್ಯಯಕ್ಕೆ ವಿಷಯವಾಗಿ ತೋರುವದೋ 'ಅದೇ ನನ್ನ ಆತ್ಮ', 'ಅದೇ ನನ್ನ ಸ್ವರೂಪ ' ಎಂದು ನಾವು ಬಗೆಯುತ್ತಿರುತ್ತೇವೆ . ಸುಷುಪ್ತಿಯಲ್ಲಿ ಏನೂ ಕಾಣದೆ ಇರುವದರಿಂದ ಅಲ್ಲಿ ನಮ್ಮ ಸ್ವರೂಪವೇ ಇಲ್ಲ – ಎಂದು ಭಾವಿಸುವವರೆಗೂ ಹೋಗುತ್ತೇವೆ . ಯಾಜ್ಞವಲ್ಕ್ಯರು :

> **ಯೋಽಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯನ್ತರ್ಜ್ಯೋತಿಃ ಪುರುಷಃ ಸ ಸಮಾನಃ ಸನ್ ಉಭೌ ಲೋಕಾವನುಸಂಚರತಿ ಧ್ಯಾಯತೀವ ಲೇಲಾಯತೀವ ಸ ಹಿ ಭೂತ್ವಾ ಇಮಂ ಲೋಕಮತಿಕ್ರಾಮತಿ ಮೃತ್ಯೋಃ ರೂಪಾಣಿ ॥**

ಇಂದ್ರಿಯಗಳ ನಡುವೆಯಿದ್ದು ಹೃದಯದೊಳಗಡೆಯಲ್ಲಿ ಇರುವ ಜ್ಯೋತೀರೂಪನಾದ ಪುರುಷನಿದಾನಲ್ಲ, ಇವನೇ ಆತ್ಮನು – ಎಂದು ತಿಳಿಸಿಕೊಟ್ಟಿರುವದಲ್ಲದೆ ಈ ಆತ್ಮನು ಬುದ್ಧಿ ಎಂಬ ಉಪಾಧಿಯಿಂದ ಇಹಪರಲೋಕಗಳಲ್ಲಿ ಸಂಚರಿಸುತ್ತಿರುತ್ತಾನೆ; ಆದರಿಂದ ಜ್ಞಾನೇಂದ್ರಿಯವ್ಯವಹಾರವನ್ನೂ ಕರ್ಮೇಂದ್ರಿಯವ್ಯವಹಾರವನ್ನೂ ಮಾಡುತ್ತಿರುವವನಂತೆ ತೋರುತ್ತಿರುತ್ತಾನೆ . ಕನಸಿನಲ್ಲಿ ಮೃತ್ಯುರೂಪಗಳಾದ ಕಾರ್ಯಕರಣಗಳನ್ನು ದಾಟಿರುತ್ತಾನೆ – ಎಂದು ತಿಳಿಸಿಕೊಟ್ಟಿರುತ್ತಾನೆ . **'ತದ್ವಾ ಅಸ್ಯೈತದತಿಚ್ಛಂದಾ ಅಪಹತಪಾಪ್ಮಾಽಭಯಂ ರೂಪಮ್ ॥ '** ಸುಷುಪ್ತಿಯಲ್ಲಿ ಅವಿದ್ಯಾಕಾಮಕರ್ಮಗಳನ್ನು ಮೀರಿರುವ ರೂಪವೊಂದೇ ಇರುತ್ತದೆ ಎಂದೂ ತಿಳಿಸಿ ಕೊಟ್ಟಿರುತ್ತಾನೆ.

ಹೀಗಿರುತ್ತಿದ್ದರೂ ನಮಗೆ ಈ ಆತ್ಮನ ಪರಮಾರ್ಥಸ್ವರೂಪವು ಮನದಟ್ಟಾಗದೆ ಇರುತ್ತದೆಯಲ್ಲ! ಇದೇಕೆ ? ಒಬ್ಬ ಮನುಷ್ಯನನ್ನು ಕಣ್ಣುಕಟ್ಟಿ ಊರಲ್ಲೆಲ್ಲ ಸುತ್ತಾಡಿಸಿ ಕಾಡಿಗೆ ಬಿಟ್ಟರೆ ಅವನಿಗೆ ಊರಿನ ಪರಿಚಯವು ಹೇಗೆ ಆಗದೆ ಇರುವದೋ ಹಾಗೆಯೇ ನಮಗೆ ಅವಿದ್ಯೆಯಿಂದಲೇ ನಮ್ಮ ಪರಮಾರ್ಥಸ್ವರೂಪವು ಅನುಭವಕ್ಕೆ ಬಾರದೆ ಇರುತ್ತದೆ . ಹೊರಕ್ಕೇ ನೋಡುತ್ತಾ ಇಷ್ಟಾದ್ವೇಷರೂಪವಾದ ದ್ವಂದ್ವಮೋಹದಿಂದ ಬಿಗಿವಡೆದಿರುವವರಿಗೆ ಆತ್ಮಜ್ಞಾನವು ಹೇಗೆ ಆಗಬೇಕು ? ನಿಮಿರಾಜನಿಗೆ ಅಂತರಿಕ್ಷ ಮುನಿಯು ಹೇಳಿರುವಂತೆ ಜಾಗರಿತಾದ್ಯವಸ್ಥಾತ್ರಯವನ್ನು ಅನುಭವಿಸುತ್ತಾ , ಜನ್ಮ ಮರಣಗಳನ್ನು ಅನುಭವಿಸುತ್ತಾ , ಪ್ರಲಯವಾಗುವವರೆಗೂ ಸಂಸಾರದಲ್ಲಿ ತೊಳಲುತ್ತಿರುವ ಜನರಿಗೆ ಮತ್ತೆಮತ್ತೆ ಅದ್ವಿತೀಯಾತ್ಮಸ್ವರೂಪದಲ್ಲಿ ತಾವು ಮುಳುಗುತ್ತಿದ್ದರೂ ಆ ನಿಜವು ಮಾತ್ರ ಮನಸ್ಸಿಗೆ ಬಾರದೆಇರುತ್ತದೆ. ಇದೇ ಭಗವನ್ಮಾಯೆ ಎಂಬುದು !

ಸುಷುಪ್ತಿಯಲ್ಲಿ ಹೇಗೆ ನಮಗೆ ಪ್ರಾಜ್ಞಾತ್ಮನಲ್ಲಿ ಐಕ್ಯವು ಬಲಾತ್ಕಾರದಿಂದ ಬಂದಿರುವದೋ ಹಾಗೆಯೇ ಮರಣಪ್ರಲಯಗಳಲ್ಲಿಯೂ ಬಂದಿರುತ್ತದೆ . ಮರಣ ಕಾಲದ ಅನುಭವವು ಹೇಗಿರುವದೆಂಬುದು ಬದುಕಿರುವಾಗ ನಮಗೆ ಅನುಭವಕ್ಕೆ ಬರುವ ಸಂಭವವಿಲ್ಲ . ಆದರೂ ನಮಗೆ ಮನವರಿಕೆಯಾಗಬಹುದಾದಷ್ಟನ್ನು ಲಕ್ಷ್ಯದಲ್ಲಿಡುವಂತೆ ಶ್ರುತಿಯು ಹೀಗೆನ್ನುತ್ತಿದೆ :

**ತದ್ಯಥಾಽನಃ ಸುಸಮಾಹಿತಮುತ್ಸರ್ಜನ್ ಯಾಯಾದೇವಮೇವಾಯಗ್ಂ ಶಾರೀರ ಆತ್ಮಾ ಪ್ರಾಜ್ಞೇನಾತ್ಮನಾಽನ್ವಾರೂಢ ಉತ್ಸರ್ಜನ್ ಯಾತಿ ಯತ್ರೈತದೂರ್ಧ್ವೋಚ್ಛ್ವಾಸೀ ಭವತಿ ||** ಬೃ. ೪-೩-೩೫.

ಎಚ್ಚರದಿಂದ ಕನಸಿಗೆ ಹೋದವನು ಮತ್ತೆ ಎಚ್ಚರಕ್ಕೆ ಬರುವಂತೆ ಒಂದು ದೇಹದಿಂದ ಮತ್ತೊಂದು ದೇಹಕ್ಕೆ ಹೋಗುತ್ತಿರುತ್ತಾನೆ . ಆಗಲೂ ಅವನಿಗೆ ಶರೀರಾದಿಗಳ ಸಂಬಂಧವು ಆಗುತ್ತಲೂ ಹೋಗುತ್ತಲೂ ಇರುತ್ತದೆ ; ಆದರೂ ಅವನಿಗೆ ದೇಹಾದ್ಯಭಿಮಾನವು ಹೋಗಿರುವದಿಲ್ಲ . ಕೊನೆಗೆ ಸಾಯುವ ಹೊತ್ತಿನಲ್ಲಿ ನಿಟ್ಟುಸಿರು ಬಿಡುತ್ತಾ - ಭರ್ತಿಯಾದ ಬಂಡಿಯು ಗಡಗಡನೆ ಶಬ್ದವನ್ನು ಮಾಡುತ್ತಾ ಹೋಗುತ್ತಿರುವಂತೆ - ತನ್ನ ಪಾಪಪುಣ್ಯಗಳ ವಾಸನೆಯ ಭಾರವನ್ನು ಹೊತ್ತುಕೊಂಡು ಘುರ್‌ಘುರ್ರೆಂದು ಶಬ್ದ ಮಾಡುತ್ತಾ ಪ್ರಾಜ್ಞಾತ್ಮನಿಂದ ಬೆಳಗುತ್ತಲೇ ಪ್ರಾಣಾದಿಗಳಿಂದೊಡಗೂಡಿ ಹೊರಟುಹೋಗುತ್ತಾನೆ . ನಿಜವಾಗಿ ನೋಡಿದರೆ ಇವನ ಸ್ವರೂಪವು ಆತ್ಮನೇ ಆದರೂ ಅದನ್ನರಿಯದ್ದರಿಂದ ಎಚ್ಚರಕನಸುಗಳಲ್ಲಿ ಹೇಗೆ

ಪರಮಾತ್ಮಸ್ವರೂಪಕ್ಕಿಂತ ವಿಲಕ್ಷಣವಾದ ವಿಜ್ಞಾನಾತ್ಮರೂಪದಿಂದ ವ್ಯವಹರಿಸುತ್ತಿರುವನೋ ಹಾಗೆಯೇ ಸಾಯುವಾಗ ಮರ್ಮಗಳು ಕಿತ್ತುಕೊಂಡು ಹೋಗುವಂತೆ ದುಃಖವನ್ನನುಭವಿಸುತ್ತಾ ನಿಟ್ಟುಸಿರಿಡುತ್ತಾ ಹೊರಡುತ್ತಾನೆ.

ಶ್ರುತಿಯು ಇದನ್ನು ವರ್ಣಿಸಿರುವದೇಕೆ ? ಇದನ್ನು ಮನದಂದುಕೊಂಡಾದರೂ ವೈರಾಗ್ಯವನ್ನು ಹೊಂದಲಿ ! ಈ ಸಂಸಾರದ ಗೋಳು ಇಂಥದ್ದು, ಸಾಯುವಾಗ ಮರ್ಮಗಳೆಲ್ಲ ಕಿತ್ತುಹೋಗುವಂತೆ ದುಃಖವಾಗುತ್ತಿರುತ್ತದೆ. ಅಂಥ ಸಂಕಟ ಸಮಯದಲ್ಲಿ ಚಿತ್ತವು ಪರವಶೀಕತ್ಯವಾಗಿಬಿಟ್ಟಿರುತ್ತದೆ ; ಪುರುಷಾರ್ಥಸಾಧನೆಗೆ ಅವಕಾಶವೆಲ್ಲುಂಟು ? ಕಫವಾತಪಿತ್ತಾದಿಗಳಿಂದ ಕಂಠವು ಬಿಗಿದುಕೊಂಡಿರುವಾಗ ಭಗವಂತನ ಸ್ಮರಣೆಯೆಲ್ಲಿಬರಬೇಕು ? ಆದ್ದರಿಂದ ಅಂಥ ದುರವಸ್ಥೆಯು ಬರುವದರೊಳಗೇ ಪುರುಷಾರ್ಥವನ್ನು ಸಾಧಿಸಿಕೊಳ್ಳುವದಕ್ಕೆ ಪ್ರಯತ್ನಿಸಲಿ ! - ಎಂಬುದೇ ಶ್ರುತಿಯ ಅಭಿಪ್ರಾಯ.

ಹೀಗೆ ಅವಿದ್ಯಾಕಾಮಕರ್ಮವಶನಾಗಿ ಮತ್ತೆಮತ್ತೆ ಹುಟ್ಟುತ್ತಲೂ ಸಾಯುತ್ತಲೂ ಇರುವ ಈ ಜೀವನು ತನ್ನ ಪರಮಾರ್ಥಸ್ವರೂಪವಾದ ಸ್ವಯಂಜ್ಯೋತಿಯಾದ ಆತ್ಮಸ್ವರೂಪದ ಬೆಳಕಿನಲ್ಲಿಯೇ ವ್ಯವಹಾರಮಾಡುತ್ತಾ, ಪಾಪಪುಣ್ಯಗಳಿಗೆ ಅನುಸಾರವಾಗಿ

**ತದೇವ ಸಕ್ತಃ ಸಹ ಕರ್ಮಣೈತಿ ಲಿಂಗಂ ಮನೋ ಯತ್ರ ನಿಷಕ್ತಮಸ್ಯ । ಪ್ರಾಪ್ಯಾನ್ತಂ ಕರ್ಮಣಸ್ತಸ್ಯ ಯತ್ಕಿಂಚೇಹ ಕರೋತ್ಯಯಮ್ । ತಸ್ಮಾಲ್ಲೋಕಾತ್ ಪುನರೈತ್ಯಸ್ಮೈ ಲೋಕಾಯ ಕರ್ಮಣ ಇತಿ ನು ಕಾಮಯಮಾನಃ।** ಬೃ. ೪-೪-೬

ಯಾವ ಬಗೆಯ ಕರ್ಮವನ್ನು ಮಾಡಿರುತ್ತಾನೋ ಆ ಕರ್ಮದೊಡನೆ ಅದರ ಫಲವನ್ನು ಅನುಭವಿಸುವದಕ್ಕೆಂದು ಅದರ ವಾಸನೆಯಿಂದಲೇ ಆ ಫಲವು ದೊರಕುವಲ್ಲಿಗೆ ಹೋಗುತ್ತಾನೆ . ಅಲ್ಲಿ ಆ ಕರ್ಮಫಲವನ್ನು ಅನುಭವಿಸಿ ಮುಗಿಸಿದ ಬಳಿಕ ಮತ್ತೆ ಈ ಕರ್ಮಪ್ರಧಾನವಾದ ಮನುಷ್ಯಲೋಕಕ್ಕೇ ಹಿಂತೆರಳುತ್ತಾನೆ . ಈ ಲೋಕದಲ್ಲಿದ್ದವರು ಯಾರೊಬ್ಬರೂ ಕರ್ಮವನ್ನು ಮಾಡದೆ ಇರುವದಕ್ಕಾಗಲಿ , ಅದರ ಫಲವನ್ನು ತಪ್ಪಿಸಿಕೊಳ್ಳುವದಕ್ಕಾಗಲಿ ಆಗುವಂತೆಯೇ ಇಲ್ಲ.

ಇದೆಲ್ಲ ಕಾಮಿಯ ಮಾತು. ಯಾವನನ್ನು ಕಾಮವು ಅವನನ್ನು ಬಿಟ್ಟಿ ಹಿಡಿದು ಕೆಲಸದಲ್ಲಿ ನೂಕುತ್ತಿರುವದೋ ಅವನು ಅದಕ್ಕೆ ಪರವಶನಾಗಿ ಮತ್ತೆಮತ್ತೆ ಪಾಪವನ್ನೋ ಪುಣ್ಯವನ್ನೋ ಮಾಡುವದು, ಅದರ ಫಲವನ್ನು ಇಲ್ಲಿ ಅಥವಾ

ಲೋಕಾಂತರದಲ್ಲಿ ಅನುಭವಿಸುವದು - ಹೀಗೆ ಗಾಣದೆತ್ತಿನಂತೆ ಸುತ್ತುತ್ತಲೇ ಇರಬೇಕಾಗಿದೆ. ಆದ್ದರಿಂದಲೇ ಕಾಮವನ್ನೆಲ್ಲ ನಿವೃತ್ತಿಗೊಳಿಸಿಕೊಂಡವನಿಗೆ ಕರ್ಮಗಳು ಎಷ್ಟೇ ಕೂಡಿಹಾಕಿಕೊಂಡಿರಲಿ, ಅವುಗಳು ಫಲವನ್ನು ಕೊಡಲಾರವು. ಆದ್ದರಿಂದ ಕಾಮವನ್ನು ಪರಿಹರಿಸಿಕೊಳ್ಳುವದಕ್ಕೆ ಪ್ರಯತ್ನಿಸಬೇಕು - ಎಂದಾಯಿತು. ಕಾಮ ವಿಲ್ಲದವನ ಗತಿ ಯಾವದು ? - ಎಂದರೆ

**ಅಥಾಕಾಮಯಮಾನೋ ಯೋಽಕಾಮೋ ನಿಷ್ಕಾಮ ಆಪ್ತಕಾಮ ಆತ್ಮಕಾಮೋ ನ ತಸ್ಯ ಪ್ರಾಣಾ ಉತ್ಕ್ರಾಮನ್ತಿ ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ ॥**

ಬೃ. ೪-೪-೬.

ಕಾಮವಿಲ್ಲದವರು ಯಾರಾದರೂ ಉಂಟೆ ? ಯಾವನಿಗೆ ಕಾಮಿಸಬೇಕಾದ ವಿಷಯಗಳೇ ಇರುವದಿಲ್ಲವೋ, ಯಾವನನ್ನು ಕಾಮ್ಯವಿಷಯಗಳೆಲ್ಲವೂ ಬಿಟ್ಟು ಹೋಗಿರುವವೋ ಅವರಿಗೆ ಕಾಮವಿರುವ ಸಂಭವವಿಲ್ಲ . ಕಾಮ್ಯವಸ್ತುಗಳು ಯಾವನನ್ನು ಬಿಟ್ಟುಹೋಗಿರುತ್ತವೆ ? - ಎಂದರೆ ಯಾವನು ಎಲ್ಲಾ ಕಾಮಗಳನ್ನೂ ಪಡೆದುಕೊಂಡಿರುವನೋ ಅವನನ್ನು . ಆದರೆ ಯಾವನಿಗೆ ತಾನೆ ಎಲ್ಲಾ ಕಾಮಗಳೂ ದೊರಕಿರುತ್ತವೆ ? ಒಂದಲ್ಲದಿದ್ದರೆ ಒಂದು ಪಡೆದುಕೊಳ್ಳಬೇಕಾದದ್ದಾಗಿ ಉಳಿದು ಕೊಂಡೇ ಇರುವದಲ್ಲವೆ ? - ಎಂದರೆ ಹಾಗಲ್ಲ. ಯಾವನು ಆತ್ಮಕಾಮನೋ ಅವನು ಆಪ್ತಕಾಮನಾಗಿರುತ್ತಾನೆ ; 'ಆತ್ಮನೇ ನನಗೆ ಬೇಕು' ಎಂಬ ದೃಢಸಂಕಲ್ಪವು ಯಾವನಿಗೆ ಇರುವದೋ ಅವನಿಗೆ ಮಿಕ್ಕ ಕಾಮಗಳಲ್ಲಿ ವೈರಾಗ್ಯವುಂಟಾಗಿರುತ್ತದೆ. ಆದರೆ ಆತ್ಮನನ್ನೇ ಅರಿತುಕೊಂಡವನಿಗೆ - ಆತ್ಮನು ಎಲ್ಲವನ್ನೂ ವ್ಯಾಪಿಸಿಕೊಂಡು ಎಲ್ಲವೂ ತಾನೇ ಆಗಿ ಬಿಟ್ಟಿರುವದರಿಂದ , ಹೊರಗೆ , ಒಳಗೆ , ಮೇಲೆ , ಕೆಳಗೆ - ಎಲ್ಲೆಲ್ಲಿಯೂ ಆತ್ಮನೇ, ಆತ್ಮನಲ್ಲದ ವಸ್ತುವೇ ಮತ್ತೊಂದಿಲ್ಲ ಎಂಬುದನ್ನು ಅನುಭವಕ್ಕೆ ತಂದುಕೊಂಡಿರು ವವನಿಗೆ - ಯಾವ ಕಾಮವೂ ಇರುವದೇ ಇಲ್ಲ . ಯಾವದನ್ನು ಕೇಳುತ್ತಾನೋ ಯಾವದನ್ನು ಕಾಣುತ್ತಾನೋ , ಯಾವದನ್ನು ಚಿಂತಿಸುತ್ತಿರುತ್ತಾನೋ , ಯಾವದನ್ನು ಅರಿಯುತ್ತಿರುತ್ತಾನೋ ಅದೆಲ್ಲವೂ ಆತ್ಮನೇ ಎಂದಾಗಿರುವಾತನು ಮತ್ತೆ ಯಾವದನ್ನು ತಾನೆ ಅವನು ಕಾಮಿಸಿಯಾನು ? ಆತ್ಮನೇ ಎಲ್ಲವೂ , ಅನಾತ್ಮವೇ ಇಲ್ಲ - ಎಂದಾದವನೇ ನಿಜವಾಗಿ ಅಕಾಮನು.

ಹೀಗೆ ಕಾಮವು ಎಳ್ಳಷ್ಟೂ ಇಲ್ಲವೆಂಬಾತನು ಯಾವ ಫಲಕ್ಕಾಗಿಯೂ ಏನನ್ನೂ ಮಾಡಬೇಕಾದದ್ದು ಇರುವದೇ ಇಲ್ಲ. ಆದ್ದರಿಂದ ಕಾಮಿಯಂತೆ ಅವನ ಪ್ರಾಣಗಳು ಈ ದೇಹವನ್ನು ಬಿಟ್ಟು ಮತ್ತೆಲ್ಲಿಗಾದರೂ ಹೋಗುವದಕ್ಕೆ ಕಾರಣವಿರುವದಿಲ್ಲ. ಆದ್ದರಿಂದ

ಎಲ್ಲವೂ ಆತ್ಮನ್ನಲ್ಲಿಯೇ ಬೆರೆತುಹೋಗಿಬಿಡುತ್ತದೆ . ಸುಷುಪ್ತಿಯಲ್ಲಿ ಹೇಗೆ ಅವಿದ್ಯಾ ಕಾಮಕರ್ಮರಹಿತವಾದ ಸ್ವರೂಪವೊಂದೇ ಉಳಿದುಕೊಂಡಿರುವದೋ ಹಾಗೆ ಈ ಅಕಾಮಿಯಾದ ಜ್ಞಾನಿಗೆ ಅವಿದ್ಯಾಕಾಮಕರ್ಮರಹಿತವಾದ ಬ್ರಹ್ಮಸ್ವರೂಪವೇ ಉಳಿದುಕೊಳ್ಳುತ್ತದೆ . ಅವನು ಬದುಕಿರುವಾಗಲೇ ಬ್ರಹ್ಮವಾಗಿರುವದರಿಂದ ಮುಂದಕ್ಕೆ ಬ್ರಹ್ಮದಲ್ಲಿಯೇ ಸೇರಿಹೋಗುತ್ತಾನೆ. ಕಾಮಿಗಳಂತೆ ಮತ್ತೆ ಶರೀರಧಾರಣೆ ಎಂಬುದು ಅವನಿಗೆ ಇಲ್ಲ. ಅವನು ಮತ್ತೆ ಶರೀರವನ್ನು ಪಡೆದುಕೊಳ್ಳುವ ಸಂಭವವಿಲ್ಲವೆಂಬುದು ಹಾಗಿರಲಿ :

**ಯದಾ ಸರ್ವೇ ಪ್ರಮುಚ್ಯನ್ತೇ ಕಾಮಾ ಯೇಽಸ್ಯ ಹೃದಿ ಶ್ರಿತಾಃ।**
**ಅಥ ಮರ್ತ್ಯೋಽಮೃತೋ ಭವತ್ಯತ್ರ ಬ್ರಹ್ಮ ಸಮಶ್ನುತ ಇತಿ ॥**
**ತದ್ಯಥಾಽಹಿನಿರ್ಲ್ವಯನೀ ವಲ್ಮೀಕೇ ಮೃತಾ ಪ್ರತ್ಯಸ್ತಾ ಶಯೀತ**
**ಏವಮೇವೇದಗ್ಂ ಶರೀರಗ್ಂ ಶೇತೇಽಥಾಯಮಶರೀರೋಽಮೃತಃ**
**ಪ್ರಾಣೋಬ್ರಹ್ಮೈವ ತೇಜ ಏವ ॥** ಬೃ. ೪-೪-೭

ಆತ್ಮಜ್ಞಾನಿಗೆ ಮೊದಲು ಹೃದಯದಲ್ಲಿದ್ದ, ಈ ಲೋಕದ ಮತ್ತು ಪರಲೋಕದ ವಿಷಯಗಳ ಭೋಗವನ್ನು ಕುರಿತ, ಎಲ್ಲಾ ಕಾಮಗಳೂ ಯಾವಾಗ ನಾಶವಾಗುವವೋ ಆಗ , ಅವಿದ್ಯಾಕಾಮಗಳೆಂಬ ಮೃತ್ಯುವಿನಿಂದ ಬಿಡುಗಡೆಯಾದ್ದರಿಂದ ಅವನು 'ಅಮೃತ'ನಾಗುವನು. ಅವಿದ್ಯಾಕಾಮಗಳಿಂದಲೇ ಅಲ್ಲವೆ , ಮರ್ತ್ಯನಾಗಿದ್ದದ್ದು? ಈಗ ಆ ಮೃತ್ಯುವಿನಿಂದ ಬಿಡುಗಡೆಯಾದ್ದರಿಂದ ಅಮೃತಸ್ವಭಾವನೇ ಆಗಿ ಉಳಿದುಕೊಂಡು ಬಿಡುತ್ತಾನೆ. ಶರೀರವೆಂಬುದು ಅವಿದ್ಯೆಯಿಂದಲೇ ಕಲ್ಪಿತವಾದದ್ದಾದ್ದರಿಂದ ಇನ್ನು ಮೇಲೆ ಅವನಿಗೆ ಶರೀರವೇ ಇಲ್ಲ. ಮಿಕ್ಕವರ ದೃಷ್ಟಿಯಿಂದ ಅವನಿಗೆ ಶರೀರವಿರುವಂತೆ ಕಂಡರೂ ತನ್ನ ದೃಷ್ಟಿಯಿಂದ ಅವನು ಅಶರೀರನೇ ಆಗಿರುತ್ತಾನೆ. ವ್ಯವಹಾರ ದೃಷ್ಟಿಯಿಂದ ತೋರುತ್ತಿರುವ ಶರೀರದಲ್ಲಿ ಅವನಿಗೆ ಯಾವ ಅಭಿಮಾನವೂ ಇರುವದೇ ಇಲ್ಲ. ಹಾವು ಆಗ ತಾನೇ ಬಿಟ್ಟ ಪರೆಯು ಹುತ್ತದಲ್ಲಿಯೇ ಒಣಗಿ ಬಿದ್ದಿದ್ದರೂ ಅದರಲ್ಲಿ ಉದಾಸೀನವಾಗಿಯೇ ಹೇಗೆ ಇರುವದೋ ಹಾಗೆಯೇ ಅವಿದ್ಯಾದೃಷ್ಟಿಯಿಂದ ತನ್ನದೆಂದು ತೋರುತ್ತಿದ್ದ ಶರೀರದಲ್ಲಿ ಈಗ ಅವನಿಗೆ ಯಾವ ಅಭಿಮಾನವೂ ಇರುವದೇಇಲ್ಲ . ನೆರಳು ಬೇರೊಂದು ಪದಾರ್ಥವೆಂದು ತಿಳಿದುಕೊಂಡಿದ್ದ ಹುಡುಗನಿಗೆ ಅದು ನೆರಳೇ ಎಂದು ನಿಶ್ಚಯವಾದಮೇಲೆ , ಅದು ಉದ್ದವಾದದ್ದರಿಂದ ಅಥವಾ ಗಿಡ್ಡವಾದದ್ದರಿಂದ , ಅಥವಾ ಕಾಣದೆಯೇ ಹೋದದ್ದರಿಂದ ಹೇಗೆ ಯಾವ ಸುಖದುಃಖವೂ ಆಗದೆ ಇರುವದೋ ಹಾಗೆಯೇ ಜ್ಞಾನಿಯು ಶರೀರದಲ್ಲಿದ್ದರೂ ಇನ್ನು

ಮುಂದಕ್ಕೆ ಅಶರೀರನೇ ಆಗಿರುತ್ತಾನೆ. ಅವನು ಎಂದೆಂದಿಗೂ ಅಮೃತ ಸ್ವಭಾವನಾಗಿಯೇ ಇರುತ್ತಾನೆ, ಇನ್ನು ಮುಂದೆ ಅವನ ಶರೀರಾದಿಗಳೆಲ್ಲಕ್ಕೂ ಇರವನ್ನು ಕೊಡುವ ಪ್ರಾಣವು; ಬ್ರಹ್ಮವೇ ಅವನು; ಎಲ್ಲವನ್ನೂ ಬೆಳಗುವ ತೇಜವೇ ವಿಜ್ಞಾನಜ್ಯೋತಿಯೇ ಅವನು.

ಶರೀರಾದಿಗಳಲ್ಲಿಯೂ ಮನೆಮಠ, ಹೆಂಡಿರುಮಕ್ಕಳು, ಹಣಕಾಸು - ಮುಂತಾದವುಗಳಲ್ಲಿಯೂ ಸ್ವಲ್ಪವೂ ಅಭಿಮಾನವಿಲ್ಲದೆ ಅದೆಲ್ಲ ನೆರಳಿನಂತೆ ಸಾರವಿಲ್ಲದ ವಸ್ತುವೆಂದು ಭಾವಿಸುವವರೂ ಇದಾರೆಯೆ! - ಎಂದು ಲೌಕಿಕಜನರಿಗೆ ಅಚ್ಚರಿಯಾಗ ಬಹುದು. ಆದರೆ ಸವೆಕಲುದುಡ್ಡನ್ನು ಆರಿಸಿಆರಿಸಿ ಇಟ್ಟುಕೊಳ್ಳುತ್ತಿದ್ದ ಪುರಂದರ ದಾಸರು ಭಗವಂತನಲ್ಲಿ ನಿರತಿಶಯಪ್ರೇಮವು ಉಂಟಾದಕೂಡಲೆ ಮನೆಯ ಹೊಸ್ತಿಲ ಮೇಲೆ ತುಳಸಿಯನ್ನಿಟ್ಟು 'ಕೃಷ್ಣಾರ್ಪಣ'ವೆಂದು ನೀರುಬಿಟ್ಟು ಹೋದರೆಂಬುದನ್ನು ಕೇಳುವ ಆಸ್ತಿಕರಿಗೆ ಪರಮಾತ್ಮನಿಗಿಂತ ಬೇರೆ ಯಾವದೊಂದು ಪದಾರ್ಥವೂ ಇಲ್ಲವೆಂಬ ದೃಢನಿಶ್ಚಯವಾದ ಜ್ಞಾನಿಗಳಿಗೆ ಈ ಶರೀರಾದಿಗಳಲ್ಲಿ ಔದಾಸೀನ್ಯ ವುಂಟಾದೀತೆಂಬದರಲ್ಲಿ ಅವಶ್ಯವಾಗಿ ಸಂಭಾವನಾಬುದ್ಧಿಯುಂಟಾಗುವದು. ಆ ಜ್ಞಾನವನ್ನು ಹೇಗೆ ಸಂಪಾದಿಸಿಕೊಳ್ಳಬೇಕೆಂಬುದನ್ನು ಇನ್ನು ಮುಂದೆ ನಾವು ಇನ್ನಷ್ಟು ಒಳಹೊಕ್ಕು ಪರಿಶೀಲಿಸಬೇಕಾಗಿದೆ.

## ೧೩. ಎಚ್ಚರದಲ್ಲಿ ಸುಷುಪ್ತಿ

(22-8-64)

ಜಾಗ್ರತ್ಸ್ವಪ್ನಸುಷುಪ್ತಿಗಳ, ಮತ್ತು ಸೃಷ್ಟಿಸ್ಥಿತಿಪ್ರಲಯಗಳ ವಿಮರ್ಶೆಯಿಂದ ನಮ್ಮ ಶರೀರೇಂದ್ರಿಯಾದಿಗಳು ನಮ್ಮನ್ನು ಮತ್ತೆಮತ್ತೆ ಬಿಟ್ಟಗಲುತ್ತಿರುವವೆಂಬುದು ಸ್ಫುಟವಾಗುತ್ತದೆ. ಹೀಗಿದ್ದರೂ ಇವು ನಮ್ಮ ಸ್ವಭಾವಕ್ಕೆ ಸೇರಿಲ್ಲವೆಂಬುದು ಏಕೆ ಜನರ ಮನಸ್ಸಿಗೆ ಬಾರದೆ ಇರುತ್ತದೆ? - ಎಂಬುದೊಂದು ಆಶ್ಚರ್ಯ. ನಮಗೆ ಅಜ್ಞಾನವು ಸ್ವಭಾವವಾಗಿದೆ, ವಿದ್ಯೆಯು ಮತ್ತೊಬ್ಬರ ಉಪದೇಶದಿಂದ ಬರಬೇಕು. ವಿದ್ಯೆಯು ಹೊಸದೇನನ್ನೂ ಹುಟ್ಟಿಸುವದಿಲ್ಲ; ಇದ್ದದ್ದನ್ನು ಇದ್ದಂತೆ ತೋರಿಸುತ್ತದೆ. ಅಷ್ಟೆ. ಆದ್ದರಿಂದ ತಿಳಿದವರು ಹೇಳಿದರೆ ಅವಶ್ಯವಾಗಿ ವಿಷಯವು ನಮಗೆ ಅನುಭವಕ್ಕೆ ಬರಲೇಬೇಕು. ನಮ್ಮ ಸ್ವರೂಪದ ಯಥಾತ್ಮ್ಯವನ್ನು ಅರಿತುಕೊಳ್ಳುವ ಬಗೆಯನ್ನು

ಭಾಗವತದಲ್ಲಿ ಅಂತರಿಕ್ಷಮುನಿಯು ನಿಮಿರಾಜನಿಗೆ ಹೇಳಿಕೊಟ್ಟಿರುವ ರೀತಿಯನ್ನು ಕೇಳಿರಿ.

ನಿರ್ಗುಣೇ ಕೇವಲೇ ಸಾಕ್ಷಾದಾತ್ಮನೋ ಯದ್ ವಿಪರ್ಯಯಃ।
ಸೈಷಾ ಭಗವತೋ ಮಾಯಾ ಯಯೇದಂ ನಿರ್ಮಮೇ ವಿಭುಃ ॥ ೧ ॥
ಇನ್ದ್ರಿಯಾರ್ಥಭ್ರಮೋ ಜಾಗ್ರತ್ ಸ್ವಪ್ನೋಽನ್ತಃಕರಣಭ್ರಮಃ।
ಸುಪ್ತಂ ತದ್ವಾಸನಾಬೀಜಂ ತುರ್ಯಮೂರ್ತಿಸ್ತದನ್ವಯಃ ॥ ೨ ॥
ವಿಶುದ್ಧಂ ಜ್ಞಾನಮೇವೈಕಂ ಮಾಯಯಾ ಭಾಸತೇ ತ್ರಿಧಾ।
ಗ್ರಾಹಕಾದ್ಯೈರ್ಯದಾ ಸ್ವಪ್ನೇ ತತ್ತತ್ಸಂವಿತ್ಕ್ರಿಯಾಫಲಮ್ ॥ ೩ ॥
ವೈತಥ್ಯಾದ್ ವ್ಯಭಿಚಾರಾಚ್ಚ ಮಾಯಾತ್ರೈವಿಧ್ಯಮಾತ್ಮನಿ।
ಯಥಾ ಮನೋರಥಃ ಸ್ವಪ್ನಃ ಇತ್ಯಾಮೃಶ್ಯೋಪಶಾಮ್ಯತಿ ॥ ೪ ॥

'ನಿರ್ಗುಣವಾಗಿ ಕೇವಲವಾಗಿರುವ ಆತ್ಮತತ್ತ್ವದಲ್ಲಿ ಆಗಿರುವ ಭ್ರಾಂತಿಯೇ ಭಗವಂತನ ಮಾಯೆಯು. ಇದರಿಂದಲೇ ಈ ಜಗತ್ತನ್ನು ಆ ವಿಭುವು ನಿರ್ಮಿಸಿರುತ್ತಾನೆ. ಇಂದ್ರಿಯಗಳು, ವಿಷಯಗಳು – ಎಂಬೀ ಭ್ರಾಂತಿಯೇ ಎಚ್ಚರದವಸ್ಥೆ; ಅಂತಃಕರಣದ ಭ್ರಮೆಯೇ ಸ್ವಪ್ನವು . ಅವುಗಳ ವಾಸನೆಯ ಬೀಜವೇ ನಿದ್ರೆ . ಈ ಮೂರರಲ್ಲಿಯೂ ತುರ್ಯವಿಗ್ರಹನಾದ ಆತ್ಮನು ಸೇರಿಕೊಂಡೇ ಇರುತ್ತಾನೆ, ಗ್ರಾಹ್ಯಗ್ರಾಹಕಫಲ ದಿಂದಲೂ, ಕ್ರಿಯಾಕಾರಕಫಲರೂಪಗಳಿಂದಲೂ ಕನಸಿನಲ್ಲಿಯೂ ಮನೋರಥ ದಲ್ಲಿಯೂ ತೋರುವಂತೆ ಈ ಮೂರು ಬಗೆಯ ಮಾಯೆಯು ಆತ್ಮನಲ್ಲಿ ತೋರುತ್ತಿರುವದು – ಎಂದು ವಿಮರ್ಶಿಸಿಕೊಂಡಾತನು ತನ್ನ ಆತ್ಮನಲ್ಲಿಯೇ ಉಪ ಶಾಂತನಾಗುವನು, ಈ ಅವಸ್ಥೆಗಳು ಬಂದಂತೆಯೂ ಹೋದಂತೆಯೂ ನಮಗೆ ಭಾಸವಾಗುತ್ತಲೇ ಇರುತ್ತದೆ. ಆದರೆ ಈ ಅವಸ್ಥಾತ್ರಯವೆಂಬುದೇ ಒಂದು ಬಗೆಯ ಕನಸಿದ್ದಂತೆ, ಒಂದುಬಗೆಯ ಮನೋರಥವಿದ್ದಂತೆ ಹುಸಿತೋರಿಕೆ, ಒಂದು ಮಾಯೆ – ಎಂಬುದನ್ನು ಮನಗಂಡಾತನೇ ಉಪಶಾಂತನಾಗುವನು. ಶ್ರೀಕೃಷ್ಣನು ಬ್ರಹ್ಮನ ಮಾಯೆಯನ್ನು ಮೀರಿಸುವುದಕ್ಕೆ ವತ್ಸಾಪಹರಣದ ಸಂದರ್ಭದಲ್ಲಿ ಹಸುಗಳು, ಕರುಗಳು , ಗೋಪಾಲರಕರು ಎಲ್ಲರೂ ಆದದ್ದಕ್ಕಿಂತಲೂ ಇದು ಹೆಚ್ಚಿನ ಮಾಯೆಯಾಗಿರುತ್ತದೆ. ಇಲ್ಲಿ ಆ ಪರಮಾತ್ಮನೇ ಅವಸ್ಥಾತ್ರಯವಾಗಿರುತ್ತಾನೆ ಎಂದು ಕೆಲವರಿಗೆ ತೋರಬಹುದು ; ಆದರೆ ಅವಸ್ಥಾತ್ರಯವು ಆ ಪರಮಾತ್ಮನೇ ಆಗಿರುತ್ತದೆ ಎಂಬುದನ್ನು ತಿಳಿದರೆ ಸರಿಯಾಗಿ ತತ್ತ್ವವನ್ನು ತಿಳಿದುಕೊಂಡಂತೆ ಆಗುತ್ತದೆ.

'ಪರಮಾತ್ಮನು ಹೀಗೇಕೆ ನಮಗೆ ಈ ಮಯಾವಿಲಾಸವನ್ನು ತೋರಿಸುತ್ತಿದ್ದಾನೆ ?' ಎಂದು ಶಂಕಿಸಬಾರದು. ಆತನು ಕರಣೆಯಿಂದ ನಮಗೆ ತನ್ನ ಸ್ವರೂಪವನ್ನೇ ಅನುಗ್ರಹಿಸಿದ್ದರೂ ನಾವೇಕೆ ಹೀಗೆ ಅದನ್ನರಿತುಕೊಳ್ಳದೆ ಭ್ರಾಂತರಾಗುತ್ತಿದೇವೆಯೊ ! – ಎಂದು ಆಶ್ಚರ್ಯಪಡಬೇಕು. ಸುಷುಪ್ತಿ, ಏನನ್ನೂ ಅರಿಯದಿರುವ ನಿದ್ರೆ – ಎಂದು ನಾವು ಭಾವಿಸಿರುವದು ಒಂದು ಅವಸ್ಥೆಯೆ ? ನಿಜವಾಗಿ ಆಗ ನಮ್ಮ ಸ್ವರೂಪವು ಹೇಗಿರುತ್ತದೆ ? ಅಲ್ಲಿ ನಿಜವಾಗಿ ಪ್ರಪಂಚದ ಬೀಜವಿದೆಯೆ ? ಬೀಜದಿಂದ ಮರವು ಹುಟ್ಟುವದೆಂಬುದೇ ಒಂದು ಸೋಜಿಗ. ಅದರಲ್ಲಿ ಹಸುರಾದ ಎಲೆ, ಕೆಂಪು ಹಳದಿ ಅಥವಾ ಬಿಳಿಯ ಹೂವು ಎಲ್ಲಿ ಹೇಗೆ ಅಡಗಿತ್ತು? ಅಷ್ಟು ವಿಸ್ತಾರವಾದ ಅಷ್ಟು ಎತ್ತರದ ಮರವು ಹೇಗೆ ಅದರಿಂದ ಹೊರಹೊಮ್ಮಿತು ? – ಎಂಬುದೇ ಒಂದುಬಗೆಯ ಮಾಯೆಯೆನ್ನಬಹುದು. ಆದರೆ ಸುಷುಪ್ತಿಯಲ್ಲಿ ಬೀಜವಿಲ್ಲದೆಯೇ ಎಚ್ಚರಕನಸುಗಳಲ್ಲಿ ಅಂಥ ವಿಶಾಲವಾದ ವಿಚಿತ್ರವಾದ, ಪ್ರಪಂಚವು ಎದ್ದುಕೊಂಡದ್ದು ಅದಕ್ಕಿಂತಲೂ ಹೆಚ್ಚಿನ ಮಾಯೆಯಲ್ಲವೆ ? ನಿಷ್ಕರ್ಮಸ್ವರೂಪನೇ ಆಗಿರುವ ಈ ಆತ್ಮನು

**ಇತ್ಥಂ ಕರ್ಮಗತೀರ್ಗಚ್ಛನ್ ಬಹ್ವಭದ್ರವಹಾಃ ಪುಮಾನ್ ।**
**ಆಭೂತಸಂಪ್ಲವಾತ್ ಸರ್ಗಪ್ರಲಯಾವಶ್ನುತೇಽವಶಃ ॥**

ಹೀಗೆ ವಿವಿಧವಾದ ಕರ್ಮಗತಿಗಳನ್ನೂ ಅನರ್ಥಗಳನ್ನೂ ಹೊಂದುತ್ತಾ ಜನ್ಮಮರಣಗಳನ್ನು ಪಡೆಯುತ್ತಾ ಇರುವದು ಎಂಥ ಮಾಯೆಯದು !

**ಏಷಾ ಮಾಯಾ ಭಗವತಃ ಸರ್ಗಸ್ಥಿತ್ಯನ್ತಕಾರಿಣೀ ।**
**ತ್ರಿವರ್ಣಾ ವರ್ಣಿತಾಽಸ್ಮಾಭಿಃ ಕಿಂ ಭೂಯಃ ಶ್ರೋತುಮಿಚ್ಛಸಿ ॥**

ಹೀಗೆ ತ್ರಿಗುಣಾತ್ಮಕವಾದ ಭಗವನ್ಮಾಯೆಯು ಸೃಷ್ಟಿಸ್ಥಿತಿಲಯಗಳನ್ನುಂಟು ಮಾಡುತ್ತಿರುವದೆಂಬುದನ್ನು ಅಂತರಿಕ್ಷರ್ಷಿಗಳು ಹೇಳಿರುತ್ತಾರೆ.

ಸುಷುಪ್ತಿಯಲ್ಲಿರುವ ನಮ್ಮ ನಿಜವಾದ ಸ್ವರೂಪವನ್ನು ಯಾಜ್ಞವಲ್ಕ್ಯರು ವರ್ಣಿಸಿರುವದನ್ನು ಕೇಳೋಣ :

**ಸಲಿಲ ಏಕೋ ದ್ರಷ್ಟಾದ್ವೈತೋ ಭವತ್ಯೇಷ ಬ್ರಹ್ಮಲೋಕಃ ಸಮ್ರಾಡಿತಿ ಹೈನಮನುಶಶಾಸ ಯಾಜ್ಞವಲ್ಕ್ಯ ಏಷಾಽಸ್ಯ ಪರಮಾ ಗತಿರೇಷಾಽಸ್ಯ ಪರಮಾ ಸಂಪದೇಷೋಽಸ್ಯ ಪರಮೋ ಲೋಕ ಏಷೋಽಸ್ಯ ಪರಮ ಆನನ್ದ ಏತಸ್ಯೈವಾನನ್ದಸ್ಯ ಅನ್ಯಾನಿ ಭೂತಾನಿ ಮಾತ್ರಾಮುಪಜೀವನ್ತಿ ॥**

ಬೃ. ೪–೩–೩೨

ಸುಷುಪ್ತಿಯಲ್ಲಿ ನಮ್ಮ ಸ್ವರೂಪವು ಸಲಿಲ - ತಿಳಿನೀರಿನಂತೆ ಸ್ವಚ್ಛವಾಗಿರುತ್ತದೆ. ಅದೇ ರೂಪವು ಈಗಲೂ ಇದ್ದರೂ ಅವಿದ್ಯೆಯಿಂದಾಗಿರುವ ಇಂದ್ರಿಯಗಳು ತಂದು ತಂದು ಹಾಕುತ್ತಿರುವ ವಿಷಯಗಳ ಕೊಳೆಯಿಂದ ಕಲ್ಮಷವಾಗಿರುವಂತೆ ಕಾಣಿಸುತ್ತಿರುತ್ತದೆ. ಆಗ ಏಕನು - ಅವನು ತಾನೊಬ್ಬನೇ ಇರುತ್ತಾನೆ ; ಈಗಲೂ ಅವನು ಒಬ್ಬನೇ ಇದ್ದರೂ ಅವಿದ್ಯೆಯಿಂದ ಕಲ್ಪಿತವಾಗಿರುವ ಚೇತನಾಚೇತನಗಳ ಪ್ರಪಂಚವು ನಮ್ಮ ಜೊತೆಗೆ ಇದ್ದುಕೊಂಡಿರುವದೆಂಬ ಭಾವನೆಯುಂಟಾಗಿಬಿಟ್ಟಿರುತ್ತದೆ. ಆಗ ದ್ರಷ್ಟೃವಾಗಿರುತ್ತಾನೆ ; ಎಂದೆಂದಿಗೂ ಲೋಪವಿಲ್ಲದ ಚೈತನ್ಯದೃಷ್ಟಿಯಿಂದೊಡಗೂಡಿದ ಸಾಕ್ಷಿ ಸ್ವಭಾವದವರಾಗಿರುತ್ತೇವೆ. ಈಗಲೂ ಅದೇ ಸಾಕ್ಷಿ ಸ್ವಭಾವವು ಇರುತ್ತಿದ್ದರೂ ಅವಿದ್ಯೆಯಿಂದ ಕಲ್ಪಿತವಾಗಿರುವ ಅಹಂಕಾರದ ಅಧ್ಯಾಸದಿಂದ ಅನಿತ್ಯವಾದ ದೃಷ್ಟಿ, (ನೋಟ) , ಶ್ರವಣ (ಕೇಳುವಿಕೆ) , ಮನನ (ವಿಚಾರ), ವಿಜ್ಞಾನ (ತಿಳಿದುಕೊಳ್ಳುವಿಕೆ) - ಮುಂತಾದ ಸ್ವಭಾವದಿಂದ ಕೂಡಿ ಆಗಾಗ್ಗೆ ನೋಡುವದು, ನೋಡದೆ ಇರುವದು ; ಕೇಳುವದು, ಕೇಳದೆ ಇರುವದು ; ಮನನ ಮಾಡುವದು, ಮನನ ಮಾಡದೆ ಇರುವದು - ಇಂಥ ಸ್ವಭಾವದವರೆಂಬ ಭ್ರಾಂತಿಯಾಗಿ ಬಿಟ್ಟಿದೆ. ನಾವು ನಿತ್ಯದ್ರಷ್ಟೃವೆಂಬುದನ್ನು ಮರೆತು ಅಹಂಪ್ರತ್ಯಯಕ್ಕೆ ವಿಷಯರೆಂಬ ಭಾವನೆಯನ್ನು ಮೇಲೆಹಾಕಿಕೊಂಡುಬಿಟ್ಟಿರುತ್ತೇವೆ. ಆಗ ಅದ್ವೈತರು, ನಮಗೆ ದೃಶ್ಯವಾಗಿರುವ ಎರಡನೆಯದು ಯಾವದೂ ಇಲ್ಲವೇಇಲ್ಲ - ಎಂಬುದು ನಮ್ಮೆಲ್ಲರ ಅನುಭವದಲ್ಲಿದ್ದರೂ ಇಲ್ಲವಾಗಿರುತ್ತದೆ ; ಈಗಲೂ ಅದೇ ಸ್ವರೂಪವಿದೆಯಾದರೂ ಕನಸಿನಲ್ಲಿ ಕಾಣಿಸುತ್ತಿರುವಂತೆ ದ್ವೈತಪ್ರಪಂಚವೂ ನಮ್ಮೆದುರಿಗಿದೆ, ಅದರೊಳಗೆ ಇರುವ ಅನೇಕ ಜೀವರ ನಡುವೆ 'ನಾನೂ ಒಬ್ಬನು' ಎಂದೇ ಬಗೆಯುತ್ತಿದ್ದೇವೆ ! ಆದ್ದರಿಂದ ಸ್ವಭಾವದಿಂದ ಅಮೃತವೂ ಅಭಯವೂ ಆಗಿರುವ ನಮ್ಮ ಸ್ವರೂಪವೇ ಈಗ ಜನನಮರಣಗಳಿಂದೊಡಗೂಡಿರುವಂತೆಯೂ ಭಯದ ಮಧ್ಯದಲ್ಲಿರುವಂತೆಯೂ ಭಾಸವಾಗುತ್ತಿದೆ. ಅದೇ ಬ್ರಹ್ಮಲೋಕವು ; ಹಿರಣ್ಯಗರ್ಭಬ್ರಹ್ಮನ ಸತ್ಯಲೋಕವೆಂದೇನೂ ಅಭಿಪ್ರಾಯವಲ್ಲ, ಬ್ರಹ್ಮವೆಂಬ ಲೋಕವದು. ಆ ಬ್ರಹ್ಮಲೋಕಕ್ಕಿಂತ ಆಚೆಗಿನ ಗತಿಯಿನ್ನೊಂದಿಲ್ಲ ; ದೇವತ್ವಾದಿಗತಿಗಳೆಲ್ಲ ಅದಕ್ಕಿಂತ ಈಚಿನವೇ ; ಅದೇ ಪರಮಗತಿಯು, ಅದನ್ನರಿತಿರುವವರಿಗೆ ಈಗಲೂ ಅದೇ ಗತಿಯು ದೊರಕಿರುತ್ತದೆ. ಅದೇ ಪರಮಸಂಪತ್ತು, ಯಾವ ಅಣಿಮಾದಿಸಿದ್ಧಿಗಳನ್ನು ಪಡೆದುಕೊಂಡರೂ ಅದು ಕೃತಕವೇ, ಆದರೆ ಈ ಸೌಷುಪ್ತಸಂಪತ್ತು ಸ್ವಾಭಾವಿಕವಾಗಿರುವದಾದ್ದರಿಂದ ಎಲ್ಲಕ್ಕೂ ಹೆಚ್ಚಿನದು ; ಅನುಭವಾನುಸಾರವಾಗಿ

ನೋಡಿಕೊಂಡರೆ ಅದು ಈಗಲೂ ಇದೆ. ಇದೇ ಪರಮಲೋಕವು , ಕರ್ಮದಿಂದ ಪಡೆದುಕೊಳ್ಳುವ ಲೋಕಗಳು ಕರ್ಮವು ಸವೆಯುತ್ತಲೂ ತಾವೂ ಮರೆಯಾಗಿಬಿಡುತ್ತವೆ. ಆದರೆ ಸುಷುಪ್ತಿಯಲ್ಲಿ ನಾವು ಪಡೆಯುವ ಆತ್ಮಲೋಕವು ಕರ್ಮಜನ್ಯವಲ್ಲವಾದ್ದರಿಂದ ಆತ್ಯಂತಿಕವಾಗಿರುತ್ತದೆ; ಆದ್ದರಿಂದ ಅದು ಪರಮಲೋಕವು. ಈ ಸೌಷುಪ್ತಾನಂದವೇ ಪರಮಾನಂದವು. ಏಕೆಂದರೆ ಅಲ್ಲಿ ಎರಡನೆಯದೇನೂ ಕಾಣಿಸುತ್ತಿರುವದಿಲ್ಲ, ಕೇಳಿಸುತ್ತಿರುವದಿಲ್ಲ ; ಯಾವದೂ ಜ್ಞಾನಕ್ಕೆ ವಿಷಯವಾಗಿರುವದಿಲ್ಲ, ಅಲ್ಲಿ ವಿಷಯವಿಷಯಿಭಾವರೂಪವಾದ ಅನುಭವವೇ ಇಲ್ಲ. ಈಗಲೂ ಆ ಆನಂದವು ಇದೆಯಾದರೂ ಅವಿದ್ಯೆಯಿಂದ ಅದು ನಮ್ಮ ಲಕ್ಷ್ಯದಲ್ಲಿಲ್ಲ . ಅದು ನಮ್ಮ ಸ್ವರೂಪವೇ ಆಗಿರುತ್ತದೆ . ಇದೂ ಅಲ್ಲದೆ ಎಚ್ಚರದಲ್ಲಿ ಜೀವರುಗಳು ಅನುಭವಿಸುತ್ತಿರುವ ವಿಷಯಾನಂದಗಳೆಂಬಿವೂ ವಿಷಯೇಂದ್ರಿಯಗಳ ಸಂಯೋಗದ ಕಾಲಕ್ಕೆ ಅಭಿವ್ಯಕ್ತವಾಗುವ ಮೂಲಾನಂದಾಮೃತದ ತುಂತುರುಗಳೇ ಆಗಿವೆ. ಆ ಜೀವರುಗಳೆಂಬವರೂ ಅದೇ ಆನಂದಸ್ವರೂಪದಲ್ಲಿ ಅವಿದ್ಯೆಯಿಂದ ವಿಂಗಡವಾಗಿರುವಂತೆ ತೋರುವ ಅಂಶಗಳೇ ಆಗಿದ್ದು ವಿಷಯೇಂದ್ರಿಯ ಸಂಸರ್ಗದಿಂದ ಹೊರತೋರುವ ಆನಂದವನ್ನು ಅನುಭವಿಸುವೆವೆಂದು ಭ್ರಮಿಸುತ್ತಿರುತ್ತಾರೆ. ನಿಜವಾಗಿ ನೋಡಿದರೆ ನಮ್ಮಗಳಿಗೆ ವ್ಯವಹಾರದಲ್ಲಿ ತೋರುತ್ತಿರುವದೆಲ್ಲವೂ ಚೇತನವಾಗಿರಲಿ, ಅಚೇತನವಾಗಿರಲಿ - ಎಲ್ಲವೂ ನಿಸ್ತರಂಗವಾದ ಅದ್ವಿತೀಯಾನಂದಾಮೃತ ಸಾಗರವೇ ಆಗಿರುತ್ತದೆ. ಆದರೂ ತಿಳಿವಳಿಕೆಯಿಲ್ಲದ ಜನರ ಭಾಗಕ್ಕೆ ಇದು ದುಃಖಮಯಸಂಸಾರವಾಗಿರುತ್ತದೆ !

ಸರಿಯಾಗಿ ನೋಡಿದರೆ ಪರಮಾತ್ಮನು ನಮಗೆ ತನ್ನ ಸ್ವರೂಪವನ್ನು ಎಂದೆಂದಿಗೂ ಧಾರೆಯೆರೆದುಕೊಟ್ಟುಬಿಟ್ಟಿರುತ್ತಾನೆ. ಇದನ್ನು ಮನಗಾಣಬೇಕಾದರೆ ಸುಷುಪ್ತಿಯಿಂದ ಎಚ್ಚರಕ್ಕೂ , ಎಚ್ಚರದಿಂದ ಸುಷುಪ್ತಿಗೂ ನಾವು ಹೋಗೀಬಂದೂ ಮಾಡಿದಂತೆ ಭಾವಿಸಿಕೊಳ್ಳಬೇಕು. ಎಲ್ಲಾ ಅವಸ್ಥೆಗಳಲ್ಲಿಯೂ ಇರುವ ನಮ್ಮ ನಿಜವಾದ ಸ್ವರೂಪವನ್ನೇ ಲಕ್ಷ್ಯವಾಗಿಟ್ಟುಕೊಂಡು ಚಿತ್ತವನ್ನು ಅದರಲ್ಲಿಯೇ ಕರಗಿಸಿಕೊಳ್ಳಬೇಕು. ಆಗ ನಮಗೆ ಒಂದು ಅಲೌಕಿಕವಾದ ಸಮಾಧಿಯು ದೊರಕಿಬಿಡುತ್ತದೆ. 'ಸಮಾಧಿ' ಎಂದರೆ ಪಾತಂಜಲದರ್ಶನದಲ್ಲಿ ಹೇಳಿರುವ ಚಿತ್ತವೃತ್ತಿನಿರೋಧವಲ್ಲ ; ಆತ್ಮನಲ್ಲಿ ಚಿತ್ತವೂ ಚಿತ್ತದೃಶ್ಯಗಳೂ ಎಲ್ಲವೂ ಒಂದಾಗಿಬಿಡುವ ಅಪೂರ್ವಸ್ಥಿತಿಯದು ! ನಮಗೆ ಸಮಾಧಿಯು ಆಗ ಬರುತ್ತದೆ ಎನ್ನುವದಕ್ಕಿಂತಲೂ ನಮ್ಮ ಸ್ವರೂಪವಾಗಿರುವ ಆತ್ಮನೇ 'ಸಮಾಧಿ' ಎನ್ನುವದು ಯುಕ್ತ ; ಏಕೆಂದರೆ ಆತ್ಮನಲ್ಲಿ ಮನಸ್ಸನ್ನು ಸರಿಯಾಗಿಟ್ಟರೆ ಸಾಕು,

ಅದು ಆತ್ಮನೇ ಆಗಿ ಅವನಲ್ಲಿ ಪ್ರಶಾಂತವಾಗಿಬಿಟ್ಟಿರುತ್ತದೆ ! ಆ ದೃಷ್ಟಿಯಿಂದ ನೋಡಿದಾಗ ನಾವು ಎಚ್ಚರದಿಂದ ಸುಷುಪ್ತಿಗೂ ಸುಷುಪ್ತಿಯಿಂದ ಎಚ್ಚರಕ್ಕೂ ಹೋಗಿಬರುತ್ತಿದೇವೆಂಬುದೇ ಸರಿಯಲ್ಲ ; ಏಕೆಂದರೆ ನಾವು 'ಎಚ್ಚರ'ವೆಂದು ಈಗ ಕರೆದುಕೊಳ್ಳುತ್ತಿರುವ ಸ್ಥಿತಿಯು ಆ ದೃಷ್ಟಿಯಿಂದ ಅವಿದ್ಯಾನಿದ್ರೆಯಾಗಿರುತ್ತದೆ ; ಈಗ ನಾವು 'ತನಿನಿದ್ರೆ' ಎಂದುಕೊಳ್ಳುತ್ತಿರುವ ಸ್ಥಿತಿಯೇ ಆ ದೃಷ್ಟಿಯಿಂದ ಅನುಭವಕ್ಕೆ ತಂದುಕೊಂಡಾಗ ನಿಜವಾದ ಎಚ್ಚರ. ಆಗಲೇ ಅಲ್ಲವೆ, ನಿತ್ಯಶುದ್ಧಬುದ್ಧಸ್ವರೂಪವಾದ ಬ್ರಹ್ಮವು ನಮ್ಮ ಆತ್ಮನೆಂಬ ಅರಿವು ಬಂದು ವ್ಯವಹಾರದ ಮರವೆಯನ್ನೆಲ್ಲ ತೊಲಗಿಸುವದು ? ಒಂದಾನೊಂದು ಇಂಗ್ಲಿಷು ಪತ್ರಿಕೆಯಲ್ಲಿ ಒಬ್ಬ ಸಾಧುಗಳ ಕಥೆಯನ್ನು ನಾನು ಓದಿದ್ದೆ. ಸಾಧುಗಳ ಬಳಿಗೆ ಬೇರೊಂದು ಊರಿನ ಜನರು ಕೆಲವರು ಬಂದು 'ಸ್ವಾಮಿ, ನಾವು ಇಂಥ ಊರಿನಿಂದ ಬಂದಿದೇವೆ, ಅಲ್ಲಿಯ ಜನರು ಬಹಳ ಕೆಟ್ಟವರು. ಇಲ್ಲಿಯ ಜನರು ಹೇಗೆ ? ' ಎಂದು ಕೇಳಿದ್ದಕ್ಕೆ ಅವರು 'ಇಲ್ಲಿಯವರೂ ಹಾಗೆಯೇ ! ' ಎಂದರಂತೆ. ಬಳಿಕ ಮತ್ತೊಂದು ಊರಿನವರು ಬಂದು 'ನಮ್ಮ ಊರು ಇಂಥದ್ದು ; ಅಲ್ಲಿಯ ನೆರೆಯವರೆಲ್ಲ ಬಲು ಒಳ್ಳೆಯ ಜನ. ಅವರನ್ನು ಬಿಟ್ಟಗಲುವದಕ್ಕೇ ನಮಗೆ ಮನಸ್ಸು ಬರಲಿಲ್ಲ ; ಇಲ್ಲಿಯ ಜನರು ಹೇಗೆ ?' ಎನ್ನಲು ಸಾಧುಗಳು 'ಇವರೂ ಹಾಗೆಯೇ ' ಎಂದರಂತೆ ! ಏಕಾಂತದಲ್ಲಿ ಶಿಷ್ಯರು ತಮ್ಮ ಅಭಿಪ್ರಾಯ ವೇನೆಂದು ಕೇಳಿದ್ದಕ್ಕೆ ಸಾಧುಗಳು 'ಈವೂರವರನ್ನು ಯಾರು ಹೇಗೆ ಭಾವಿಸುತ್ತಾರೋ, ಅವರಿಗೆ ಇವರು ಹಾಗೆಯೇ ಇರುತ್ತಾರೆ' ಎಂದರಂತೆ. ಜಾಗ್ರತ್ಸುಷುಪ್ತಿಗಳ ವಿಷಯವೂ ಹೀಗೆಯೇ ಇದೆ. ಅವುಗಳನ್ನು ನಾವು ಹೇಗೆ ಕಾಣುತ್ತೇವೋ ಹಾಗೆಯೇ ಅವು ನಮಗೆ ಭಾಸವಾಗುತ್ತವೆ. ಎಚ್ಚರದಲ್ಲಿರುವ ಪ್ರಮಾತೃವಿನ ಕಣ್ಣಿಂದ ನೋಡಿದಾಗ ಎಚ್ಚರವು ಅರಿವಿನ ಅವಸ್ಥೆ, ಸುಷುಪ್ತಿಯು ಮರವೆಯ ಅವಸ್ಥೆ. ಎಲ್ಲಕ್ಕೂ ಒಳಗಿರುವ ಸ್ವಯಂಜ್ಯೋತಿಯಾದ ಆತ್ಮಚೈತನ್ಯದೃಷ್ಟಿಯಿಂದ ನೋಡಿದಾಗ ಎಲ್ಲದರಲ್ಲೂ ಎಂದೆಂದಿಗೂ ನಿತ್ಯಶುದ್ಧಬುದ್ಧಮುಕ್ತಸ್ವಭಾವನಾದ ಅದ್ವಿತೀಯಾತ್ಮನೊಬ್ಬನೇ ಇರುತ್ತಾನೆ. ಜಾಗ್ರದವಸ್ಥೆಯೂ ಇಲ್ಲ, ಸುಷುಪ್ತ್ಯವಸ್ಥೆಯೂ ಇಲ್ಲ !

ಒಬ್ಬರು ಸಾಧುಗಳು 'ನಾವು ಶಿಷ್ಯರಿಗೆ ಅತ್ಯಲ್ಪಕಾಲದಲ್ಲಿ ಮೋಕ್ಷವನ್ನು ಕೊಡಿಸುತ್ತೇವೆ ' ಎಂದರಂತೆ ; ಆದರೆ ಮೋಕ್ಷವು ಒಬ್ಬರು ಮತ್ತೊಬ್ಬರಿಗೆ ಕೊಡಬೇಕಾದ ಒಡವೆಯೇ ಅಲ್ಲ. ನಿಜವಾಗಿ ನೋಡಿದರೆ ಪರಮಾತ್ಮನು ನಮಗೆಲ್ಲ ಎಂದೆಂದಿಗೂ ನಿತ್ಯಮುಕ್ತಸ್ವರೂಪವನ್ನೇ ಕೊಟ್ಟುಬಿಟ್ಟಿರುತ್ತಾನೆ. ಆದರೆ ಸಾಮಾನ್ಯರಾದ

ಜನರು 'ಕಾಮಮಯ ಏವಾಯಂ ಪುರುಷಃ ' ಎಂಬ ಶ್ರುತಿಯಂತೆ ಕಾಮಕ್ರೋಧಾದಿಗಳಿಗೆ ಪರವಶರಾಗಿರುವದರಿಂದ ತಮ್ಮ ಪರಮಾರ್ಥಸ್ವರೂಪವನ್ನು ಕಂಡುಕೊಳ್ಳಲಾರದೆ ಇರುತ್ತಾರೆ. ಅವರ ಕಾಮವು ಎಂದಿಗೂ ಮುಗಿಯುವಂತೆ ಇಲ್ಲ. ಇಂಗ್ಲಿಷು ಭಾಷೆಯಲ್ಲಿ ವಾಕ್ಯವು ಪೂರ್ಣವಾಗದ ಸ್ಥಿತಿಯನ್ನು ತೋರಿಸುವದಕ್ಕೆ ಉಪವಾಕ್ಯಗಳಿಗೆ ಹಾಕುವ ಲೇಖನಚಿಹ್ನೆಯನ್ನು 'ಕಾಮ' (Comma) ಎಂದು ಕರೆಯುತ್ತಾರೆ ; ವಾಕ್ಯವು ಮುಗಿದರೆ ಅದನ್ನು ಫುಲ್‌ಸ್ಟಾಪ್ 'ಪೂರ್ಣವಿರಾಮ' (Full-stop) ಎನ್ನುತ್ತಾರೆ. ಅಜ್ಞರಾದವರ ಮನಸ್ಸಿನ ಕೇಳಿಕೆಗಳು ಎಂದಿಗೂ ಪೂರ್ಣವಾಗುವದಿಲ್ಲವಾದ್ದರಿಂದ ಅವರ ಜೀವನವು 'ಕಾಮಮಯ'ವೇ ಆಗಿರುತ್ತದೆ. ಜ್ಞಾನಿಗಳು ತಮ್ಮ ಪರಮಾರ್ಥಸ್ವರೂಪವನ್ನು ಕಂಡುಕೊಂಡಿರುವದರಿಂದ 'ಆಪ್ತಕಾಮ' (ಕಾಮಗಳೆಲ್ಲವನ್ನೂ ಪಡೆದುಕೊಂಡಿರುವದರಿಂದ) ಅವರ ಹೇಳಿಕೆಗಳಿಗೆ 'ಪೂರ್ಣ ವಿರಾಮ'ವು ದೊರಕಿರುತ್ತದೆ.

'ಸುಷುಪ್ತಿ' ಎಂದು ಜನರು ಕರೆದುಕೊಳ್ಳುತ್ತಿರುವ ಅವಸ್ಥೆಯಲ್ಲಿ ಜೀವರನ್ನು ಭಗವಂತನು ಪ್ರತಿದಿನವೂ ಅತ್ತಿತ್ತ ಓಡಿಹೋಗುತ್ತಿರುವ ಮಕ್ಕಳನ್ನು ನೀರಿನಲ್ಲಿ ಮುಳುಗಿಸಿ ಸ್ನಾನಮಾಡಿಸುವಂತೆ - ತನ್ನ ಆನಂದಾಮೃತಸಾಗರದಲ್ಲಿ ಮುಳುಗಿಸಿ ವಿಶ್ರಾಂತಿಯನ್ನು ಕೊಡುತ್ತಿದ್ದರೂ ಎಚ್ಚರುತ್ತಲೂ ಅವರ ಮನಸ್ಸು ನಾಯಿಯ ಬಾಲದಂತೆ ಡೊಂಕುಡೊಂಕಾಗಿ ವಿಷಯೋಪಭೋಗಗಳ ಕಾಮಗಳಿಗೇ ವಶವಾಗಿರುತ್ತದೆ. ಆದ್ದರಿಂದ ಜ್ಞಾನದಿಂದ ಇದನ್ನು ಹೇಗೆ ಬಿಡಿಸಿಕೊಳ್ಳಬೇಕೆಂಬುದನ್ನು ವಿಚಾರಮಾಡಬೇಕಾಗಿರುತದೆ.

# ೧೪. ವಿಜ್ಞಾನಮಯನ ಪಾರಮೈಶ್ವರ್ಯ

(23-8-64)

ಯಾಜ್ಞವಲ್ಕ್ಯರು ಜನಕನಿಗೆ ಹೇಳಿಕೊಟ್ಟಂತೆ ಆತ್ಮಜ್ಯೋತಿಯಿಂದಲೇ ಎಲ್ಲ ವ್ಯವಹಾರವೂ ಸಾಗುತ್ತಿರುತ್ತದೆ. ಆತ್ಮನ ಜ್ಯೋತಿಯು ಇಂದ್ರಿಯಗಳ ಮೂಲಕವೇ ಅಲ್ಲದೆ , ಮನಸ್ಸಿನ ಮೂಲಕವೂ ಹೊರಕ್ಕೆ ಸೂಸಿಕೊಂಡು ನಮ್ಮ ವ್ಯವಹಾರವನ್ನು ಸಾಗಿಸುವ ಸಾಧನವಾಗಿರುತ್ತದೆ. ಅದರೊಳಗೆ ಇದ್ದುಕೊಂಡಿರುವ ಸಾಕ್ಷಿಯಾದ ಸ್ವಯಂಜ್ಯೋತಿಯಾದ ಆತ್ಮನು ಸುಷುಪ್ತಿಯಲ್ಲಿ ಅದ್ವೈತಬ್ರಹ್ಮರೂಪದಿಂದಲೇ

ಇದ್ದುಕೊಂಡಿರುತ್ತಾನೆಂದು ತಿಳಿಸಿದ್ದಾಗಿದೆ. ಉಪಸಂಹಾರದಲ್ಲಿ ಯಾಜ್ಞವಲ್ಕ್ಯರು ಆ ರೂಪವನ್ನು ಕುರಿತು ಹೇಳಿರುವದಿದು :

> **ಸ ವಾ ಏಷ ಮಹಾನಜ ಆತ್ಮಾ ಯೋಽಯಂ ವಿಜ್ಞಾನಮಯಃ ಪ್ರಾಣೇಷು ಯ ಏಷೋಽನ್ತರ್ಹೃದಯ ಆಕಾಶಸ್ತಸ್ಮಿನ್ ಶೇತೇ ಸರ್ವಸ್ಯ ವಶೀ ಸರ್ವಸ್ಯೇಶಾನಃ ಸರ್ವಸ್ಯಾಧಿಪತಿಃ ಸ ನ ಸಾಧುನಾ ಕರ್ಮಣಾ ಭೂಯಾನ್ನೋ ಏವಾಸಾಧುನಾ ಕನೀಯಾನೇಷ ಸರ್ವೇಶ್ವರ ಏಷ ಭೂತಾಧಿಪತಿರೇಷ ಭೂತಪಾಲ ಏಷ ಸೇತುರ್ವಿಧರಣ ಏಷಾಂ ಲೋಕಾನಾಮಸಂಭೇದಾಯ ||**

ಈ ಇಂದ್ರಿಯಗಳ ನಡುವೆ ಇರುವ ವಿಜ್ಞಾನಮಯಾತ್ಮನಿದಾನಲ್ಲ, ಇವನು 'ಹೃದಯದೊಳಗಿನ ಆಕಾಶದಲ್ಲಿರುತ್ತಾನೆ' ಎಂದರೆ ಚಿದಾಕಾಶರೂಪನಾದ ಪರಮಾತ್ಮನ ರೂಪದಿಂದಲೇ ಇರುತ್ತಾನೆ. ಛಾಂದೋಗ್ಯದಲ್ಲಿ ಒಂದುಕಡೆ ಹೇಳಿರುವಂತೆ ಈ ಒಂದೇ 'ಆಕಾಶವು' ಮೂರು ರೂಪದಿಂದ ಕಾಣಿಸುತ್ತಿರುತ್ತದೆ. ನಮ್ಮ ಶರೀರದ ಹೊರಗಿರುವ **ಭೂತಾಕಾಶವು** ಸಂಸಾರದುಃಖಕ್ಕೆಲ್ಲ ಆಶ್ರಯವಾಗಿರುತ್ತದೆ. ಇಂದ್ರಿಯಗಳಿಂದ ವಿಷಯಗಳನ್ನು ಭೋಗಿಸುತ್ತಲೂ ಪರಿಚ್ಛಿನ್ನವಾದ ಸುಖದುಃಖಗಳನ್ನು ಅನುಭವಿಸುತ್ತಲೂ ಇರುವ ಜಾಗರಿತಾವಸ್ಥೆಯ ಆಕಾಶವದು. ಈ ಶರೀರದ ಒಳಗೆ ವಿಷಯಗಳಿಲ್ಲದೆಯೇ ಪ್ರಪಂಚರೂಪದಲ್ಲಿ ಹರಡಿಕೊಂಡು ತೋರುವ **ಚಿತ್ತಾಕಾಶವು** ಇನ್ನೊಂದು. ಅಲ್ಲಿ ಸುಖದುಃಖಗಳ ವೇಗವು ಅಷ್ಟು ಪ್ರಬಲವಲ್ಲವೆಂದು ಜಾಗ್ರದೃಷ್ಟಿಯಿಂದ ಹೇಳಬಹುದು. ಇನ್ನೂ ಒಳಗಡೆಯಲ್ಲಿರುವ ಸೌಷುಪ್ತಾವಸ್ಥೆಯಲ್ಲಿ ತೋರಿಕೊಳ್ಳುವ **ಚಿದಾಕಾಶವು** ಸರ್ವದುಃಖನಿವೃತ್ತಿರೂಪವಾಗಿರುತ್ತದೆ. ಇದನ್ನೇ 'ಪರಮಾನಂದ'ವೆಂದು ಯಾಜ್ಞವಲ್ಕ್ಯರು ವರ್ಣಿಸಿರುವರು. ಶ್ರುತಿಯಲ್ಲಿ 'ಆತ್ಮನ ಆನಂದ' ಎಂದು ಕರೆದಿದ್ದರೂ ಅಲ್ಲಿ ಆನಂದಾನಂದಿಗಳಿಗೆ ಬೇಧವಿರುವದಿಲ್ಲ. ಅದೇ ಆನಂದವೇ ಒಂದೊಂದು ಅವಸ್ಥೆಯಲ್ಲಿ ಒಂದೊಂದು ರೂಪವನ್ನು ತಳೆದಿರುವಂತೆ ಅವಿದ್ಯೆಯಿಂದ ತೋರುತ್ತಿರುವದು. ನಮ್ಮ ಆತ್ಮನು ಈಗ ದ್ರಷ್ಟೃ, ಶ್ರೋತೃ - ಮುಂತಾದ ರೂಪದಿಂದ ವಿಶೇಷಜ್ಞಾನಯುಕ್ತನಾಗಿ ತೋರುತ್ತಿದ್ದರೂ ಯಾವಾಗಲೂ ಸುಷುಪ್ತಿಯಲ್ಲಿರುವಂತೆ 'ಚಿದಾಕಾಶ' ರೂಪನಾಗಿಯೇ ಇದ್ದುಕೊಂಡಿರುತ್ತಾನೆ. ಇವನನ್ನೇ ಪರಮೇಶ್ವರನೆಂದು ಉಪಾಸನೆಮಾಡಬೇಕೆಂದು ಶಾಸ್ತ್ರಗಳಲ್ಲಿ ಹೇಳಿರುವದು. ವ್ಯವಹಾರದಲ್ಲಿ ಜೀವೇಶ್ವರಭೇದವನ್ನು ಅಂಗೀಕರಿಸಿ ನಮ್ಮ ಪರಮಾರ್ಥಾತ್ಮನಾದ ಬ್ರಹ್ಮವನ್ನೇ ಈಶ್ವರನೆಂದು ಧ್ಯಾನಿಸಬೇಕೆಂದು ವಿಧಾನಮಾಡಿರುತ್ತದೆ. ಬಾಹ್ಯಾಕಾಶದಲ್ಲಿ

ತೋರುವ ಸೂರ್ಯಚಂದ್ರಾದಿಗಳಿಗೆ ಗ್ರಹಣವಾಗಿ ಅವರ ಪ್ರಕಾಶಕ್ಕೆ ಮರೆಯುಂಟಾಗ ಬಹುದು ; ಆದರೆ ಸ್ವಯಂಜ್ಯೋತಿಯಾಗಿರುವ ಈ ಪರಮೇಶ್ವರನು ನಮ್ಮ ಆತ್ಮನೇ ಆಗಿರುವದರಿಂದ ಆತನಿಗೂ ನಮಗೂ ನಡುವೆ ಯಾವ ವ್ಯವಧಾನವೂ ಎಂದಿಗೂ ಇರುವಹಾಗಿಲ್ಲ.

ನಮ್ಮಲ್ಲಿರುವ ಈ ಪರಮೇಶ್ವರರೂಪನಾದ ಆತ್ಮನು ಬ್ರಹ್ಮೇಂದ್ರಾದಿಗಳನ್ನು ತನ್ನ ವಶದಲ್ಲಿಟ್ಟುಕೊಂಡಿರುತ್ತಾನೆ. ಅವರೆಲ್ಲರಿಗೂ ಈಶ್ವರನಾಗಿರುತ್ತಾನೆ. ಈಶ್ವರನೆಂದರೆ ಮಂತ್ರಿಯೇ ಮೊದಲಾದವರ ಅಧೀನದಲ್ಲಿದ್ದುಕೊಂಡಿರುವ ಸ್ವಾಮಿ ಎಂದೇನೂ ಅರ್ಥವಲ್ಲ. ಸ್ವತಂತ್ರನಾಗಿ ಎಲ್ಲರಮೇಲೂ ಅಧಿಕಾರವುಳ್ಳ ಅಧಿಪತಿ ಇವನು. ಈತನು ಶಾಸ್ತ್ರದಲ್ಲಿ ವಿಧಿಸಿರುವ ಪುಣ್ಯಕರ್ಮಗಳನ್ನು ಮಾಡಿ ಉತ್ತಮ ವೈಭವವನ್ನು ಪಡೆಯುವಂತಿಲ್ಲ; ಶಾಸ್ತ್ರದಲ್ಲಿ ಮಾಡಬಾರದೆಂದಿರುವ ಪಾಪಕರ್ಮಗಳನ್ನು ಮಾಡಿ ಕುಗ್ಗುವಂತೆಯೂ ಇಲ್ಲ. ಈತನು ಕರ್ಮಗಳಿಗೂ ಒಡೆಯನಾಗಿರುವಾತನು, ಧರ್ಮಾಧರ್ಮಗಳ ಕಟ್ಟಿಗೆ ಒಳಪಡದ ಸರ್ವೇಶ್ವರನು, ಸರ್ವಭೂತಪತಿಯಾಗಿದ್ದು ಕೊಂಡು ಸರ್ವರನ್ನೂ ಕಾಪಾಡುವಾತನಿವನು. ಸರ್ವಲೋಕದ ವ್ಯವಸ್ಥೆಗಳಿಗೂ ಕಾರಣನಾಗಿರುವವನೀತನು.

ಇಂಥ ಈ ಪರಮೇಶ್ವರನು ಹಿರಣ್ಯಗರ್ಭನಂತೆ ಸತ್ತಬಳಿಕ ಕಾಲಾಂತರದಲ್ಲಿ ಪಡೆಯಬೇಕಾಗಿರುವ ಲೋಕಾಂತರದಲ್ಲಿರುವದಿಲ್ಲ. ನಮ್ಮನಮ್ಮ ಹೃದಯದೊಳಗೇ ಸ್ವಯಂಜ್ಯೋತಿಯಾದ ಸಾಕ್ಷಿಯಾಗಿರುತ್ತಾನೆ. 'ಏಷಃ' ಎಂಬ ಸಂಸ್ಕೃತ ಶಬ್ದವು ಅತ್ಯಂತ ಸಮೀಪದಲ್ಲಿರುವದಕ್ಕೆ ಉಪಯೋಗಿಸುವದಾಗಿದೆ. 'ಈತನು ನಮ್ಮ ಸ್ವರೂಪವೇ ಆಗಿ ನಮ್ಮೊಳಗೆ ಇಲ್ಲಿಯೇ ಇರುತ್ತಾನೆ' ಎಂದು ಹೇಳಿದ ಯಾಜ್ಞವಲ್ಕ್ಯರಾಗಲಿ, ಅದನ್ನು ಶ್ರವಣಮಾಡಿದ ಜನಕನಾಗಲಿ, ಈಗ ಇಲ್ಲವಾದರೂ ಈ ಪರಮಾತ್ಮನು ಮಾತ್ರ ಈಗಲೂ ತತ್ತ್ವವಿಚಾರವನ್ನು ಮಾಡುವ ಅಧಿಕಾರಿಗಳಾದ ಮುಮುಕ್ಷುಗಳಿಗೆ ದರ್ಶನವನ್ನು ಕೊಡುತ್ತಾನೆ. ಇಂಥ ಪಿತ್ರಾರ್ಜಿತಸಂಪತ್ತೊಂದು ನಮ್ಮ ದೇಶಕ್ಕೆ ದೊರಕಿದ್ದರೂ ಈಗ ಅನೇಕರಿಗೆ ಅದನ್ನು ಅನುಭವಿಸುವ ಸೌಭಾಗ್ಯವಿಲ್ಲದಿರುವ ದೊಂದು ಶೋಚನೀಯವಿಷಯವಾಗಿರುತ್ತದೆ.

ಈ ಪರಮೇಶ್ವರನು ಯಾರೊಬ್ಬರ ಹಕ್ಕೂ ಅಲ್ಲ ; ಪ್ರತಿಯೊಬ್ಬನ ಜೀವನ ಶರೀರದೊಳಗೂ ಅವನ ಜೊತೆಯಲ್ಲಿಯೇ ಹುದುಗಿರುತ್ತಾನೆ - ಎಂದು ಶ್ರುತಿಯು ಸಾರುತಿದೆ :

**ಸಮಾನೇ ವೃಕ್ಷೇ ಪುರುಷೋ ನಿಮಗ್ನೋಽನೀಶಯಾ ಶೋಚತಿ ಮುಹ್ಯಮಾನಃ । ಜುಷ್ಟಂ ಯದಾ ಪಶ್ಯತ್ಯನ್ಯಮೀಶಮಸ್ಯ ಮಹಿಮಾನಮಿತಿ ವೀತಶೋಕಃ ॥ ಯದಾ ಪಶ್ಯಃ ಪಶ್ಯತೇ ರುಕ್ಮವರ್ಣಂ ಕರ್ತಾರಮೀಶಂ ಪುರುಷಂ ಬ್ರಹ್ಮಯೋನಿಮ್ । ತದಾ ವಿದ್ವಾನ್ ಪುಣ್ಯಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯಮುಪೈತಿ ॥** ಮುಂ. ೩-೧-೩.

ಒಂದೇ ಮರದಲ್ಲಿರುವ ಎರಡು ಹಕ್ಕಿಗಳೊಳಗೆ ಒಂದು ಹಣ್ಣನ್ನು ತಿನ್ನುತ್ತಿರಲು ಮತ್ತೊಂದು ಸುಮ್ಮನೆ ಕುಳಿತುಕೊಂಡು ನೋಡುತ್ತಿರುವಂತೆ, ಪ್ರತಿಯೊಬ್ಬರ ಶರೀರದೊಳಗೂ ಅವಿದ್ಯಾಕಾಮಕರ್ಮಗಳ ಫಲವನ್ನು ಅನುಭವಿಸುತ್ತಿರುವ ಜೀವನೊಬ್ಬನು, ನಿತ್ಯಶುದ್ಧಬುದ್ಧಮುಕ್ತಸ್ವಭಾವನಾಗಿರುವ ಪರಮೇಶ್ವರನೊಬ್ಬನು - ಹೀಗೆ ಇಬ್ಬರು ಆತ್ಮರುಗಳಿರುತ್ತಾರೆ. ಅವರೊಳಗೆ ಸಂಸಾರಿಯಾಗಿರುವ ಜೀವಾತ್ಮನು 'ನಾನು ಇಂಥವನ ಮಗನು, ಇಂಥವನ ಮೊಮ್ಮಗನು, ಗಟ್ಟಿಮುಟ್ಟಾಗಿದೇನೆ, ಬಡವನಾಗಿದೇನೆ, ಗುಣವಂತನಾಗಿದೇನೆ, ನಿರ್ಗುಣನಾಗಿರುತ್ತೇನೆ, ಸುಖವನ್ನೂ ದುಃಖವನ್ನೂ ಮೇಲಿಂದಮೇಲೆ ಅನುಭವಿಸುತ್ತಿರುವವನು ' - ಎಂದುಕೊಳ್ಳುತ್ತಾ ಈ ಸ್ವರೂಪಕ್ಕಿಂತ ತನಗೆ ಮತ್ತೆ ಬೇರೆಯ ಯಾವ ರೂಪವೂ ಇಲ್ಲವೆಂದೇ ಬಗೆದು 'ಅಯ್ಯೋ ! ಏನುಮಾಡಲಿ ? ಮಗನು ಹೋದನು, ಹೆಂಡತಿ ಹೋದಳು, ಹಣವು ಹೋಯಿತು, ಹೊಲಮನೆಗಳಿಲ್ಲವಾದವು, ನನ್ನ ಗತಿಯೇನು ?' ಎಂದು ಕೊರಗುತ್ತಾ ಬಗೆಬಗೆಯ ಜನ್ಮಗಳನ್ನು ಪಡೆಯುತ್ತಿರುವನು. ಆದರೆ ಅದೇ ಜೀವನೇ ಪರಮಕಾರುಣಿಕನಾದ ಉತ್ತಮೋಪದೇಶಕನೊಬ್ಬನು ದೊರೆತಾಗ ಆತನ ಬೋಧೆಯಿಂದ 'ನಾನು ಎಂದೆಂದಿಗೂ ಏಳುಬೀಳುಗಳನ್ನನುಭವಿಸುತ್ತಿರುವ ಸಂಸಾರಿಯಲ್ಲ , ನಿಜವಾಗಿ ಜಗದೀಶ್ವರನಾದ ಪರಮಾತ್ಮನೇ ನಾನು, ಈ ಇಡಿಯ ಜಗತ್ತೇ ನನ್ನ ಮಹಿಮೆ' ಎಂಬ ಅನುಭವವನ್ನು ಹೊಂದಿ ಶೋಕವನ್ನು ದಾಟಿ ಕೃತಕೃತ್ಯನಾಗುತ್ತಾನೆ. ಆ ಪರಮಾತ್ಮಸ್ವರೂಪವನ್ನು ಕಂಡುಕೊಂಡಾಗ ಯಾವ ಕ್ಲೇಶಗಳ ಅಂಟೂ ಇಲ್ಲದವನಾಗಿ ಆ ಪರಮೇಶ್ವರನ ಪರಮಸಾಮ್ಯವನ್ನು ಪಡೆದುಕೊಳ್ಳುತ್ತಾನೆ. ದ್ವೈತಪ್ರಪಂಚದಲ್ಲಿ 'ಒಂದು ವಸ್ತು ಇನ್ನೊಂದರಂತೆ ಇದೆ ' ಎನ್ನುವಾಗ ಅಲ್ಲಿ ಇರುವ ಸಾಮ್ಯವು ಎಷ್ಟೇ ಪ್ರಬಲವಾಗಿರಲಿ, ಅದರಲ್ಲಿ ದೇಶಕಾಲಾದಿಕೃತವಾದ ಎಷ್ಟೋ ವೈಷಮ್ಯಗಳು ಇದ್ದೇ ಇರುತ್ತವೆ. ಆದರೆ ಇಲ್ಲಿ ಜ್ಞಾನಿಯಾದ ಜೀವನಿಗೂ ಪರಮೇಶ್ವರನಿಗೂ ಹೇಳಿರುವ ಸಾಮ್ಯವು ಪರಮವು, ಅದ್ವಯಸ್ವರೂಪವಾದ ಪೂರ್ಣೈಕತ್ವವೇ ಆಗಿರುತ್ತದೆ.

ಈ ಏಕತ್ವವು ಯಾರೋ ಒಬ್ಬ ಮಹಾತ್ಮನಿಗೆ ದೊರಕುವ ಅಪೂರ್ವವಾದ ಲಾಭವೆಂದು ತಿಳಿಯಬಾರದು.

**ಏಕೋ ದೇವಃ ಸರ್ವಭೂತೇಷು ಗೂಢಃ**
**ಸರ್ವವ್ಯಾಪೀ ಸರ್ವಭೂತಾಂತರಾತ್ಮಾ।**
**ಕರ್ಮಾಧ್ಯಕ್ಷಃ ಸರ್ವಭೂತಾಧಿವಾಸಃ**
**ಸಾಕ್ಷೀಚೇತಾ ಕೇವಲೋ ನಿರ್ಗುಣಶ್ಚ॥** ಶ್ವೇ. ೬-೧೧

'ಈ ಒಬ್ಬ ದೇವನೇ ಸರ್ವಪ್ರಾಣಿಗಳೊಳಗೂ ಹುದುಗಿರುತ್ತಾನೆ. ಎಲ್ಲೆಲ್ಲಿಯೂ ಆತನೇ ವ್ಯಾಪಿಸಿಕೊಂಡಿರುತ್ತಾನೆ. ಎಲ್ಲಾ ಪ್ರಾಣಿಗಳಿಗೂ ತೀರ ಒಳಗಿನ ಆತ್ಮನೇ ತಾನಾಗಿರುತ್ತಾನೆ. ಅವರು ಮಾಡುವ ಧರ್ಮಾಧರ್ಮಗಳಿಗೆಲ್ಲ ಸಾಕ್ಷಿಯಾಗಿರುತ್ತಾನೆ. ಅವರುಗಳ ಶರೀರದಲ್ಲಿಯೇ ಇದ್ದುಕೊಂಡಿರುತ್ತಾನೆ. ಸಾಕ್ಷಿಯಾಗಿರುವದರಿಂದ ತಾನು ಬೆಳಗುತ್ತಿರುವ ಶರೀರೇಂದ್ರಿಯಮನಸ್ಸುಗಳ ಯಾವ ಕಲ್ಮಷದ ಅಂಟೂ ಇಲ್ಲದವನಾಗಿರುತ್ತಾನೆ ; ಚೈತನ್ಯಮಾತ್ರಸ್ವರೂಪನಾಗಿರುತ್ತಾನೆ, ಅದ್ವಿತೀಯನಾಗಿರುತ್ತಾನೆ, ಯಾವ ಗುಣಗಳಿಂದಲೂ ವ್ಯಯವಾಗದ ಸ್ವರೂಪವುಳ್ಳವನಾಗಿರುತ್ತಾನೆ ' ಎಂದು ಶ್ರುತಿಯ ಡಂಗುರವು ಮೊಳಗುತ್ತಿದೆ.

'ಆದರೂ ನಮ್ಮ ವ್ಯವಹಾರದಲ್ಲಿರುವ ದ್ವೈತವನ್ನು ಅಲ್ಲಗಳೆಯುವದಕ್ಕಾದೀತೆ ? ಜೀವರುಗಳಲ್ಲಿ ಮನಷ್ಯನಿಂದ ಹಿಡಿದು ಕ್ರಿಮಿಕೀಟಗಳವರೆಗಿನ ಶರೀರ ತಾರತಮ್ಯವೂ, ಬುದ್ಧಿತಾರತಮ್ಯವೂ, ಸುಖತಾರತಮ್ಯವೂ ಕಣ್ಣಿಗೆ ಕಟ್ಟಿದಂತೆ ಕಾಣುತ್ತಿರುವದರಿಂದ ಈ 'ಏಕೋ ದೇವಃ' ಎಂಬ ಮಾತು ಶ್ರುತ್ಯುಪದೇಶವೇ ಆಗಿದ್ದರೂ ಏಕೋ ಮನಸ್ಸಿಗೆ ಒಪ್ಪಾಗದೆ ಇರುವದಲ್ಲ! ' ಎಂದು ಕೆಲವರು ತಮ್ಮೊಳಗೇ ಶಂಕಿಸುತ್ತಿರಬಹುದು. ವ್ಯವಹಾರದ ಅನುಭವವನ್ನು ವ್ಯವಹಾರದ ದೃಷ್ಟಿಯಿಂದಲೇ ಈ ಭೇದವೆಲ್ಲವೂ ಆಭಾಸಮಾತ್ರವೆಂದು ತೋರಿಸಿಕೊಟ್ಟಿರುವ ಶ್ರೀಗೌಡಪಾದರ ಕಾರಿಕೆಗಳನ್ನು ಇಲ್ಲಿ ಉದಾಹರಿಸಿ ಈ ಶಂಕೆಗೆ ಪರಿಹಾರವನ್ನು ಸೂಚಿಸುವೆನು.

**ಸ್ವಪ್ನದೃಕ್ ಪ್ರಚರನ್ ಸ್ವಪ್ನೇ ದಿಕ್ಷು ವೈ ದಶಸು ಸ್ಥಿತಾನ್।**
**ಅಣ್ಡಜಾನ್ ಸ್ವೇದಜಾನ್ ವಾಪಿ ಜೀವಾನ್ ಪಶ್ಯತಿ ಯಾನ್ ಸದಾ॥**

**ಸ್ವಪ್ನದೃಕ್ಚಿತ್ತದೃಶ್ಯಾಸ್ತೇ ನ ವಿದ್ಯನ್ತೇ ತತಃ ಪೃಥಕ್।**
**ತಥಾ ತದ್ದೃಶ್ಯಮೇವೇದಂ ಸ್ವಪ್ನದೃಕ್ಚಿತ್ತಮಿಷ್ಯತೇ॥**

**ಚರಞ್ಜಾಗರಿತೇ ಜಾಗ್ರದ್ ದಿಕ್ಷು ವೈ ದಶಸು ಸ್ಥಿತಾನ್।**
**ಅಣ್ಡಜಾನ್ ಸ್ವೇದಜಾನ್ ವಾಪಿ ಜೀವಾನ್ ಪಶ್ಯತಿ ಯಾನ್ ಸದಾ॥**

**ಜಾಗ್ರಚ್ಚಿತ್ತೇಕ್ಷಣೀಯಾಸ್ತೇ ನ ವಿದ್ಯನ್ತೇ ತತಃ ಪೃಥಕ್।**
**ತಥಾ ತದ್ದೃಶ್ಯಮೇವೇದಂ ಜಾಗ್ರತಶ್ಚಿತ್ತಮಿಷ್ಯತೇ ॥**

ಗೌ. ಕಾ.೪-೬೩ರಿಂದ ೬೬

ಕನಸಿನಲ್ಲಿ ನಮಗೆ ಎಷ್ಟು ಲೆಕ್ಕವಿಲ್ಲದಷ್ಟು ಬಗೆಯ ಜೀವರುಗಳು ಕಾಣಬರುತ್ತಾರೆ! ಅವರು ನಮಗೆಲ್ಲರಿಗಿಂತಲೂ ಭಿನ್ನರಾಗಿ ತೋರುತ್ತಿರುತ್ತಾರೆ. ಶರೀರಾದಿ ಸಂಪತ್ತು, ಕರ್ಮ, ಬುದ್ಧಿ, ಸುಖದುಃಖಾದಿಗಳು – ಇವುಗಳೆಲ್ಲದರಲ್ಲಿಯೂ ಅವರಿಗೆ ಪರಸ್ಪರ ತಾರತಮ್ಯವು ಕಂಡುಬರುತ್ತಲೇ ಇರುವದಲ್ಲವೆ ? ಆದರೆ ಆ ಜೀವರುಗಳು ಈಗ ಎಲ್ಲಿರುತ್ತಾರೆ ? – ಎಂದು ಕೇಳಿದರೆ 'ಅಲ್ಲಿ ಕಂಡದ್ದೆಲ್ಲ ಸ್ವಪ್ನಚಿತ್ತದ ಕಲ್ಪನಾಮಾತ್ರವೇ, ನಿಜವಾಗಿ ಅಲ್ಲಿ ಏನೇನೂ ಇರಲಿಲ್ಲ' ಎಂದಲ್ಲವೆ, ಎಚ್ಚತ್ತವರು ಉತ್ತರವನ್ನು ಕೊಡುತ್ತಾರೆ ? ಆ ಕನಸಿನ ಚಿತ್ತವಾದರೂ ನಿಜವಾಗಿ ಅಲ್ಲಿಇತ್ತೆ ? ಎಂದರೆ, 'ಅದೂ ಆ ಕಾಲಕ್ಕೆ ಕಂಡುಬರುವ ವಿಕಲ್ಪಮಾತ್ರವೇ ! ಎಚ್ಚರದ ಚಿತ್ತಕ್ಕೆ ಹೋಲಿಸಿದಾಗ ಆ ಚಿತ್ತವು ಹುಚ್ಚುಹುಚ್ಚಾಗಿ ಕುಣಿದಾಡಿತು ! ' ಎಂದು ಕನಸು ಕಂಡವರು ಆಶ್ಚರ್ಯಪಡುತ್ತಾರೆ. ಅಲ್ಲವೇ ? ಹೀಗಿರುವಲ್ಲಿ, ಎಚ್ಚರದಲ್ಲಿ ಕಾಣಿಸುತ್ತಿರುವ ದ್ವೈತಪ್ರಪಂಚವಾಗಲಿ, ಅಲ್ಲಿ ಕಾಣಬರುವ ಜೀವರುಗಳಾಗಲಿ, ಅಥವಾ ಮತ್ತೆ ಯಾವ ದೃಶ್ಯಗಳೇ ಆಗಲಿ, ಪರಮಾರ್ಥವೆಂದು ಬಗೆಯುವದಕ್ಕೆ ನಮಗೆ ಯಾವ ಆಧಾರವಿದೆ ? ಇಲ್ಲಿರುವ ದೃಶ್ಯಗಳೂ ನಮ್ಮನಮ್ಮ ಚಿತ್ತಕ್ಕೇ ಕಾಣಿಸುತ್ತಿವೆ ; ಚಿತ್ತವು ಕನಸಿನಲ್ಲಿ ಕಂಡದ್ದು ಮಾತ್ರ ವಿಕಲ್ಪ , ಎಚ್ಚರದಲ್ಲಿ ಕಾಣುವ ದೃಶ್ಯಗಳಮಟ್ಟಿಗೆ ಸತ್ಯ – ಎಂದು ಹೇಳುವದು ಯುಕ್ತಿಯುಕ್ತವೆನಿಸೀತೆ ? ಕನಸಿನಲ್ಲಿ ಕಂಡ ಚಿತ್ತವು ಹೇಗೆ ಆತ್ಮನ ಬೆಳಕಿಗೆ ಗೋಚರವಾಗುತ್ತಿತ್ತೋ ಹಾಗೆಯೇ ಎಚ್ಚರದಲ್ಲಿ ಕಾಣಬರುತ್ತಿರುವ ಚಿತ್ತವೂ ಅದೇ ಬೆಳಕಿಗೆ ಗೋಚರವಗುತ್ತಿದೆ. ಹೀಗೆ ನೋಡಿದಾಗ ಕನಸನ್ನೂ ಎಚ್ಚರವನ್ನೂ ಕಾಣುತ್ತಿರುವ ಆತ್ಮನನ್ನು ಬಿಟ್ಟರೆ ಮತ್ತೆ ಯಾವದೊಂದೂ ಸ್ವತಂತ್ರವಾಗಿ ಇದೆ ಎನ್ನಿಸಿಕೊಳ್ಳುವದಕ್ಕೆ ಅರ್ಹವಾಗಿಲ್ಲ ; ಚಿತ್ತವಾಗಲಿ, ಚಿತ್ತದೃಶ್ಯಗಳಾಗಲಿ ಬರಿಯ ತೋರಿಕೆಗಳೇ. ಅವೆಲ್ಲ ಆತ್ಮನಲ್ಲಿ ಕಾಣಬರುತ್ತಿರುವ ವಿಕಲ್ಪಗಳೇ ಎಂದು ನಿಶ್ಚಯಿಸುವದು ಅನುಭವಸಂಮತವಾದ ಯುಕ್ತಿ ಎನ್ನಬೇಕಾಯಿತಷ್ಟೆ?

ಇದೇ ಅರ್ಥವನ್ನು ಶ್ರೀಶಂಕರಭಗವತ್ಪಾದರವರೂ ತಮ್ಮ ಸೂತ್ರಭಾಷ್ಯದಲ್ಲಿ ವರ್ಣಿಸಿ ಬರೆದಿರುತ್ತಾರೆ. **'ಆಭಾಸ ಏವ ಚ'** (ವೇ. ಸೂ. ೨-೩-೫೦) ಎಂಬ ಸೂತ್ರದ ಅಭಿಪ್ರಾಯವನ್ನು ವಿವರಿಸುವಾಗ ಸೂತ್ರಭಾಷ್ಯದಲ್ಲಿ ಅವರು ಬರೆದಿರುವದನ್ನು ನೋಡಿರಿ :

> ಆಭಾಸ ಏವ ಚೈಷ ಜೀವಃ ಪರಸ್ಯಾತ್ಮನೋ ಜಲಸೂರ್ಯಕಾದಿವತ್ ಪ್ರತಿಪತ್ತವ್ಯಃ । ನ ಸ ಏವ ಸಾಕ್ಷಾತ್, ನಾಪಿ ವಸ್ತ್ವನ್ತರಮ್, ಅತಶ್ಚ ಯಥಾ ನೈಕಸ್ಮಿನ್ ಜಲಸೂರ್ಯಕೇ ಕಮ್ಪಮಾನೇ ಜಲಸೂರ್ಯಕಾನ್ತರಂ ಕಮ್ಪತೇ, ಏವಂ ನೈಕಸ್ಮಿನ್ ಜೀವೇ ಕರ್ಮಫಲಸಂಬನ್ಧಿನಿ ಜೀವಾನ್ತರಸ್ಯ ತತ್ಸಂಬನ್ಧಃ । .... ಆಭಾಸಸ್ಯ ಚ ಅವಿದ್ಯಾಕೃತತ್ವಾತ್ ತದಾಶ್ರಯಸ್ಯ ಸಂಸಾರಸ್ಯ ಅವಿದ್ಯಾಕೃತತ್ವೋಪಪತ್ತಿರಿತಿ ತದ್ವ್ಯುದಾಸೇನ ಚ ಪಾರಮಾರ್ಥಿಕಸ್ಯ
> ತಿಃ ॥

ಈ ಜೀವನೆಂಬವನು ಪರಮಾತ್ಮನ ಆಭಾಸಮಾತ್ರವೇ ; ಆ ಪರಮಾತ್ಮನೇ ಅಲ್ಲ, ಬೇರೆಯೂ ಅಲ್ಲ. ಆದ್ದರಿಂದ, ಹೇಗೆ ಒಂದು ಸೂರ್ಯಪ್ರತಿಬಿಂಬವು ಅಲುಗಾಡಿದರೆ ಮತ್ತೊಂದು ಪ್ರತಿಬಿಂಬವು ಅಲುಗಾಡುವದಿಲ್ಲವೋ ಹಾಗೆಯೇ ಒಬ್ಬ ಜೀವನಿಗೆ ಕರ್ಮಫಲಸಂಬಂಧವಾಗುವದಾದರೆ ಮತ್ತೊಬ್ಬ ಜೀವನಿಗೆ ಅದರ ಸಂಬಂಧವು ಆಗಬೇಕಾದದ್ದಿಲ್ಲ. ಆಭಾಸವು ಅವಿದ್ಯಾಕೃತವಾಗಿರುವದರಿಂದ ಅದನ್ನಾಶ್ರಯಿಸಿ ಕೊಂಡಿರುವ ಸಂಸಾರವೂ ಅವಿದ್ಯಾಕೃತವಾಗಿದೆ ಎಂದಾಯಿತು. ಹೀಗಿರುವದರಿಂದ ಅದನ್ನು ಅಲ್ಲಗಳೆದು ಪರಮಾರ್ಥವಾಗಿರುವ ಬ್ರಹ್ಮಾತ್ಮೈಕತ್ವವನ್ನು ಶ್ರುತಿಯು ಹೇಳಬಹುದಾಗಿರುತ್ತದೆ – ಎಂಬುದು ಭಾಷ್ಯವಾಕ್ಯದ ಅರ್ಥವು.

ಕನಸಿನಲ್ಲಿ ಎಂಥೆಂಥ ಆಶ್ಚರ್ಯಗಳು ನಿಜವೆಂದೇ ಭಾಸವಾಗುತ್ತವೆ ! ಚೀನಾ ದೇಶದ ಒಬ್ಬ ತತ್ತ್ವಜ್ಞಾನಿಯು ಜಿಟ್ಟೆಯಾಗಿರುವೆನೆಂಬ ಕನಸನ್ನು ಕಂಡನಂತೆ. ಎಚ್ಚತ್ತಬಳಿಕ 'ಜಿಟ್ಟೆಯು ನನ್ನ ರೂಪವನ್ನು ಈಗ ಪಡೆಯಿತೋ, ಅಥವಾ ನಾನೇ ಕನಸಿನಲ್ಲಿ ಜಿಟ್ಟೆಯಾಗಿದ್ದೆನೋ ?' ಎಂದು ವಿಚಾರಮಾಡಹತ್ತಿದನಂತೆ ! ನಿಜವಾಗಿಲ್ಲದ ಎಷ್ಟು ದೃಶ್ಯಗಳನ್ನಾದರೂ ಕನಸಿನಲ್ಲಿ ಸತ್ಯವೆಂದೇ ಬಗೆಯುತ್ತೇವಲ್ಲವೆ ? ಹಾಗೆಯೇ ಇಲ್ಲಿ ನಮ್ಮ ಅನುಭವದಲ್ಲಿ ತೋರುವ ಸಂಸಾರವು ಸತ್ಯೆಂದು ನಮ್ಮ ಮನಸ್ಸು ಎಷ್ಟೇ ಗಟ್ಟಿಯಾಗಿ ಪಟ್ಟುಹಿಡಿದಿರಲಿ, ಇದು ನಿಜವೇ – ಎಂಬುದಕ್ಕೆ ಮತ್ತೆ ಯಾವ ಆಧಾರ ವಿದೆ ? ಈಗ ಹುಡುಗ, ಆಮೇಲೆ ಮುದುಕು – ಎಂದಾದಮೇಲೆ ಯಾವದು ನಮ್ಮ ನಿಜವಾದ ಸ್ವರೂಪ ? ಈಗ ಇದೇ,ಆಗ ಅದೇ ! ಮನೆಯಲ್ಲಿ ನಿಜವಾದ ರಾಯರು ಯಾರು ? – ಎಂಬುದರ ನಿಶ್ಚಯವಿಲ್ಲದವನು, ಕಂಡುಕಂಡವರನ್ನೆಲ್ಲ ರಾಯರೆಂದು ಭಾವಿಸಿ ಕೈಮುಗಿಯುವಂತೆ ನಾವು ಶರೀರ, ಇಂದ್ರಿಯ, ಮನಸ್ಸು – ಇವುಗಳಲ್ಲಿ ಯಾವದನ್ನಾದರೂ ಆಯಾ ಕಾಲಕ್ಕೆ ನಮ್ಮ ಆತ್ಮನೇ ಎಂದು ಬಗೆಯುತ್ತಿರುವೆವು. 'ನಾನು' ಎಂಬ ಪ್ರಮಾತೃಸ್ವರೂಪವು ತೋರುತ್ತಿರುವವರೆಗೂ ಪ್ರಮಾತೃ

ಪ್ರಮಾಣಪ್ರಮೇಯರೂಪವಾಗಿ ವಿಭಕ್ತವಾಗಿರುವ ದ್ವೈತಪ್ರಪಂಚವು ತೋರದೆ ಬಿಡದು. ಸುಷುಪ್ತಿಯಲ್ಲಿ ಪ್ರಮಾತೃತ್ವವಿಲ್ಲದಾಗ, ದ್ವೈತಪ್ರಪಂಚವೂ ಕಾಣುವದಿಲ್ಲ ; ನಿಜವಾದ ರಾಯರನ್ನೇ ರಾಯರೆಂದು ನಿಶ್ಚಯಿಸುವವನಿಗೆ ಸಂಶಯವೆಲ್ಲ ಹಾರಿ ಹೋಗುವಂತೆ, ನಮ್ಮ ಆತ್ಮನನ್ನೇ ಆತ್ಮನೆಂದು ಕಂಡುಕೊಂಡಾಗ, 'ಜ್ಞಾತೃವಿಲ್ಲ, ಜ್ಞೇಯವಿಲ್ಲ , ಜ್ಞಾನವೂ ಇಲ್ಲ ; ಹೋಗಬೇಕಾಗಿರುವ ಅಜ್ಞಾನವೂ ಇಲ್ಲ , ಬರಬೇಕಾದ ಜ್ಞಾನವೂ ಇಲ್ಲ ' – ಎಂಬ ನಿಜವು ಅನುಭವಕ್ಕೆ ತಟ್ಟಿಬಿಡುತ್ತದೆ. ಅದೇ ನಿಜವಾದ ಆತ್ಮಾನುಭವ.

## ೧೫. ಅವಸ್ಥೆಗಳಿಗೆ ಪರಸ್ಪರಸಂಬಂಧವಿದೆಯೆ ?

(29-8-64)

ಆಸ್ಟ್ರೇಲಿಯದಿಂದ ಒಂದು ಅನರ್ಘವಾದ ಮರದ ಕೊರಡನ್ನು ಇಂಗ್ಲೆಂಡಿಗೆ ಕೆಲವು ಜನರಮೂಲಕ ಕಳುಹಿಸಿಕೊಟ್ಟರಂತೆ. ಅವರು ಇಂಗ್ಲೆಂಡಿಗೆ ತಲುಪುವದರೊಳಗೆ ಅದನ್ನು ಹೊತ್ತುಕೊಂಡುಹೋಗುತ್ತಿದ್ದ ಜನರು ಒಬ್ಬೊಬ್ಬರಾಗಿ ಕಾಲಾಧೀನರಾಗಿ ಬಿಟ್ಟರು. ಬೇರೆಯ ಜನರನ್ನು ಅಲ್ಲಲ್ಲಿ ಸೇರಿಸಿಕೊಂಡು ಕೊರಡನ್ನು ಸಾಗಿಸುತ್ತಿದ್ದರು. ಆ ಕೊರಡೂ ಗಾಳಿಮಳೆಬಿಸಿಲುಗಳ ಹೊಡೆತದಿಂದ ಮಾರ್ಪಟ್ಟು ಕೆಟ್ಟುಹೋಯಿತು. ಕೊನೆಗೆ ಅದೇ ಜಾತಿಯ ಇನ್ನೊಂದು ಕೊರಡನ್ನು ಕೆಲವರು ತೆಗೆದುಕೊಂಡುಹೋಗಿ ಇಂಗ್ಲೆಂಡಿನ ಅರಮನೆಗೆ ತಲುಪಿಸಿದರಂತೆ ! ಇಲ್ಲಿ ಜನರೂ ಕೊರಡೂ ತೀರ ಇಲ್ಲವಾಗಿದ್ದರೂ 'ಆಸ್ಟ್ರೇಲಿಯದವರು ರಾಜಭಕ್ತಿಯ ಗುರುತಾಗಿ ಮರವನ್ನು ತಂದುಕೊಟ್ಟರು' ಎಂದು ಅರಮನೆಯವರು ಭಾವಿಸಿದರಂತೆ ! ಜನರು ಬಾಲ್ಯದಿಂದ ಮುಪ್ಪಿನವರೆಗೂ ಶರೀರದಲ್ಲಿಯೂ ಇಂದ್ರಿಯಪಾಟವದಲ್ಲಿಯೂ ಬುದ್ಧಿಶಕ್ತಿಯಲ್ಲಿಯೂ ಮಾರ್ಪಡುತ್ತಲೇ ಇದ್ದರೂ 'ಅವನೇ ನಾನು' ಎಂದೇ ಗಟ್ಟಿಯಾಗಿ ನಂಬುತ್ತಿರುವದೂ ಈ ದೃಷ್ಟಾಂತದಂತೆಯೇ ಇರುತ್ತದೆ. ಎಚ್ಚರ, ಕನಸು, ತನಿನಿದ್ರೆ – ಇವುಗಳಲ್ಲಿ 'ನಾನು' ಎಂದು ಕರೆದುಕೊಳ್ಳುತ್ತಿರುವ ಅವರ ಸ್ವರೂಪವು ಬೇರೆಬೇರೆಯಾಗಿ ಕಾಣುತ್ತಿದ್ದರೂ 'ಎಚ್ಚರವಾಗಿದ್ದ ನಾನೇ ಕನಸುನಿದ್ರೆಗಳನ್ನು ಅನುಭವಿಸಿದೆನು' ಎಂದೇ ಹೇಳಿಕೊಳುತಿರುವರು. ಇದನ್ನು ಹೇಗೆ ಹೊಂದಿಸಿಕೊಳ್ಳಬೇಕು ?

ಎಚ್ಚರದಿಂದ ಕನಸಿಗೂ ಕನಸಿನಿಂದ ಎಚ್ಚರಕ್ಕೂ ಹೋಗಿಬರುತ್ತಿರುವಂತೆ ನಮ್ಮೆಲ್ಲರಿಗೂ ಅನುಭವವಾಗುತ್ತಿರುವದಲ್ಲವೆ ? ಈ ಅನುಭವವನ್ನು ಜನಕನಿಗೆ

ಯಾಜ್ಞವಲ್ಕ್ಯರು ಹೀಗೆ ದೃಷ್ಟಾಂತಪೂರ್ವಕವಾಗಿ ವರ್ಣಿಸಿ ಹೇಳಿರುತ್ತಾರೆ :

**ತದ್ಯಥಾ ಮಹಾಮತ್ಸ್ಯ ಉಭೇ ಕೂಲೇ ಅನುಸಂಚರತಿ ಪೂರ್ವಂ ಚಾಪರಂ ಚೈವಮೇವಾಯಂ ಪುರುಷ ಏತಾವುಭಾವನ್ತಾವನುಸಂಚರತಿ ಸ್ವಪ್ನಾಂತಂ ಚ ಬುದ್ಧಾನ್ತಂ ಚ ॥** ಬೃ. ೪-೩-೧೮

ತಿಮಿಂಗಿಲದಂಥ ದೊಡ್ಡೊದಂದು ಮೀನು ನದಿಯ ಸೆಳೆತಕ್ಕೆ ಸಿಲುಕದೆ ಆ ದಡದಿಂದ ಈ ದಡಕ್ಕೆ ಈ ದಡದಿಂದ ಆ ದಡಕ್ಕೆ ಹೀಗೆ ಒಂದು ಕಡೆಯಿಂದ ಮತ್ತೊಂದು ಕಡೆಗೆ ಹೇಗೆ ಹೋಗುತ್ತಲೂ ಬರುತ್ತಲೂ ಇರುವದೋ, ಹಾಗೆಯೇ ಈ ಮನುಷ್ಯನು ಎಚ್ಚರ, ಕನಸು - ಎಂಬೀ ಎರಡು ಅವಸ್ಥೆಗಳನ್ನೂ ಒಂದಾಗುತ್ತಲೂ ಒಂದರಂತೆ ಸೇರಿ ಓಡಾಡುತ್ತಿರುವನು - ಎಂಬುದು ವಾಕ್ಯದ ಅರ್ಥ. ಇಲ್ಲಿ 'ಎಚ್ಚರವು' ಒಂದು ದಡದಂತೆ ಒಂದ ಕಡೆ, 'ಕನಸು' ಇನ್ನೊಂದು ದಡದಂತೆ ಇನ್ನೊಂದು ಕಡೆ - ಹೀಗೆ ಏಕಕಾಲದಲ್ಲೇನೂ ಇರುವದಿಲ್ಲವಷ್ಟೆ? ಆದ್ದರಿಂದ ಮೀನಿನ ದೃಷ್ಟಾಂತವಾಕ್ಯದಲ್ಲಿ ಅವಸ್ಥೆಗಳೆರಡೂ ಒಂದೇ ಕಾಲಕ್ಕೆ ಬೇರೆಬೇರೆ ಕಡೆಗಳಲ್ಲಿ ಇರುವವೆಂದು ಇಟ್ಟುಕೊಂಡೇನೂ ಯಾಜ್ಞವಲ್ಕ್ಯರು ಹೇಳಿಲ್ಲವೆಂಬುದು ಸ್ಪಷ್ಟ . ಹಾಗಾದರೆ ಎಚ್ಚರವಾದ ಮೇಲೆ ಕನಸು, ಕನಸಾದಮೇಲೆ ಎಚ್ಚರ - ಹೀಗೆ ಒಂದಾಗುತ್ತಲೂ ಒಂದು ಆಗುವವೆಂದಾದರೂ ಇಲ್ಲಿ ವಿವಕ್ಷಿತವಾಗಿದೆಯೆ ? - ಎಂಬುದನ್ನು ಇಲ್ಲಿ ವಿಚಾರಿಸಬೇಕು. ಅದಕ್ಕಿಂತಲೂ ಮೊದಲು ಯಾಜ್ಞವಲ್ಕ್ಯರು ಹೇಳಿದ ಮತ್ತೊಂದು ವಿಷಯವನ್ನು ಇಲ್ಲಿ ವಿಚಾರಿಸಬೇಕಾಗಿದೆ. ಅದೇನೆಂದರೆ ಎಚ್ಚರದಲ್ಲಿ ಅವಿದ್ಯಾಕಾಮಕರ್ಮಗಳೆಂಬ ಮೃತ್ಯುವಿನ ರೂಪಗಳಾಗಿರುವ 'ಕಾರ್ಯಕರಣಸಂಘಾತಕ್ಕೆ' ಕಟ್ಟುಬಿದ್ದಿರುತ್ತಾನೆಂದೂ ಕನಸಿಗೆ ಹೋದರೆ ಆ ರೂಪಗಳನ್ನು ದಾಟುತ್ತಿರುತ್ತಾನೆಂದೂ ಅವರು ಹೇಳಿರುತ್ತಾರೆ. ಇದು ನಿಜವಾದರೆ ಎಚ್ಚತ್ತಮೇಲೆ ಮತ್ತೆ ಏತಕ್ಕೆ ಅದೇ ಮೃತ್ಯುರೂಪಗಳು ಜನರಿಗೆ ಗಂಟು ಬೀಳುತ್ತಿವೆ ? ಹೀಗೆಯೇ ಸುಷುಪ್ತಿಯಲ್ಲಿ ಅತ್ಯಂತಸ್ವಚ್ಛವಾದ ಅಮೃತವಾದ ಅದ್ವೈತಸ್ವರೂಪವನ್ನು ಪಡೆದುಕೊಳ್ಳುತ್ತಾನೆಂದೂ ಯಾಜ್ಞವಲ್ಕ್ಯರು ಹೇಳಿರುತ್ತಾರೆ ; ಆಗಲೂ ಎಚ್ಚತ್ತಾಗ ಮೊದಲಿನಂತೆ ಅದೇ ಮೃತ್ಯುರೂಪಗಳೇ ಏತಕ್ಕೆ ಮನುಷ್ಯನಿಗೆ ಗಂಟುಬೀಳುತ್ತವೆ ? ಈ ಪ್ರಶ್ನೆಗೆ ಉತ್ತರವನ್ನು ಕಂಡುಕೊಳ್ಳುವದು ಯುಕ್ತ . ಜನಕನು ಯಾಜ್ಞವಲ್ಕ್ಯರು ಹೇಳಿದ್ದನ್ನು ಒಪ್ಪಿಕೊಂಡನೆಂದು ಶ್ರುತಿಯಲ್ಲಿದೆ ; ಆದರೆ ಅವರಿಬ್ಬರೂ ಈಗ ಇಲ್ಲ. ನಮ್ಮ ಅನುಭವದಲ್ಲಿಯೂ ಯಾಜ್ಞವಲ್ಕ್ಯರು ಹೇಳಿದಂತೆ ಸುಷುಪ್ತಿಯಲ್ಲಿ ನಮ್ಮ ಅಮೃತಸ್ವರೂಪವು ಕಾಣುತ್ತದೆಯೊ, ಅಥವಾ ಶ್ರುತಿಯಲ್ಲಿ ಹೇಳಿದೆ -ಎಂಬ ಒಂದೇ ಕಾರಣದಿಂದ ಇದಕ್ಕೆ ಹೂಗುಟ್ಟಬೇಕೊ ? - ಎಂಬುದನ್ನು ವಿಚಾರಿಸಬೇಕು.

ಈಗ, ಎಚ್ಚರನಿದ್ರೆಕನಸುಗಳನ್ನು ಒಂದಾಗುತ್ತಲೊಂದನ್ನು ನಾವು ನಿಜವಾಗಿ ಅನುಭವಿಸುತ್ತಿರುವೆವೆ ? ಈ ಅಸವ್ಥೆಗಳಿಗೆ ಒಂದಕ್ಕೊಂದಕ್ಕೆ ಯಾವ ಸಂಬಂಧವಿದೆ ? ಎಂಬುದನ್ನು ಪರಿಶೀಲಿಸಿ ನೋಡೋಣ. ನಮಗೆ ಎಚ್ಚರವಾದಮೇಲೆಯೇ ನಿದ್ರೆಬರುವದೆಂದೂ ನಿದ್ರೆಯಲ್ಲಿ ಕನಸೂ ಆಗುವದೆಂದೂ ನಮ್ಮೆಲ್ಲರ ಭಾವನೆ. ಎಚ್ಚರದ ವ್ಯವಹಾರದೃಷ್ಟಿಯಿಂದ ಹಾಗೆಂದೇ ಹೇಳಬೇಕಾಗಿದೆ. ಹೀಗೆಯೇ ಎಚ್ಚರದಲ್ಲಿರುವ ನಮ್ಮ ರೂಪವು ಕನಸಿನಲ್ಲಿ ಕಾಣಿಸುವದಿಲ್ಲ. ಕನಸಿನಲ್ಲಿ ತೋರುವ ರೂಪವು ಎಚ್ಚರದಲ್ಲಿ ಕಾಣಿಸುವದಿಲ್ಲ. ತನಿನಿದ್ರೆಯಲ್ಲಿ ಆ ಎರಡೂ ಕಾಣಿಸುವದಿಲ್ಲ. ಆದ್ದರಿಂದ ಆಯಾ ಅವಸ್ಥೆಯಲ್ಲಿ ಬೇರೆಬೇರೆಯಾಗಿಯೇ ಒಂದೊಂದು ರೂಪವು ನಮಗೆ ಕಾಣಿಸುತ್ತಿದೆ – ಎಂದು ಹೇಳಬಹುದಾದರೂ ಎಚ್ಚರವಾದ ಬಳಿಕ ಅದೇ ರೂಪವೇ ಮತ್ತೆಮತ್ತೆ ಕಾಣಿಸುತ್ತಿರುವದರಿಂದ ನಿದ್ರೆಯಲ್ಲಿಯೂ ಕನಸಿನಲ್ಲಿಯೂ ಅದು ಹೇಗೋ ಮರೆಯಾಗಿರುವದೆಂದು ಹೇಳಬಹುದೇ ಹೊರತು ಅದು ಆತ್ಯಂತಿಕವಾಗಿ ಹೋಗಿಯೇ ಬಿಟ್ಟಿರುವದೆಂದು ಹೇಳುವದಕ್ಕಾಗುವದಿಲ್ಲ. ಹೀಗಿರುವಲ್ಲಿ ನಮ್ಮ ಸ್ವರೂಪವು ಅದ್ವಿತೀಯವೆಂದು ಯಾಜ್ಞವಲ್ಕ್ಯರು ಹೇಳಿದ್ದನ್ನು ನಾವು ಹೇಗೆ ನಂಬುವದು ? ಇದೀಗ ವ್ಯವಹಾರದೃಷ್ಟಿಯಿಂದ ನಮ್ಮೆಲ್ಲರಿಗೂ ಸ್ವಾಭಾವಿಕವಾಗಿ ತೋರಿಕೊಳ್ಳುವ ಶಂಕೆ.

ಆದರೆ 'ಎಚ್ಚರವಾದಮೇಲೆ ನಿದ್ರೆ, ಅದಾದ ಬಳಿಕ ಕನಸು, ಅಲ್ಲಿಂದ ಎಚ್ಚರ – ಹೀಗೆ ನಮಗೆ ಅವಸ್ಥೆಗಳು ನಿಜವಾಗಿಯೂ ಒಂದಾಗುತ್ತಲೊಂದು ಆಗುತ್ತಿರುವವೆ ?' ಎಂಬುದೀಗ ಪ್ರಶ್ನೆ. ಘಟನೆಗಳು ಒಂದಾಗುತ್ತಲೂ ಒಂದು ಆಗುವವೆಂಬುದನ್ನು ನಾವು ಹೇಗೆ ಗೊತ್ತುಮಾಡಿಕೊಳ್ಳುತ್ತಿದೇವೆಂಬುದನ್ನು ಪರಿಶೀಲಿಸಿದರೆ ಈ ಪ್ರಶ್ನೆಗೆ ಉತ್ತರವು ದೊರಕುತ್ತದೆ. ಒಬ್ಬನು ಬೆಳಿಗ್ಗೆ ಊಟವನ್ನು ಮಾಡಿಕೊಂಡು ಎತ್ತುಗಳು, ನೇಗಿಲು – ಇವುಗಳೊಡನೆ ಹೊಲಕ್ಕೆ ಹೋಗಿ ಅಲ್ಲಿ ಸ್ವಲ್ಪಹೊತ್ತು ನೆಲವನ್ನು ಉತ್ತು, ಆಬಳಿಕ ವಿಶ್ರಮಿಸಿಕೊಂಡು ಎತ್ತುಗಳಿಗೂ ನೀರುಕುಡಿಸಿ ಸಾಯಂಕಾಲಕ್ಕೆ ಮನೆಗೆ ಬಂದನು. ಈ ದೃಷ್ಟಾಂತದಲ್ಲಿ ಊಟ , ನೇಗಿಲನ್ನೂ ಎತ್ತುಗಳನ್ನೂ ಹೊಲಕ್ಕೆ ತೆಗೆದುಕೊಂಡು ಹೋದದ್ದು , ನೆಲವನ್ನು ಉತ್ತದ್ದು , ವಿಶ್ರಾಂತಿಯನ್ನು ಮಾಡಿಕೊಂಡು ಮನೆಗೆ ಬಂದದ್ದು – ಈ ಘಟನೆಗಳು ಒಂದಾಗುತ್ತಲೊಂದು ಆದದ್ದು , ಇವೆಲ್ಲ ಒಂದೇ ಕಾಲಪ್ರವಾಹದಲ್ಲಿ ಆದದ್ದು ನಮ್ಮ ಅರಿವಿನಲ್ಲಿಯೇ ಇರುತ್ತವೆ.

ಆದರೆ 'ರಾತ್ರಿ ಹತ್ತು ಘಂಟೆಗೆ ಮಲಗಿ ಅಲ್ಲಿ ಒಂದು ಕನಸನ್ನು ಕಂಡು ಬೆಳಿಗ್ಗೆ ಆರು ಘಂಟೆಗೆ ಎಚ್ಚರವಾಯಿತು' ಎಂಬಲಿ ಹೀಗಿದೆಯೇ ? ಎಚ್ಚರವೆಂಬ

ಅವಸ್ಥೆಯಿರುವವರೆಗೂ ಅವನಿಗೆ ಹೊರಗಿನ ಘಟನೆಗಳು ಒಂದೊಂದಾಗಿ ಆದದ್ದರ ಅರಿವು ಆದಂತೆ, ಕನಸಿನಲ್ಲಿ ಆದದ್ದರ ಅರಿವೂ ಇತ್ತೆ? ಕನಸಿನಲ್ಲಿ ತಾನು ಯಾವದೋ ಒಂದು ಹೊಸದೇಶಕ್ಕೆ ಹೋಗಿದ್ದಂತೆ, ಅಲ್ಲಿ ತನ್ನನ್ನು ಜನರು ರಾಜನನ್ನಾಗಿ ಆರಿಸಿಕೊಂಡು ಪಟ್ಟಾಭಿಷೇಕವನ್ನು ಮಾಡಿಸಿದಂತೆ, ಅಲ್ಲಿ ಇವನು ಹೊಸದಾಗಿ ಒಬ್ಬ ಸುಂದರಸ್ತ್ರೀಯನ್ನು ಮದುವೆಯಾಗಿ ಅವಳೊಡನೆ ಸುಖದಿಂದಕಾಲವನ್ನು ಕಳೆದಂತೆ, ಒಂದು ದಿನ ರಾತ್ರೆ ರಾಣಿಯ ಸಖಿಯು ಮಡಿಸಿಕೊಟ್ಟ ತಾಂಬೂಲವು ದೈವಿಕವಾಗಿ ಕೈಯಿಂದ ನೆಲದಮೇಲಕ್ಕೆ ಬಿದ್ದಂತೆ, ರಾಜನಾದ ತನಗೆ ಸಿಟ್ಟುಬಂದು ಅವಳನ್ನು ಹೊಡೆದಂತೆ, ಕನಸಾಗಿ ತಟ್ಟನೆ ಎಚ್ಚರುತ್ತಾನೆ. ರಾತ್ರಿಯಲ್ಲಿ ಇನ್ನೂ ಹನ್ನೆರಡು ಘಂಟೆಯಾಗಿದೆ , ಅವನ ಮೋಟುಕ್ಕೈ ಹತ್ತಿರವಿರುವ ಕಂಬಕ್ಕೆ ಬಡಿದದ್ದರಿಂದ ಅದಕ್ಕೆ ನೋವಾಗಿದೆ! ಇಲ್ಲಿ ಎಚ್ಚರದ ಕಾಲಕ್ಕೂ ಕನಸಿನ ಕಾಲಕ್ಕೂ ಹೊಂದಿಕೆಯೇ ಇಲ್ಲ. ಈ ಎರಡವಸ್ಥೆಗಳ ದೇಶಕ್ಕಾಗಲಿ, ಅಲ್ಲಿ ತೋರಿದ ಘಟನೆಗಳಿಗಾಗಲಿ ಯಾವ ಸಂಬಂಧವೂ ಎಳ್ಳಷ್ಟೂ ಇಲ್ಲ ! ಎರಡವಸ್ಥೆಗಳಲ್ಲಿದ್ದ ಅದೇ ಮನುಷ್ಯನ ಸ್ವರೂಪವು ಬೇರೆಬೇರೆಯಾಗಿದೆ, ಅವಸ್ಥೆಗಳೆರಡರಲ್ಲಿಯೂ ಕಂಡ ದೃಶ್ಯಗಳೂ ಅತ್ಯಂತ ಭಿನ್ನವಾಗಿವೆ! ಈ ಸಂದರ್ಭದಲ್ಲಿ ಎಚ್ಚರದ ಕಾಲವಾಗಲಿ, ಎಚ್ಚರದ ಅರಿವಾಗಲಿ ಕನಸಿನಲ್ಲಿರಲೇಇಲ್ಲ. ಹೀಗಿರುವಲ್ಲಿ 'ಎಚ್ಚರವಾದಮೇಲೆ' ಕನಸಾಯಿತು – ಎನ್ನುವದು ಅನುಭವಕ್ಕೆ ಹೊಂದಿಕೆಯಾದೀತೆ ? ಇದನ್ನು ನಾವು ಸಾವಧಾನವಾಗಿ ಆಲೋಚಿಸಬೇಕು.

ನಮ್ಮ ಅನುಭವವನ್ನು ಆಧಾರವಾಗಿಟ್ಟುಕೊಂಡು ನೋಡಿದರೆ 'ಇಲ್ಲಿಯವರೆಗೆ ಎಚ್ಚರವಾಯಿತು, ಇನ್ನುಮುಂದಕ್ಕೆ ಗಾಢನಿದ್ರೆ ಪ್ರಾರಂಭವಾಗುವದು ' – ಎಂದು ಯಾರಿಗೂ ಅರಿವಾಗುವದಿಲ್ಲ . 'ನಿದ್ರೆಯು ಮುಗಿಯಿತು, ಈಗ ಎಚ್ಚರಕ್ಕೆ ಬರುತ್ತಿದ್ದೇನೆ.' ಎಂದೂ ಅರಿವಾಗುವದಿಲ್ಲ. ಹೀಗಿರುವಲ್ಲಿ ಈ ಎರಡರೊಳಗೆ ಒಂದು ಅವಸ್ಥೆಯು 'ಆದಮೇಲೆ' ಮತ್ತೊಂದು ಆಗುವದು – ಎಂಬ ಮಾತಿಗೆ ಅರ್ಥವೇ ಇಲ್ಲವೆಂದಾಯಿತು. ಎಚ್ಚೆತ್ತಬಳಿಕ 'ಈವರೆಗೆ ನಿದ್ರಿಸುತ್ತಿದ್ದೆನು, ಅಥವಾ ಕನಸು ಕಾಣುತ್ತಿದ್ದೆನು ; ಈಗತಾನೆ ಎಚ್ಚೆತ್ತೆನು 'ಎಂದು ಭಾಸವಾಗುವದು ನಿಜ ; ಆದರೆ ಅಲ್ಲಿ ನಮ್ಮ ವ್ಯವಹಾರದಲ್ಲಿ ನಾವು ಪರಾಮರ್ಶಿಸಿರುವ 'ಈವರೆಗೆ' , 'ಈಗ ' – ಇವೆರಡೂ ಎಚ್ಚರಕ್ಕೆ ಸೇರಿದವುಗಳಾಗಿವೆ. ಎಚ್ಚರದಲ್ಲಿ 'ನಾನು' ಎಂಬ ರೂಪದ ಪ್ರಮಾತೃ (ಅರಿಯುವವನು)ಇರುತ್ತಾನೆ, ಕಾಲವೂ ಇರುತ್ತದೆ ; ಆದರೆ ಸುಷುಪ್ತಿಯಲ್ಲಿ ದ್ರಷ್ಟೃ , ದೃಶ್ಯ , ದರ್ಶನ (ನೋಡುವವನು, ನೋಡಬೇಕಾಗಿರುವ ವಸ್ತು , ನೋಟ) ಎಂಬ

ಭೇದವಾಗಲೀ, ಕಾಲದೇಶಗಳಾಗಲಿ ಇರುವದೇಇಲ್ಲ. ಆದ್ದರಿಂದ 'ಎಚ್ಚರವಾದಮೇಲೆ ನಿದ್ರೆಯಾಗುತ್ತದೆ' ಎಂದು ಎಲ್ಲರಿಗೂ ತಟ್ಟನೆ ತೋರಿದರೂ 'ಅನುಭವಕ್ಕೆ ವಿರುದ್ಧವಾದ್ದರಿಂದ ಅದು ಭ್ರಾಂತಿಯೇ. ನೂರು ಜನರು ಹಗ್ಗವನ್ನು ಹಾವೆಂದು ತಿಳಿದರೂ ಅದು ಹಾವಾಗಲಾರದಷ್ಟೆ?

ಇದರಂತೆ ಕನಸು ಮತ್ತು ಎಚ್ಚರಗಳಿಗೂ ಕಾಲದಲ್ಲಿ ಅನುಕ್ರಮವಿರುವದಿಲ್ಲ ; 'ಈವರೆಗೆ ಕನಸನ್ನು ಕಾಣುತ್ತಿದ್ದೆ , ಈಗ ಎಚ್ಚೆತ್ತೆ ' ಎಂದೇ ತೋರುತ್ತಿದ್ದರೂ ಆ ಭಾವನೆಯು ಅನುಭವಕ್ಕೆ ವಿರುದ್ಧವಾಗಿರುತ್ತದೆ. ಏಕೆಂದರೆ ಎಚ್ಚರದಲ್ಲಿರುವ ಕಾಲ ಪ್ರವಾಹವೇ ಬೇರೆ, ಕನಸಿನಲ್ಲಿರುವ ಕಾಲಪ್ರವಾಹವೇ ಬೇರೆ ; ಹೀಗಿರುವಲ್ಲಿ ಕನಸಾದ ಮೇಲೆ ಎಚ್ಚರವೆಂಬುದು ಹೇಗಾದೀತು ? ಸಮಾನಕಾಲವಾಗಿದ್ದರೇ ಅಲ್ಲವೆ , 'ಆಗ' , 'ಈಗ ', 'ಇನ್ನುಮೇಲೆ' ಎಂಬ ವಿಭಾಗವು ಸರಿಯಾದೀತು ? ಶ್ರೀಗೌಡಪಾದರು ಇದನ್ನು ಸ್ಪಷ್ಟವಾಗಿ ಹೀಗೆಂದು ತಿಳಿಸಿಕೊಟ್ಟಿರುತ್ತಾರೆ :

**ಚಿತ್ತಕಾಲಾ ಹಿ ಯೇಽನ್ತಸ್ತು ದ್ವಯಕಾಲಾಶ್ಚ ಯೇ ಬಹಿಃ ।**
**ಕಲ್ಪಿತಾ ಏವ ತೇ ಸರ್ವೇ ವಿಶೇಷೋ ನಾನ್ಯಹೇತುಕಃ ॥** ಗೌ.ಕಾ. ೨-೧೬
**ಅವ್ಯಕ್ತಾ ಏವ ಯೇಽನ್ತಸ್ತು ಸ್ಫುಟಾ ಏವ ಚ ಯೇ ಬಹಿಃ ।**
**ಕಲ್ಪಿತಾ ಏವ ತೇ ಸರ್ವೇ ವಿಶೇಷಸ್ತ್ವಿನ್ದ್ರಿಯಾನ್ತರೇ ॥** ಗೌ.ಕಾ. ೨-೧೫.

ಸ್ವಪ್ನದಲ್ಲಿ ಕೆಲವು ಚಿತ್ತಕಾಲವಾಗಿರುತ್ತವೆ. ಉದಾರಹಣೆಗೆ ಚಿತ್ತದಲ್ಲಿ ಯಾವಾಗ ವೃತ್ತಿಯು ಏಳುತ್ತದೆಯೋ ಆಗಲೇ ಭಯ, ಆಶ್ಚರ್ಯ - ಮುಂತಾದವುಗಳು ಆಗುತ್ತವೆ. ಅವು ನಮ್ಮ ಒಳಗೇ ಇರುತ್ತವೆ. ಆದರೆ ಹೊರಗಿರುವ ವಸ್ತುಗಳು 'ಇಂತಿಷ್ಟು ಕಾಲ' ಎಂಬ ಕಾಲದ ಅಳತೆಯುಳ್ಳವಾಗಿರುತ್ತವೆ. ಎಚ್ಚರದಲ್ಲಿಯೂ ಹಾಗೆಯೇ ಭಾವಗಳು ಚಿತ್ತವೃತ್ತಿಯ ಕಾಲದಲ್ಲಿ ಮಾತ್ರ ಇರುತ್ತವೆ ; ಹೊರಗಿನ ವಸ್ತುಗಳು 'ಅದಿರುವಷ್ಟು ಕಾಲ ಇದೂ ಇರುತ್ತದೆ ' ಎಂದು ಕಾಲ ಅಳತೆಯುಳ್ಳವಾಗಿರುತ್ತವೆ. ಕನಸಿನಲ್ಲಿ ಹೇಗೆ ಇವೆರಡೂ ಕಲ್ಪಿತವೇ ಆಗಿರುವವೋ ಎಚ್ಚರದಲ್ಲಿಯೂ ಹಾಗೆಯೇ. ಅವು ಕಲ್ಪಿತವಲ್ಲವೆಂಬುದಕ್ಕೆ ಗುರುತೇನೂ ಇರುವದಿಲ್ಲ. ಕನಸಿನಲ್ಲಿ ಮನಸ್ಸಿನಲ್ಲಿರುವ ವಾಸನೆಗಳು ಅವ್ಯಕ್ತವಾಗಿರುತ್ತವೆ ; ಇಂದ್ರಿಯಗಳಿಗೆ ಗೋಚರವಾಗುವ ಹೊರಗಿನ ವಸ್ತುಗಳು ಸ್ಫುಟವಾಗಿರುತ್ತವೆ. ಹಾಗೆ ಅವು ಅವ್ಯಕ್ತವಾಗಿಯೂ ಸ್ಫುಟವಾಗಿಯೂ ಇರುವದಕ್ಕೆ ಮನಸ್ಸು , ಚಕ್ಷುರಾದಿಗಳು - ಎಂಬ ಬೇರೆಬೇರೆಯ ಇಂದ್ರಿಯಗಳು ನಿಮಿತ್ತವೇ ಹೊರತು ಅವುಗಳು ಯಾವವೂ ಸತ್ಯವಾಗಿರುವದಿಲ್ಲವೆಂಬುದು ಸ್ಪಷ್ಟ .

ಎಚ್ಚರದಲ್ಲಿಯೂ ಹಾಗೆಯೇ ; ಮನಸ್ಸಿನಲ್ಲಿರುವ ವಾಸನೆಗಳು ಅವ್ಯಕ್ತವಾಗಿರುತ್ತವೆ ; ಹೊರಗೆ ಕಾಣುವ ವಸ್ತುಗಳು ಸ್ಫುಟವಾಗಿರುತ್ತವೆ. ಅಷ್ಟು ಮಾತ್ರದಿಂದ ಅವು ಕಲ್ಪಿತವಲ್ಲವೆಂದು ಹೇಳುವದು ಹೇಗೆ ? ಹೀಗಿದ್ದರೂ ಈ ಎರಡು ಅವಸ್ಥೆಗಳಲ್ಲಿಯೂ ಹಿಂದೆ ನಾನು ನೋಡುತ್ತಿದ್ದ ಪ್ರಪಂಚವೇ ಈಗಲೂ ಕಾಣಿಸುತ್ತಿರುವದು ; 'ಆ ನಾನೇ ಈ ನಾನು' ಎಂಬ ಸ್ಮರಣೆಯೂ ಪ್ರತ್ಯಭಿಜ್ಞೆಯೂ ನಮಗೆ ತೋರುತ್ತಲೇಇರುವದು ! ಒಟ್ಟಿನಲ್ಲಿ ಎಚ್ಚರದಲ್ಲಿ ತೋರುವ ಪ್ರಪಂಚವೂ ಕನಸಿನ ಪ್ರಪಂಚವೂ ಎರಡೂ ಕಲ್ಪಿತವೆನ್ನಬೇಕೇ ಹೊರತು ಯಾವ ಕಾರಣದಿಂದಲೂ ಅವು ಪರಮಾರ್ಥವಾಗಿಯೂ ಇರುವವೆನ್ನುವದಕ್ಕಾಗದು. ಎಚ್ಚರದ ಪ್ರಪಂಚವು ಎಚ್ಚರದಲ್ಲಿ ಮಾತ್ರ ತೋರುತ್ತಿರುತ್ತದೆ ; ಕನಸಿನಲ್ಲಿರುವಂತೆ ಕಾಣುವ ಪ್ರಪಂಚವು ಕನಸಿನಲ್ಲಿ ಮಾತ್ರ ತೋರುತ್ತಿರುತ್ತದೆ. ಕನಸಿನಲ್ಲಿ ತೋರುವ ಹುಸಿತೋರಿಕೆಗಳು ಯಾವವೂ ಹೇಗೆ ಎಚ್ಚರಕ್ಕೆ ಬರಲಾರವೋ, ಹಾಗೆಯೇ ಎಚ್ಚರದಲ್ಲಿರುವ ಪ್ರಪಂಚವೂ ಕನಸಿನೊಳಕ್ಕೆ ತೂರಿ ಬರಲಾರದು. ಕನಸೂ ಕನಸಿನ ಕಾಲಕ್ಕೆ ಎಚ್ಚರವೆಂದೇ ತೋರುತ್ತಿರುತ್ತದೆ. ಆದ್ದರಿಂದ ಈ ಎರಡು ಅವಸ್ಥೆಗಳೂ ಸ್ವತಂತ್ರವೇ ಆಗಿರುತ್ತವೆ, ಒಂದಕ್ಕೊಂದಕ್ಕೆ ಸಂಬಂಧವಿರುವದಿಲ್ಲ . ಒಂದಿರುವಾಗ ಇನ್ನೊಂದಿಲ್ಲ.

ಆದರೆ ನಮ್ಮ ಆತ್ಮನು ಮಾತ್ರ ಹೀಗಲ್ಲ. ಇವನು ಎಚ್ಚರದಲ್ಲಿಯೂ ಕನಸಿನಲ್ಲಿಯೂ ಸುಷುಪ್ತಿಯಲ್ಲಿಯೂ ಇದ್ದೇಇರುತ್ತಾನೆ. ಶರೀರೇಂದ್ರಿಯಸಂಘಾತಕ್ಕೆ ಕಟ್ಟುಬಿದ್ದಿರುವಂತೆ ತೋರುತ್ತಿರುವ ಇವನ ರೂಪವು ಆಯಾ ಪ್ರಪಂಚಕ್ಕೆ ಸೇರಿದ್ದು ; ಎಚ್ಚರದಲ್ಲಿರುವ ರೂಪವು ಕನಸಿನಲ್ಲಿಲ್ಲ , ಕನಸಿನಲ್ಲಿರುವ ರೂಪವು ಎಚ್ಚರದಲ್ಲಿಲ್ಲ . ಮೂರವಸ್ಥೆಗಳಲ್ಲಿಯೂ ಇವನ ಸಾಕ್ಷಿಸ್ವರೂಪವು ಮಾತ್ರ ಹಾಗೆಯೇ ಇದ್ದುಕೊಂಡೇ ಇರುತ್ತದೆ. ಇದಿಷ್ಟೂ ಈ ದಿನದ ವಿಚಾರದಿಂದ ಸಿದ್ಧವಾಗಿರುತ್ತದೆ.

# ೧೬. ಸುಷುಪ್ತಿಯ ವಿಮರ್ಶೆ

(29-8-64)

**'ಅಧ್ಯಾತ್ಮವಿದ್ಯಾ ವಿದ್ಯಾನಾಮ್'** ಎಂದು ಭಗವಂತನು ಅಧ್ಯಾತ್ಮವಿದ್ಯೆಯನ್ನು ತನ್ನ ವಿಭೂತಿಯೆಂದು ಪರಿಗಣಿಸುವದಕ್ಕೆ ಮುಖ್ಯಕಾರಣವೇನೆಂದರೆ : ಇದು ಎಲ್ಲಾ ವಿದ್ಯೆಗಳೂ ಕೊನೆಗೆ ಬಂದು ಮುಟ್ಟಬೇಕಾಗಿರುವ ಪರಮಾತ್ಮಸ್ವರೂಪವನ್ನು ಕುರಿತದ್ದಾಗಿರುತ್ತದೆ ; ಈ ವಿದ್ಯೆಯ ವಿಷಯವನ್ನು ಅರಿತರೆ ಎಲ್ಲಾ ವಿದ್ಯೆಗಳ ವಿಷಯದ

ತತ್ತ್ವವನ್ನೂ ಅರಿತುಕೊಂಡಂತೆ ಆಗಿರುತ್ತದೆ ; ಮತ್ತು ತತ್ತ್ವತಃ ಈ ವಿದ್ಯೆಯು ಆತ್ಮನ ಸ್ವರೂಪಜ್ಞಾನವೇ ಆಗಿರುತ್ತದೆ. ಯಾಜ್ಞವಲ್ಕ್ಯರು ಜನಕನಿಗೆ ಈ ವಿದ್ಯೆಯನ್ನು ತಿಳಿಸಿಕೊಡುವದಕ್ಕೆಂದೇ ಆತ್ಮಜ್ಯೋತಿಯಿಂದ ಜನರು ಹೇಗೆ ವ್ಯವಹರಿಸುತ್ತಾರೆಂಬುದನ್ನು ತಿಳಿಯಹೇಳುವದಕ್ಕೆ ಹೊರಟಿರುತ್ತಾರೆ. ಎಚ್ಚರದಲ್ಲಿ ನಡೆಯುವ ವ್ಯವಹಾರವು ಮಾತ್ರವೇ ಅಲ್ಲ , ಎಚ್ಚರದ ದೃಷ್ಟಿಯಿಂದ ತೋರುವ ಅವಸ್ಥಾತ್ರಯ ವ್ಯವಹಾರವೂ ಈ ಆತ್ಮಜ್ಯೋತಿಯ ನೆರವಿನಿಂದಲೇ ಸಾಗುತ್ತಿರುತ್ತದೆ.

ಜೀವನು ಸ್ವಪ್ನಾವಸ್ಥೆಗೆ ಬರುತ್ತಲೂ ಅವಿದ್ಯಾಕಾಮಕರ್ಮಗಳೆಂಬ ಮೃತ್ಯುವಿನ ರೂಪಗಳಾದ ಕಾರ್ಯಕರಣಸಂಘಾತವನ್ನು ದಾಟುತ್ತಾನೆ - ಎಂಬ ಯಾಜ್ಞವಲ್ಕ್ಯರ ಬೋಧೆಯ ವಿಷಯಕ್ಕೆ 'ಎಚ್ಚತ್ತಮೇಲೆ ಮತ್ತೂ ಈ ರೂಪಗಳು ಅವನಿಗೆ ಗಂಟುಬೀಳುವವಲ್ಲ ! ' ಎಂಬ ಶಂಕೆಯು ಬರಲಾಗಿ ಅವುಗಳ ಪರಿಹಾರಕ್ಕಾಗಿ - ಕನಸಿನಂತೆಯೇ ಎಚ್ಚರದಲ್ಲಿಯೂ ಯಾವ ವ್ಯವಹಾರದ ಸಂಬಂಧವೂ ಆತ್ಮನಿಗೆ ನಿಜವಾಗಿ ಇರುವದಿಲ್ಲ . ಎಚ್ಚರವಾದ ಬಳಿಕ ಕನಸು ಅಥವಾ ಕನಸಾದ ಬಳಿಕ ಎಚ್ಚರವು ಆಗುತ್ತದೆ ಎಂದು ತಿಳಿಯುವದೇ ಮೊದಲು ತಪ್ಪು ; ಏಕೆಂದರೆ ಎಚ್ಚರದಲ್ಲಿಯೂ ಕನಸಿನಲ್ಲಿಯೂ ಬೇರೆಬೇರೆಯ ಕಾಲಪ್ರವಾಹಗಳಿರುತ್ತವೆ. ಆದ್ದರಿಂದ ಎಚ್ಚರದ ಕಾಲವೇ ಕನಸಿನಲ್ಲಿರುತ್ತದೆ ಎಂದಾಗಲಿ ಎಚ್ಚರದ ಕಾಲಮಾನದಲ್ಲಿ ಇಂತಿಷ್ಟು ಭಾಗದಲ್ಲಿ ನಾವು ಕನಸುಕಾಣುತ್ತೇವೆಂದಾಗಲಿ ತಿಳಿಯುವದು ಸರಿಯಲ್ಲ . ಮನುಷ್ಯನು ತನ್ನ ನೆರಳನ್ನು ಒಂದುಕಡೆ ಬಿಟ್ಟುಹೋಗುವದಕ್ಕೆ ಹೇಗೆ ಆಗಲಾರದೋ ಹಾಗೆಯೇ ಜಾಗ್ರತ್ತನ್ನು ಬಿಟ್ಟು ಜಾಗ್ರತ್ಕಾಲವು ಮುಂದಕ್ಕೆ ಹೋಗಲಾರದು. ಅವಸ್ಥೆಗಳು ಒಂದೇ ಕಾಲದಲ್ಲಿ ಆಗುವದಿಲ್ಲವಾದ್ದರಿಂದ ಅವು ಒಂದಾಗುತ್ತಲೊಂದು ಆಗುವವೆಂದು ತಿಳಿಯುವದು ಸರಿಯಲ್ಲ; ಸರಿಯಾಗಿ ನೋಡಿದರೆ ಅವು ಕಾಲವನ್ನು ಆಧಾರವಾಗಿಟ್ಟುಕೊಂಡು ಸಾಗುತ್ತಿಲ್ಲವಾದ್ದರಿಂದ 'ಕಾಲದಲ್ಲಾಗುವ ವಿಶೇಷ' ಎಂಬರ್ಥದಲ್ಲಿ ಅವಸ್ಥೆಗಳೆನ್ನುವದಕ್ಕೆ ಬರುವದೇಇಲ್ಲ; ಅವಸ್ಥೆಗಳು ಮೂರು ಎಂದು ಎಣಿಸುವದಕ್ಕೂ ಆಗುವದಿಲ್ಲ - ಎಂದು ತೋರಿಸಿಕೊಟ್ಟದ್ದಾಗಿರುತ್ತದೆ. ಈಗ ಸುಷುಪ್ತಿಯ ವಿಚಾರವನ್ನು ಇನ್ನಷ್ಟು ಒಳಹೊಕ್ಕು ಪರಿಶೀಲಿಸೋಣ.

'ಸುಷುಪ್ತಿಯಲ್ಲಿ ಜಾಗ್ರತ್ತಿನ ಬುದ್ಧಿಯ ಸಂಸ್ಕಾರವು ಉಳಿದುಕೊಂಡಿರುತ್ತದೆ ; ಏಕೆಂದರೆ ಎಚ್ಚತ್ತಕೂಡಲೆ ಮತ್ತೆ ನಾವು ಕಾರ್ಯಶೇಷವನ್ನು ನೆನಪಿಗೆ ತಂದುಕೊಂಡು ಅದನ್ನು ಮುಗಿಸುವದಕ್ಕೆ ಪ್ರಯತ್ನಿಸುತ್ತೇವೆ' ಎಂದು ಜನರೆಲ್ಲ ಸಾಮಾನ್ಯವಾಗಿ ನಂಬಿರುತ್ತಾರೆ. ಇದಕ್ಕೆ ಕಾರಣವೇನೆಂದರೆ ಎಚ್ಚರದಲ್ಲಿರುವ ಶರೀರೇಂದ್ರಿಯಗಳ

ಸಂಘಾತವು ಎಚ್ಚರವು ಮುಗಿದಮೇಲೂ ನಾವು ನಿದ್ರಿಸುತ್ತಿರುವಾಗ ಹಾಗೆಯೇ ಇದ್ದುಕೊಂಡಿರುತ್ತದೆ ಎಂಬ ಅಭಿನಿವೇಶವು ನಮ್ಮನ್ನೆಲ್ಲ ಕಾಡುತ್ತಿರುತ್ತದೆ. ಎಚ್ಚರದಲ್ಲಿ ಕೂಡ ನಮಗೆ ಶರೀರಾದಿಗಳ ಸಂಬಂಧವು ನಿಜವಾಗಿದೆ ಎನ್ನುವದನ್ನು ಸಪ್ರಮಾಣವಾಗಿ ತೋರಿಸಿಕೊಡುವದಾಗುವದಿಲ್ಲ. ನಮ್ಮ ಆತ್ಮನಿಗೂ ನಮ್ಮದೆಂದು ನಾವುಗಳು ಸಾಮಾನ್ಯವಾಗಿ ಭಾವಿಸಿಕೊಳ್ಳುತ್ತಿರುವ ಶರೀರಕ್ಕೂ ಅಧ್ಯಾಸವಲ್ಲದೆ - ಬರಿಯ ಕಲ್ಪನೆಯಲ್ಲದೆ - ಮತ್ತೆ ಯಾವ ಸಂಬಂಧವೂ ಇರುವದೇಇಲ್ಲ. ಇದನ್ನು ಕೇಳಿ ಸಾಮಾನ್ಯಜನರಂತೆಯೇ ಜಾಗ್ರದಭಿಮಾನವುಳ್ಳ ತತ್ತ್ವವಿಚಾರಕರುಕೂಡ ಬೆರಗಾಗುತ್ತಿದ್ದಾರೆ. ಅಂತೂ ಹೀಗೆ ಎಚ್ಚರದ ಸಂಬಂಧವು ಸ್ವಪ್ನಕ್ಕೇ ಇಲ್ಲದಿರುವದರಿಂದ ಸುಷುಪ್ತಿಗೆ ಅದರ ಸಂಬಂಧವು ಒಂದಿಷ್ಟೂ ಇಲ್ಲವೆಂಬುದನ್ನು ಹೇಳಬೇಕಾದದ್ದೇ ಇಲ್ಲ. ನಿಜವಾಗಿ 'ಸುಷುಪ್ತಿ' ಎಂದರೇನೆಂಬುದನ್ನು ಶ್ರುತಿ ಹೀಗೆ ವಿವರಿಸುತ್ತದೆ :

**ಯತ್ರ ಸುಪ್ತೋ ನ ಕಂಚನ ಕಾಮಂ ಕಾಮಯತೇ ನ ಕಂಚನ ಸ್ವಪ್ನಂ ಪಶ್ಯತಿ ತತ್ಸುಷುಪ್ತಮ್ ॥** ಮಾಂ. ೫

'ಎಲ್ಲಿ ನಿದ್ರಿಸುತ್ತಿರುವವನು ಯಾವ ಕಾಮವನ್ನೂ ಬಯಸುವದಿಲ್ಲವೋ, ಯಾವ ಸ್ವಪ್ನವನ್ನೂ ಕಾಣುತ್ತಿರುವದಿಲ್ಲವೋ ಅದು ಸುಷುಪ್ತವು.' ಅಲ್ಲಿ 'ನಾನು' ಎಂಬುದೇ ಮೊದಲು ಇರುವದಿಲ್ಲ ; ಇನ್ನು 'ನನಗೆ ಬೇಕು' ಎಂಬುದೆಲ್ಲಿಂದ ಬರಬೇಕು? ಎರಡನೆಯ ವಸ್ತುವನ್ನು ಕಂಡರಲ್ಲವೆ, ಅದು 'ಬೇಕು ಅಥವಾ ಬೇಡ ' ಎಂಬ ಬುದ್ಧಿಯುಂಟಾಗುವದು ? ಕನಸಿನಲ್ಲಿ ಎರಡನೆಯ ವಸ್ತುವೊಂದು ಕಾಣಿಸುತ್ತಿರುತದೆ. ಎಚ್ಚರಕನಸುಗಳೆರಡೂ ಒಂದೇ ಬಗೆಯ ಅವಸ್ಥೆಗಳೆಂದೂ ಅವುಗಳಲ್ಲಿ ಒಂದಕ್ಕೊಂದಕ್ಕೆ ಯಾವ ವೈಲಕ್ಷಣ್ಯವನ್ನೂ ತೋರಿಸುವದಕ್ಕಾಗುವದಿಲ್ಲವೆಂದೂ ಆಗಲೇ ಕಂಡುಕೊಂಡದ್ದಾಗಿದೆಯಷ್ಟೆ ? ಆದ್ದರಿಂದ ಎಚ್ಚರಕನಸುಗಳೆರಡೂ ಈ ಅರ್ಥದಲ್ಲಿ ಕನಸೇ ; ತನಗಿಂತ ಬೇರೆಯಾಗಿರುವ ಎರಡನೆಯ ಪದಾರ್ಥವೊಂದನ್ನು ಕಾಣುತ್ತಿರುವ ಕಲ್ಪನಾವಸ್ಥೆಗಳಿವು. ಸುಷುಪ್ತಿಯಲ್ಲಿ ಹಾಗಿಲ್ಲ . ಆದ್ದರಿಂದ ಅಲ್ಲಿ ಕಾಮವು ಇಲ್ಲ. ಶರೀರ, ಇಂದ್ರಿಯಗಳು , ಮನಸ್ಸು , ಪ್ರಾಣ - ಇವು ಯಾವವೂ ಸುಷುಪ್ತಿಯಲ್ಲಿಲ್ಲ. ಜನನಮರಣ , ಕ್ಷುತ್ಪಿಪಾಸೆ , ಶೋಕಮೋಹ - ಇವುಗಳ ಭಯವು ಅಲ್ಲಿರುವಂತಿಲ್ಲ; ಯಾವ ನಿಮಿತ್ತದಿಂದ ಇವುಗಳ ಭಯವಿರಬೇಕೋ ಆ ಜೀವತ್ವವೂ ಅಲ್ಲಿಲ್ಲ . 'ಸುಷುಪ್ತಿ ಎಂದರೆ ಹೇಗೆ ಇರುತ್ತದೆ ? ' ಎಂದು ಕೇಳಿದರೆ ಅದಕ್ಕೆ ಭಾವರೂಪವಾದ ಯಾವ ವಿಶೇಷಣವನ್ನೂ ಹೇಳುವದಕ್ಕೆ ಬರುವದಿಲ್ಲ ; ಜಾಗ್ರತ್ಸ್ವಪ್ನಗಳಂತೆ ಯಾವದಿಲ್ಲವೋ ಅದೇ ಸುಷುಪ್ತಿ - ಎಂದು ಹೇಳಬೇಕಾಗಿದೆ.

ಏಕೆಂದರೆ ಸರಿಯಾಗಿ ನೋಡಿದರೆ ಅದು ಅವಸ್ಥೆಯೇ ಅಲ್ಲ. ಆ ಆತ್ಮವಸ್ತುವೇ ವ್ಯವಹಾರದಲ್ಲಿ ಸುಷುಪ್ತಿ ಎನಿಸಿಕೊಂಡಿದೆ, ಅಷ್ಟೆ.

ನಾವು ಸುಷುಪ್ತಿಯನ್ನು ಹೇಗೆ ಅರಿಯುತ್ತೇವೆ ? - ಎಂದು ಕೇಳಿದರೆ ಉತ್ತರವನ್ನು ಹೇಳುವದು ಕಷ್ಟ; ಏಕೆಂದರೆ ನಮ್ಮ ಆತ್ಮಸ್ವರೂಪಕ್ಕಿಂತ ವ್ಯತಿರಿಕ್ತವಾಗಿ ಅಲ್ಲಿ ಏನೂ ಇರುವದೇಇಲ್ಲ. ಅಲ್ಲಿ ಅರಿಯುವವನೂ ಇಲ್ಲ. ಅರಿಯಲ್ಪಡತಕ್ಕದ್ದೂ ಇರುವದಿಲ್ಲ; ಆಗಲಿ, ಅಲ್ಲಿ ನಮ್ಮ ಆತ್ಮಸ್ವರೂಪವನ್ನಾದರೂ ಹೇಗೆ ಅರಿಯಬೇಕು ? ಅರಿಯುವವನೇ ಇಲ್ಲದೆ ಅರಿಯುವದು ಹೇಗೆ ? - ಎಂದರೆ ಅದು ನಿರ್ವಿಕಲ್ಪಕಜ್ಞಾನ - ಮನಸ್ಸಿನ ವೃತ್ತಿಗಳನ್ನು ಏರ್ಪಡಿಸಿಕೊಂಡು, 'ಇದು ಇಂಥದ್ದು' ಎಂದು ಅರಿಯುವ ಬಗೆಯಲ್ಲ, ಅದು - ನಮ್ಮ ಸ್ವರೂಪವನ್ನು ಸ್ವರೂಪದಿಂದಲೇ ಅರಿಯುವ ರೀತಿಯದು. ಆಗ ಇರುವ ಆತ್ಮಸ್ವರೂಪವನ್ನು ಶ್ರುತಿ ಹೀಗೆಂದು ವರ್ಣಿಸಿರುತ್ತದೆ :

**ಏಕೀಭೂತಃ ಪ್ರಜ್ಞಾನಘನ ಏವಾನಂದಮಯೋ ಹ್ಯಾನಂದಭುಕ್ ಚೇತೋಮುಖಃ ಪ್ರಾಜ್ಞಃ ||** ಮಾಂ. ೫

ಅಲ್ಲಿ ಜಾಗ್ರತ್ಸ್ವಪ್ನಗಳಲ್ಲಿರುವಂತೆ ಪ್ರಪಂಚವು ಬೇರೆಬೇರೆಯಾಗಿ ವಿಂಗಡಿಸಿಕೊಂಡಿರುವ ಪದಾರ್ಥಗಳಾಗಿ ಇರುವದಿಲ್ಲ. ಎಲ್ಲವೂ ಒಂದಾಗಿಬಿಟ್ಟಿರುತ್ತದೆ. ಅದೆಲ್ಲವೂ **'ಬರಿಯ ಇರವು'** ಎನಿಸಿಕೊಂಡಿರುತ್ತದೆ. 'ಕಲ್ಲಿನ ಇರವು', 'ಮಣ್ಣಿನ ಇರವು', 'ಬೆಟ್ಟದ ಇರವು', 'ನದಿಯ ಇರವು', 'ಕಡಲಿನ ಇರವು', - ಎಂದು ಪದಾರ್ಥಕ್ಕೆ ಸೇರಿಕೊಂಡು ತೋರುವ ವಿಶೇಷಣರೂಪದ ಇರವಲ್ಲ, ಅದು ; ವಿಶೇಷಣವಿಶೇಷ್ಯ ವಿಭಾಗವನ್ನೇ ತಳೆಯದ, ಬರಿಯ ಇರವು. ಆ 'ಇರವು' ಎಂಬುದೇ 'ಪ್ರಜ್ಞಾನಘನ' ಅರಿವಿನ ಗಟ್ಟಿ, ಬರಿಯ ಅರಿವು - ಎನಿಸಿಕೊಳ್ಳುತ್ತದೆ. 'ಇಂಥ ವಸ್ತುವನ್ನು, ಈ ಕರಣಗಳಿಂದ, ನಾನು ಅರಿಯುವೆನು' ಎಂಬಂತೆ ವಿಂಗಡವಿಂಗಡವಾಗಿರುವ ವಿಶೇಷಜ್ಞಾನವಲ್ಲ. ಗಡಿಗೆಯ ಜ್ಞಾನ, ಗಿಡದ ಜ್ಞಾನ, ನದಿಯ ಜ್ಞಾನ, ಬೆಟ್ಟದ ಜ್ಞಾನ - ಎಂದುಮುಂತಾಗಿ ಈಗ ನಮಗೆ ಆಗುತ್ತಿರುವ ಬಿಡಿಬಿಡಿಯ ಜ್ಞಾನಗಳು ಆಯಾ ವಿಷಯದ ಸಂಬಂಧದಿಂದ ಕೂಡಿಕೊಂಡೇ 'ಜ್ಞಾನ'ವೆನಿಸಿವೆ. ಅಲ್ಲಿಯಾದರೋ ಜ್ಞಾನಗಳೆಲ್ಲವೂ ಒಡವೆಗಳನ್ನು ಕರಗಿಸಿ ಒಟ್ಟುಮಾಡಿದ ಚಿನ್ನದ ಗಟ್ಟಿಯಂತೆ ಇರುವ, ಅಖಂಡವಾದ ಒಂದೇ ಜ್ಞಾನವಾಗಿಬಿಟ್ಟಿರುತ್ತವೆ. ಅದು ಆತ್ಮನ ಸ್ವರೂಪವೇ. ಇದರಂತೆ ಈಗ ನಾವು ವಿಷಯಗಳನ್ನು ಉಪಭೋಗಿಸಿ ಅರಿಯುವದರ ಫಲವಾಗಿ ಆಗುವ ಸುಖಗಳೆಲ್ಲವನ್ನೂ ಎರಕವಾಗಿಸಿದಂತೆ ಇರುವ 'ಆನಂದ' ಸ್ವರೂಪವದು. ಅಂತೂ ಸುಷುಪ್ತಿಯಲ್ಲಿ ನಮ್ಮ ಆತ್ಮಸ್ವರೂಪವೊಂದೇ

ಅಲ್ಲಿದ್ದುಕೊಂಡಿರುತ್ತದೆ. ಈಗಿನ ಪ್ರಪಂಚದಲ್ಲಿ ಕಾಣಬರುವ 'ಇರವು, ಅರಿವು, ಸುಖ'ಗಳೆಲ್ಲವೂ ಒಂದೇ ಒಂದು ಅಖಂಡಸಚ್ಚಿದಾನಂದಸ್ವರೂಪವಾದ ನಮ್ಮ ಸ್ವರೂಪವಾಗಿ ಉಳಿದುಕೊಂಡಿರುತ್ತವೆ.

ನಿದ್ರೆಯಲ್ಲಿ ನಾವು ಇರುತ್ತೇವೆಂಬ ವಿಷಯದಲ್ಲಿ ಯಾವ ಸಂಶಯವೂ ಇಲ್ಲ. ಅಲ್ಲಿ ನಾವು ಇರುವದಿಲ್ಲವೆಂದಾಗಿದ್ದರೆ ಯಾರೂ ನಿದ್ರೆಗೆಂದು ಸಜ್ಜಾಗುತ್ತಿರಲಿಲ್ಲ; 'ನಾವು ಎಲ್ಲಿ ಇಲ್ಲವಾಗಿಬಿಟ್ಟೇವೋ !' ಎಂದು ಅಂಜುತ್ತಿದ್ದರು. ಅಲ್ಲಿ ನಾವು ಅರಿಯುತ್ತೇವೆಂಬುದಕ್ಕೂ ಸಂಶಯವಿಲ್ಲ; 'ನಾನು ನಿದ್ರಿಸಿದೆನು' ಎಂಬ ಅನುಭವವು ನಮಗೆ ಏತರಿಂದ ಆಗುತ್ತದೆಯೋ ಅದೇ ನಮ್ಮ ಪ್ರಾಜ್ಞನರೂಪವು. 'ಸುಷುಪ್ತಿಯಲ್ಲಿ ನನಗೆ ಏನೂ ತಿಳಿಯಬರಲಿಲ್ಲ' ಎಂದು ಜನರು ಅಂದುಕೊಳ್ಳುತ್ತಿರುವದು ನಿಜ. ಆದರೆ 'ಅರಿಯಲಿಲ್ಲ' ಎಂದರೆ ಅರಿಯುವದಕ್ಕೆ ಏನೂ ಇರಲಿಲ್ಲ – ಎಂದು ಮಾತ್ರವೇ ಅಭಿಪ್ರಾಯವೇ ಹೊರತು, 'ಅಲ್ಲಿ ಜ್ಞಾನರೂಪನಾದ ನಾನು ಇರಲಿಲ್ಲ' ಎಂದು ಯಾರೊಬ್ಬರೂ ಅಭಿಪ್ರಾಯಪಡುವದಿಲ್ಲವೆಂಬುದು ಅವರವರ ಅನುಭವದಲ್ಲಿಯೇ ಇರತ್ತದೆ. 'ಸುಖವಾಗಿ ನಿದ್ರಿಸಿದೆನು' ಎಂದು ಎದ್ದವರು ಹೇಳಿಕೊಳ್ಳುವದು ಎಲ್ಲರಿಗೂ ತಿಳಿದಿದೆ; ನಿದ್ರಾವಸ್ಥೆಯಲ್ಲಿ ಯಾವ ವಿಷಯವನ್ನೂ ಉಪಭೋಗಿಸಿ ಸುಖಪಡುವದಿಲ್ಲವೆಂಬುದೂ ಎಲ್ಲರ ಅನುಭವದಲ್ಲಿಯೂ ಇದೆ. ಅಲ್ಲಿ ವಿಷಯವಿಷಯಿಭಾವವಿಲ್ಲದ ಅರಿವು ಹೇಗೆ ಇರುತ್ತದೆಯೋ ಹಾಗೆಯೇ ವಿಷಯವಿಷಯಿಭಾವವಿಲ್ಲದ ಆನಂದವೂ ಇರುತ್ತದೆ. 'ಸಂಸ್ಪರ್ಶಜವಾದ ಭೋಗಗಳು ಕೊನೆಗೂ ದುಃಖಕ್ಕೆ ಕಾರಣವಾಗುತ್ತವೆ' ಎಂದು ಭಗವಂತನು ಹೇಳಿರುತ್ತಾನಲ್ಲವೆ ? ಅಲ್ಲಿ ಹಾಗಿಲ್ಲ, ಬರಿಯ ಆನಂದವೇ ಇರುತ್ತದೆ. ಆ ಆನಂದಕ್ಕಾಗಿಯೇ ಜನರು ನಿದ್ರೆಯು ತಮಗೆ ಬರಲಿ ! – ಎಂದು ಹಾತುವರಿಯುತ್ತಿರುತ್ತಾರೆ, ಅದರ ಪ್ರಾಪ್ತಿಗಾಗಿಯೇ ಬೇಕಾದ ಹಾಸಿಗೆ, ಹೊದಿಕೆ – ಮುಂತಾದವುಗಳನ್ನು ಮರೆಯದೆ ಸಜ್ಜುಗೊಳಿಸುತ್ತಾರೆ.

ಇರವು, ಅರಿವು, ಆನಂದ – ಎಂದು ಸುಷುಪ್ತಿಯ ಆತ್ಮಸ್ವರೂಪವು ಮೂರು ತುಂಡುಗಳಾಗಿರುವದಿಲ್ಲ. ಒಂದೇ ದೀಪವನ್ನು, ಬೆಳಕು, ಕೆಂಪುವರ್ಣ, ಬಿಸಿ – ಎಂದು ಸಾಪೇಕ್ಷವಾಗಿ ನಾವು ಹೇಳಿಕೊಳ್ಳುವಂತೆ ಒಂದೇ ವಸ್ತುವನ್ನೇ ಸದ್ಘನ, ಚಿದ್ಘನ, ಆನಂದಘನ – ಎಂದು ವ್ಯವಹರಿಸುತ್ತೇವೆ. ವಿಷಯರೂಪವಾದ ಬರಿಯ ಇರವು, ಬರಿಯ ಅರಿವು, ಬರಿಯ ಆನಂದ – ಎಂಬಿವುಗಳು ಅಸಂಭಾವಿತವೆಂದೇ ವ್ಯವಹಾರದಲ್ಲಿ ನಮಗೆ ತೋರುತ್ತದೆ; ಆದರೆ ಸುಷುಪ್ತಿಯ ಅನುಭವದಿಂದ ನಮ್ಮ ಆತ್ಮನು ಅಲ್ಲಿ ಶುದ್ಧಸತ್ತು, ಶುದ್ಧಜ್ಞಾನ, ಶುದ್ಧಸುಖವಾಗಿಯೇ ಇರುತ್ತಾನೆ – ಎಂಬುದು ಸುನಿಶ್ಚಿತವಾಗಿಬಿಡುತದೆ.

# ೧೭. ಸುಷುಪ್ತಿಯಲ್ಲಿರುವ ಜೀವನ ಬ್ರಹ್ಮಸ್ವರೂಪ

(30-8-64)

ಇಂದ್ರಿಯಗಳು , ಮನಸ್ಸು - ಇವೂ ಬಾಹ್ಯವಿಷಯಗಳನ್ನು ಬೆಳಗುವ ಸಾಧನಗಳಾದರೂ ಅವುಗಳ ಸಂಪರ್ಕದಿಂದ ಆತ್ಮವಸ್ತುವಿನಲ್ಲಿ ಏನಾದರೂ ಮಾರ್ಪಾಡಾಗಿರುವಂತೆ ತೋರುತ್ತದೆಯೊ ? - ಎಂಬುದನ್ನು ವಿಚಾರಿಸಿಕೊಳ್ಳುವದು ಅವಶ್ಯ. ಎಚ್ಚರದಲ್ಲಿ ನಾವು ವ್ಯವಹಾರಮಾಡುವಾಗಲೂ ಆತ್ಮಜ್ಯೋತಿಯ ಬೆಳಕಿನಿಂದಲೇ ವ್ಯವಹರಿಸುತ್ತಿರುತ್ತೇವೆ. ಸ್ವಪ್ನದಲ್ಲಿ ಇಂದ್ರಿಯಗಳ ಹಂಗಿಲ್ಲದ್ದರಿಂದ ಆತ್ಮಜ್ಯೋತಿಯ ಸ್ವರೂಪವನ್ನು ನಿರ್ಣಯಿಸುವದು ಸುಕರವಾಗಿರುತ್ತದೆ; ಆದರೆ ಅಲ್ಲಿ ಮನಸ್ಸಿನ ಸಂಪರ್ಕವಿದೆ. ಸುಷುಪ್ತಿಗೆ ಬಂದಾಗ ಹೊರಗಿನ ಜಗತ್ತೇ ಇರುವದಿಲ್ಲ , ಅದೆಲ್ಲವೂ ಆತ್ಮಸ್ವರೂಪದಲ್ಲಿ 'ಏಕೀಭೂತ'ವಾಗಿರುತ್ತದೆ , ಹಾಗೆಯೇ ಎಚ್ಚರದಲ್ಲಿ ನಾವು ವಿಷಯಗಳನ್ನು ಅರಿಯುತ್ತಿರುವ ತುಂಡರಿವುಗಳೆಲ್ಲವೂ ಆತ್ಮಸ್ವರೂಪದಲ್ಲಿ ಒಂದಾಗಿಬಿಟ್ಟಿರುತ್ತವೆ ; ಆಗ ಆತ್ಮನು ಪ್ರಜ್ಞಾನಘನನಾಗಿ ಕಾಣುತ್ತಿರುತ್ತಾನೆ. ಇದರಂತೆ ಎಚ್ಚರದಲ್ಲಿ ನಾವು ಉಪಭೋಗಿಸುತ್ತಿರುವ ವಿಷಯಗಳ ಸಂಬಂಧದಿಂದ ನಮಗೆ ಆಗುತ್ತಿರುವ ತುಂತುರುಸುಖಗಳು, ಸುಷುಪ್ತಿಯಲ್ಲಿ ಆನಂದಮಾತ್ರವಾಗಿರುತ್ತವೆ. ಅಂತೂ ಸನ್ಮಾತ್ರನೂ ಚಿನ್ಮಾತ್ರನೂ ಆನಂದಮಾತ್ರನೂ ಆಗಿರುವ ನಮ್ಮ ಆತ್ಮನೇ ಎಚ್ಚರದಲ್ಲಿ ಇಬ್ಭಾಗವಾಗಿರುತ್ತಾನೆ. ಅಲ್ಲಿ ಅವನು ಸುಖದುಃಖಗಳನ್ನು ಅನುಭವಿಸುವ ಜೀವರೂಪವೊಂದು, ಅದನ್ನು ನೋಡುತ್ತಿರುವ ಸಾಕ್ಷಿಯಾದ ಪರಮೇಶ್ವರನ ರೂಪವೊಂದು - ಹೀಗೆ ಎರಡು ಬಗೆಯಿಂದ ತೋರುತ್ತಿರುತ್ತಾನೆ. ಇದನ್ನೇ 'ಎರಡು ಹಕ್ಕಿಗಳು ಒಂದೇ ಮರವನ್ನಾಶ್ರಯಿಸಿಕೊಂಡಿರುತ್ತವೆ ' ಎಂದು (ಮುಂ.) ಶ್ರುತಿಯು ರೂಪಕವನ್ನು ಮಾಡಿ ಪ್ರತಿಪಾದಿಸುತ್ತಿರುತ್ತದೆ. ಆದರೂ ಸದ್ಗುರುವಿನ ಉಪದೇಶದಿಂದ ಅಲ್ಲಿಯೂ ಒಬ್ಬ ಆತ್ಮನ ಜ್ಯೋತಿಯೇ ಎಲ್ಲೆಲ್ಲಿಯೂ ವ್ಯಾಪಿಸಿಕೊಂಡಿರುತ್ತದೆಯೆಂದೂ, ಕೆರೆ, ಕುಂಟೆ, ನದಿ, ತಂಬಿಗೆ, ಲೋಟ - ಮುಂತಾದವುಗಳಲ್ಲಿರುವ ನೀರಿನಲ್ಲಿ ಒಬ್ಬ ಸೂರ್ಯನಿಗೇ ಬಗೆಬಗೆಯ ಪ್ರತಿಬಿಂಬಗಳು ಮೂಡಿ ತೋರುತ್ತಿದ್ದರೂ ಅವು ಯಾವವೂ ಸೂರ್ಯನಿಗಿಂತ ವ್ಯತಿರಿಕ್ತವಲ್ಲವೆಂದು ಹೇಗೆ ವಿಚಾರದಿಂದ ನಿಶ್ಚಯವಾಗುತ್ತದೆಯೋ ಹಾಗೆಯೇ ಒಬ್ಬ ಪರಮೇಶ್ವರನೇ ಬಗೆಬಗೆಯ ಜೀವರುಗಳಾಗಿ ಕಾಣುತ್ತಿರುತ್ತಾನೆಂದೂ ಜಿಜ್ಞಾಸುಗಳು ಮನಗಾಣಬಹುದಾಗಿರುತ್ತದೆ. ಈ ಈಶ್ವರ ಸ್ವರೂಪವನ್ನೇ **'ಏಕೋ ದೇವಃ ಸರ್ವಭೂತೇಷು ಗೂಢಃ ಸರ್ವವ್ಯಾಪೀ ಸರ್ವಭೂತಾಂತರಾತ್ಮಾ'** । ಎಂದು ಮುಂತಾಗಿರುವ ಶ್ರುತಿಯು ಹೇಳುತ್ತಿರುವದು.

ಪ್ರತಿಯೊಬ್ಬ ಜೀವನೂ ಸುಷುಪ್ತಿಯಲ್ಲಿ ಈ ಸ್ವರೂಪವನ್ನೇ ಸೇರಿಕೊಂಡು ಬಿಡುತ್ತಾನೆ. ಅಲ್ಲಿ ಯಾವ ದ್ವೈತವೂ ಇರುವದೇ ಇಲ್ಲ ; 'ಸುಷುಪ್ತಾತ್ಮರೂಪವು ಸದ್ಘನವೂ ಚಿದ್ಘನವೂ ಆನಂದಘನವೂ ಆಗಿರುತ್ತದೆ ' ಎಂದು ಆಗಲೆ ಶ್ರುತಿಯ ಆಧಾರದಿಂದ ತಿಳಿಸಿಕೊಟ್ಟಿದ್ದಾಗಿರುತ್ತದೆ. ಆ ಸ್ವರೂಪವೇ ಎಚ್ಚರದಲ್ಲಿ ಈಶ್ವರ ರೂಪದಿಂದ ತೋರುತ್ತಿರುದೆಂಬುದನ್ನು ಮಾಂಡೂಕ್ಯಶ್ರುತಿಯು ಹೀಗೆಂದು ತಿಳಿಸುತ್ತಿದೆ:

**ಏಷ ಸರ್ವೇಶ್ವರ ಏಷ ಸರ್ವಜ್ಞ ಏಷೋಽನ್ತರ್ಯಾಮ್ಯೇಷ**

**ಯೋನಿಃ ಸರ್ವಸ್ಯ ಪ್ರಭವಾಪ್ಯಯೌ ಹಿ ಭೂತಾನಾಮ್।** ಮಾಂ. ೬

ಸುಷುಪ್ತಾತ್ಮನು ತನ್ನ ಸ್ವರೂಪದಲ್ಲಿ ಇದ್ದುಕೊಂಡೇ ಸರ್ವೇಶ್ವರನಾಗಿರುತ್ತಾನೆ, ಸರ್ವಜ್ಞನಾಗಿರುತ್ತಾನೆ, ಅಂತರ್ಯಾಮಿಯಾಗಿರುತ್ತಾನೆ, ಎಲ್ಲಕ್ಕೂ ಕಾರಣನಾಗಿರು ತ್ತಾನೆ - ಎಂದು ಮುಂತಾಗಿ ಶ್ರುತಿಯು ವರ್ಣಿಸಿರುವದರಲ್ಲಿ ಒಂದು ಔಚಿತ್ಯವಿದೆ. ಏಕೆಂದರೆ, ಸರ್ವೇಶ್ವರನೆಂದರೆ ಎಲ್ಲವನ್ನೂ ಆಳುವವನು. ಆಳುವ ರಾಜನು ತಾನೇ ನೇರಾಗಿಯೂ ತನ್ನ ಕೈಕೆಳಗಿನ ಅಧಿಕಾರಿಗಳ ಮೂಲಕವಾಗಿಯೂ ಜನರ ಮೇಲೆ ಒಡೆತನವನ್ನು ಇಟ್ಟುಕೊಂಡಿರುತ್ತಾನಷ್ಟೆ ? ಈಶ್ವರನು ಹೀಗಲ್ಲ. ತನ್ನ ಸ್ವರೂಪದಲ್ಲಿ ತಾನು ಇರುವಂತೆಯೇ ಇದ್ದುಕೊಂಡೇ ಚೇತನಾಚೇತನಗಳೆರಡಕ್ಕೂ ತನ್ನ ಸತ್ತೆಯನ್ನು ಕೊಟ್ಟಿರುತ್ತಾನೆ. ನಿಜವಾಗಿ ನೋಡಿದರೆ ಅವನೇ ತನ್ನ ಒಂದು ಅಂಶದಿಂದ ಜೀವನಾಗಿಯೂ ತೋರಿಕೊಳ್ಳುತ್ತಿರುತ್ತಾನೆ. ಜೀವನು ಈಶ್ವರನ ಅಂಶವೆಂದರೆ ಅವನ ಒಂದು ಮುರುಕು ಎಂದೇನೂ ಅರ್ಥವಲ್ಲ ; ಅವನ ಅಧೀನದಲ್ಲಿರುವವನಾಗಿದ್ದು ಅವನಲ್ಲಿಯೇ ಸೇರಿಹೋಗಿರುವ, ಕೊನೆಗೂ ಅವನಲ್ಲಿಯೇ ಆತ್ಯಂತಿಕವಾಗಿ ಒಂದಾಗಿ ಬಿಡುವ ಸ್ವಭಾವದವನು ಎಂದರ್ಥ.

**"ಯಥಾ ಜಲಸೂರ್ಯಕಃ ಸೂರ್ಯಾಂಶೋ ಜಲನಿಮಿತ್ತಾಪಾಯೇ ಸೂರ್ಯಮೇವ ಗತ್ವಾ ನ ನಿವರ್ತತೇ। ತೇನೈವಾತ್ಮನಾ ಸಂಗಚ್ಛತಿ (?), ಏವಮೇವ ; ಯಥಾ ವಾ ಘಟಾದ್ಯುಪಾಧಿಪರಿಚ್ಛಿನ್ನೋ ಘಟಾದ್ಯಾಕಾಶಃ ಆಕಾಶಾಂಶಃ ಸನ್ ಘಟಾದಿನಿಮಿತ್ತಾಪಾಯೇ ಆಕಾಶಂ ಪ್ರಾಪ್ಯ ನ ನಿವರ್ತತೇ॥"** ಗೀ. ಭಾ. ೧೫-೭

ನೀರಿನಲ್ಲಿ ಕಾಣುವ ಸೂರ್ಯಪ್ರತಿಬಿಂಬವು ಸೂರ್ಯನಿಗೆ ಅಂಶವಾಗಿರು ವಂತೆ, ಅಥವಾ ಗಡಿಗೆ, ಮಡಕೆ, ಕುಡಿಕೆ - ಮುಂತಾದವುಗಳೊಳಗಿನ ಆಕಾಶವು ಆಕಾಶದ ಅಂಶವಾಗಿರುವಂತೆ, ಪರಮಾತ್ಮನಧೀನವಾದ ಅಂಶವಾಗಿಯೇ ಇರುತ್ತಿದ್ದು

ಅವಿದ್ಯಾಕಲ್ಪಿತವಾಗಿರುವ ತಮ್ಮ ಉಪಾಧಿಗಳನ್ನು ಜ್ಞಾನದಿಂದ ಇಲ್ಲವಾಗಿಸಿಕೊಂಡು ಪರಮಾತ್ಮನಲ್ಲಿಯೇ ಸುಷುಪ್ತಿಯಲ್ಲಿ ಹೇಗೋಹಾಗೆ ಒಂದಾಗಿಬಿಡುವ ಸ್ವಭಾವದವರು, ಜೀವರುಗಳು. ವ್ಯವಹಾರದೃಷ್ಟಿಯಿಂದ ಅವರನ್ನು ಆಳುವವನಾಗಿರುವದರಿಂದ ಇವನು ಈಶ್ವರನಾಗಿರುತ್ತಾನೆ.

ಈ ಈಶ್ವರನು 'ಸರ್ವಜ್ಞನು' ಎಂಬುದನ್ನೂ ಹೀಗೆಯೇ ತಿಳಿಯಬೇಕು. ಎಲ್ಲವನ್ನೂ ಒಂದೊಂದಾಗಿ ಅರಿತುಕೊಳ್ಳುತ್ತಾನೆ ಎಂಬರ್ಥದಲ್ಲಿ ಇವನು ಸರ್ವಜ್ಞನೆಂದು ತಿಳಿಯಬಾರದು. ಜ್ಞಾನವೆಂಬುದು - ಸೂರ್ಯನ ಬೆಳಕು ಅವನ ಸ್ವರೂಪವೇ ಆಗಿರುವಂತೆ - ಈಶ್ವರನ ಸ್ವರೂಪವೇ ಆಗಿರುತ್ತದೆ. ಚೇತನಾಚೇತನಭಾವಗಳು ಯಾವವೇ ಇರಲಿ, ಆತನಿಗಿಂತ ಬೇರೆಯ ದೇಶದಲ್ಲಿರುವಂತಿಲ್ಲ , ಬೇರೆಯ ಕಾಲದಲ್ಲಿಯೂ ಇರುವಂತಿಲ್ಲ; ಆ ಜ್ಞಾನವು ಅತ್ಯಂತಸೂಕ್ಷ್ಮವಾಗಿರುವದರಿಂದ ಅದಕ್ಕೆ ವಿಷಯವಾಗದೆ, ಅದಕ್ಕಿಂತ ಸೂಕ್ಷ್ಮವಾಗಿ ವ್ಯವಧಾನವುಳ್ಳದ್ದಾಗಿ, ದೂರದಲ್ಲಿರುವದಾಗಿರುವದು ಹಿಂದೆ ಇರಲಿಲ್ಲ, ಈಗ ಇಲ್ಲ, ಮುಂದೆ ಇರುವಂತೆಯೂ ಇಲ್ಲ. ಆ ಜ್ಞಾನದಿಂದ ವ್ಯಾಪ್ತವಾಗಿಯೇ ಎಲ್ಲವೂ ಇರಬೇಕಾಗಿರುವದರಿಂದ ಈಶ್ವರನು 'ಸರ್ವಜ್ಞ'ನೆನಿಸಿಕೊಂಡಿರುತ್ತಾನೆ.

ಈಶ್ವರನು 'ಅಂತರ್ಯಾಮಿ' ಎಂಬುದೂ ಹೀಗೆಯೇ. ಅವನು ಜೀವರ ಒಳಗೆ ಇದ್ದುಕೊಂಡು ತನ್ನ ವ್ಯಾಪಾರದಿಂದ ಅವರನ್ನು ಹಿಡಿತದಲ್ಲಿಟ್ಟುಕೊಂಡಿರುವದಿಲ್ಲ; ಅವರ ಕಾರ್ಯಕರಣಗಳಿಂದಲೇ ಅವರನ್ನು ಆಯಾ ವ್ಯಾಪಾರಗಳಿಗೆ ಕಟ್ಟುಬೀಳುವಂತೆ ಮಾಡಿರುತ್ತಾನೆ. ಆಗಲೂ ಅವನು ತನ್ನ ಸ್ವರೂಪದಿಂದ ಹಾಗೆಯೇ ಇರುತ್ತಾನೆ! ಸೂಜಿಕಲ್ಲು ತಾನು ಇದ್ದಂತೆಯೇ ಇದ್ದರೂ ಕಬ್ಬಿಣವನ್ನು ತನ್ನ ಕಡೆಗೆ ಸೆಳೆದುಕೊಳ್ಳುವದಿಲ್ಲವೆ ? ಹಾಗೆಯೇ ನಿರ್ವ್ಯಾಪಾರನಾಗಿಯೇ ಈಶ್ವರನು ಎಲ್ಲವನ್ನೂ ನಿಯಮನಮಾಡುತ್ತಿರುತ್ತಾನೆ.

ಈತನೇ ಎಲ್ಲಕ್ಕೂ ಯೋನಿಯು, ಎಂದರೆ ಕಾರಣನು. ಕಾರಣವೆಂದರೆ ಕುಂಬಾರನೇ ಮುಂತಾದವರಂತೆ ಕ್ರಿಯೆಯನ್ನು ಮಾಡಿ ಕಾರ್ಯವನ್ನುಂಟುಮಾಡುವವನಲ್ಲ; ಕುಂಬಾರನಿಗೆ ಮಣ್ಣೇ ಮುಂತಾದ ಉಪಾದಾನಕಾರಣವು ಬೇಕಾಗಿರುತ್ತದೆ. ಈಶ್ವರನು ಜಗತ್ತಿಗೆ - ಮಡಕೆಗೆ ಮಣ್ಣು ಕಾರಣವಾಗಿರುವಂತೆ - ಬರಿಯ ಉಪದಾನವೂ ಅಲ್ಲ ; ಏಕೆಂದರೆ ಮಣ್ಣಿಗೆ ಅದಕ್ಕೆ ತನಗಿಂತ ಬೇರೆಯಾಗಿ ತನ್ನನ್ನು ಮಾರ್ಪಡಿಸುವ ಕರ್ತೃವೇ ಮುಂತಾದ ನಿಮಿತ್ತಕಾರಣವು ಬೇಕಾಗಿರುತ್ತದೆ. ಪ್ರಕೃತದಲ್ಲಿ ಇಡಿಯ ಜಗತ್ತು ಹುಟ್ಟುವದೂ ಈತನಿಂದಲೇ , ಕೊನೆಗೆ ಲಯವಾಗುವದೂ

ಈತನಲ್ಲಿಯೇ ಎಂಬುದು ಸುಷುಪ್ತಿಯ ಸ್ವರೂಪವನ್ನೂ ಅದರಿಂದ ಜಗತ್ತು ಹೊರತೋರಿಕೊಂಡು ಅದರಲ್ಲಿಯೇ ಒಂದಾಗಿಬಿಡುವದನ್ನೂ ಅನುಭವಕ್ಕನುಗುಣವಾಗಿ ಅರಿತುಕೊಂಡವರಿಗೆ ಯುಕ್ತವೆಂದು ತೋರುವದು.

**ಸ ಯಥೋರ್ಣನಾಭಿಸ್ತಂತುನೋಚ್ಚರೇದ್ಯಥಾಗ್ನೇಃ ಕ್ಷುದ್ರಾ ವಿಸ್ಫುಲಿಂಗಾ ವ್ಯುಚ್ಚರನ್ತ್ಯೇವಮೇವಾಸ್ಮಾದಾತ್ಮನಃ ಸರ್ವೇ ಪ್ರಾಣಾಃ ಸರ್ವೇ ಲೋಕಾ ಸರ್ವೇ ದೇವಾಃ ಸರ್ವಾಣಿ ಭೂತಾನಿ ವ್ಯುಚ್ಚರನ್ತಿ॥** ಬೃ. ೨-೧-೨೦

ಸುಷುಪ್ತಾತ್ಮನಿಂದ ಜಗತ್ತು ಉಂಟಾಗುವ ಬಗೆಯನ್ನು ಶ್ರುತಿಯಲ್ಲಿ ವರ್ಣಿಸಿರುವ ಪ್ರಕಾರವನ್ನು ಮನಸ್ಸಿನಲ್ಲಿ ಹೊರಳಾಡಿಸಿಕೊಳ್ಳಬೇಕು. ಜೇಡರಹುಳು ಹೇಗೆ ತನಗಿಂತ ಬೇರೆಯಾಗಿಲ್ಲದ ನೂಲಿನ ರೂಪವನ್ನು ತಾನೇ ಮಾಡಿಕೊಂಡು ಹೊರಕ್ಕೆ ಬರುವದೋ, ಹೇಗೆ ಬೆಂಕಿಯು ತಾನೊಂದೇ ಇದ್ದುಕೊಂಡು ಸಣ್ಣ ಕಿಡಿಗಳಾಗಿ ಸಿಡಿದು ಹೊರಬೀಳುವದೋ, ಹಾಗೆಯೇ ಯಾವ ಕಾರಕಭೇದಗಳ ಸಹಾಯವೂ ಇಲ್ಲದೆ ಈ ಏಕರೂಪನಾದ ಏಕಾತ್ಮನಿಂದಲೇ ವಾಗಾದೀಂದ್ರಿಯಗಳೂ, ಕರ್ಮಫಲವಾದ ಭೂರಾದಿಲೋಕಗಳೂ, ಸರ್ವೇಂದ್ರಿಯಗಳೂ, ಸರ್ವಲೋಕಗಳೂ, ಅವಕ್ಕೆ ಅಧಿಷ್ಠಾತೃಗಳಾದ ಎಲ್ಲಾ ದೇವತೆಗಳೂ, ಬ್ರಹ್ಮಾದಿಸ್ತಂಬಪರ್ಯಂತವಾಗಿರುವ ಸಕಲ ಭೂತಗಳೂ, ಹೊರಟುಬರುತ್ತಿರುವವು. ಜೇಡರಹುಳು ನೂಲನ್ನು ಹೊರಕ್ಕೆಸೆದು ತನ್ನಲ್ಲಿಯೇ ಅಡಕಮಾಡಿಕೊಳ್ಳುವದೂ, ಬೆಂಕಿಯಿಂದ ಕಿಡಿಗಳು ಸಿಡಿದುಹಾರುವದೂ ಲೋಕದಲ್ಲಿ ಕಂಡ ದೃಷ್ಟಾಂತಗಳು ; ಇದರಂತೆ ಸುಷುಪ್ತಿಯಲ್ಲಿ ಆತ್ಮನೊಬ್ಬನೇ ಇದ್ದು ವಿವಿಧವಾದ ಜಗತ್ತಿನೊಡನೆ ತೋರಿಕೊಳ್ಳುವದೂ ನಮ್ಮ ಅನುಭವದಲ್ಲಿದೆ. ಆದರೆ ನಮ್ಮ ಸ್ವರೂಪವೇ ಜಗತ್ತಾಗಿ ಉಂಟಾಗುತ್ತಿದ್ದದ್ದು ನಮ್ಮ ಅನುಭವಕ್ಕೆ ಗೋಚರವಾಗಿರುವದಿಲ್ಲ. ಅದನ್ನು ಯುಕ್ತಿಯಿಂದಮಾತ್ರವೇ ಕಲ್ಪಿಸಿಕೊಳ್ಳಬೇಕಾಗಿರುತ್ತದೆ.

ಸುಷುಪ್ತಿಯಲ್ಲಿರುವ ಪರಮಾತ್ಮಸ್ವರೂಪವು ಜಗತ್ತಾಗುವದೆಂದರೆ ಬೀಜವು ಮರವಾಗುವಂತೆಯೂ ಅಲ್ಲ. ಏಕೆಂದರೆ ಬೀಜವು ಮರವಾಗಿ ಪರಿಣಮಿಸಿದಮೇಲೆ ಮತ್ತೆ ಆ ಬೀಜವು ಉಳಿಯುವದಿಲ್ಲ ; ಅದು ಮರದ ರೂಪದಲ್ಲಿ ಪರ್ಯವಸಾನವಾಗಿ ಬಿಟ್ಟಿರುತ್ತದೆ. ಪ್ರಕೃತದಲ್ಲಿ ಹಾಗಿಲ್ಲ. ಆತ್ಮನು ತನ್ನ ಸ್ವರೂಪದಿಂದ ಇದ್ದು ಕೊಂಡೇ ಇರುತ್ತಾನೆ, ಆದರ ಜೊತೆಗೆ ಜಗತ್ತೂ ಆಗಿ ತೋರುತ್ತಿರುತ್ತಾನೆ. ಈಶ್ವರನು ನಮ್ಮ ಸ್ವರೂಪವಾಗಿಯೇ ಸುಷುಪ್ತಿಯಲ್ಲಿದ್ದು ಜಾಗ್ರತ್ತಿನ ಜಗತ್ತನ್ನು ಸೃಷ್ಟಿಸಿರುತ್ತಾನೆ ; ಯಾವದೊಂದು ವ್ಯಾಪಾರವನ್ನೂ ಮಾಡದೆ, ಜಗದ್ರೂಪವಾಗಿಯೂ ಆಗಿರುತ್ತಾನೆ, ತನ್ನ ರೂಪದಲ್ಲಿಯೂ ಇದ್ದುಕೊಂಡಿರುತಾನೆ. ಜೀವರಿಗಿಂತ ವ್ಯತಿರಿಕ್ತವಾಗಿದ್ದು

ಕೊಂಡಿರುವ ಈಶ್ವರನು ಯಾವದಾದರೊಂದು ಉಪಾದಾನವನ್ನು ಇಟ್ಟುಕೊಂಡು ಜಗತ್ತನ್ನು ಸೃಷ್ಟಿಸುವದಿಲ್ಲ - ಎಂಬಿಷ್ಟು ಮಟ್ಟಿಗೆ ಜೇಡರಹುಳು, ಬೆಂಕಿ - ಇವುಗಳ ದೃಷ್ಟಾಂತವನ್ನು ಶ್ರುತಿಯಲ್ಲಿ ಕೊಟ್ಟಿದೆ . ಉಪಾದಾನವು ರೂಪಾಂತರವನ್ನು ಹೊಂದಿದಂತೆ ಈಶ್ವರನೇನೂ ರೂಪಾಂತರವನ್ನು ಹೊಂದಿರುವದಿಲ್ಲ ; ಅವನು ಹಾಗೆಯೇ ಇದ್ದುಕೊಂಡಿರುತ್ತಾನೆ, ಅಚಿಂತ್ಯವಾದ ರೀತಿಯಲ್ಲಿ ಅವನಿಂದ ಜಗತ್ತು ಸೃಷ್ಟವಾಗಿರುತ್ತದೆ. ಕಾಲದಲ್ಲಿರುವ ಕಾರಣವು ಕಾರ್ಯವಾಗುವಂತೆ ಕಾಲದಲ್ಲಿದ್ದು ಆತ್ಮನು ಜಗತ್ತಾಗಿಲ್ಲ ; ಕಾಲಸಮೇತವಾದ ಜಗತ್ತನ್ನು ಯಾವ ಪರಿಣಾಮವನ್ನೂ ಪಡೆಯದೆ ತನ್ನಲ್ಲಿ ತೋರಿಸಿಕೊಳ್ಳುತ್ತಾನೆ. ಆದ್ದರಿಂದ ಆತ್ಮನಲ್ಲಿರುವ ಕಾರಣತ್ವ ವೆಂಬುದು ಅವನ ಅಸಾಧಾರಣಮಹಿಮೆ ; ಅದು ಲೋಕದಲ್ಲಿರುವ ವಸ್ತುಗಳ ಕಾರಣತ್ವದಂತೆ ಅಲ್ಲ.

ಜಾಗ್ರದ್ದೃಷ್ಟಿಯಿಂದ ಸುಷುಪ್ತಿಯನ್ನು ನೋಡಿದರೆ, 'ಆಗ ನನಗೇನೂ ತಿಳಿಯ ಬರಲಿಲ್ಲ,' ಎಂದು ಅಜ್ಞಾನಪ್ರಧಾನವಾಗಿಯೇ ತೋರಿಬರುತ್ತದೆ. ಆದರೆ ಸುಷುಪ್ತಿಯ ದೃಷ್ಟಿಯಿಂದಲೇ ಸುಷುಪ್ತಿಯನ್ನು ನೋಡಿದರೆ ಅಲ್ಲಿ ಅನುಭವಸ್ವರೂಪನಾದ ಆತ್ಮನೇ ಇರುತ್ತಾನೆ. ಅಲ್ಲಿ ಅವನು ಸಚ್ಚಿದಾನಂದಸ್ವರೂಪವನಾಗಿಯೂ ಇರುತ್ತಾನೆ. ಎಚ್ಚರದ ದೃಷ್ಟಿಯಿಂದ ಸತ್ತೆಗೆ (ಇರವಿಗೆ) ಇಂಥದ್ದರ ಸತ್ತೆ, ಘಟದ ಸತ್ತೆ, ಪಟದ ಸತ್ತೆ - ಎಂದು ಮುಂತಾಗಿ ಒಂದು ವಿಶೇಷ್ಯದ ಅವಲಂಬನೆಯು ಬೇಕಾಗಿರುತ್ತದೆ ; ಜ್ಞಾನಕ್ಕೆ ಒಂದು ವಿಷಯವಿರಬೇಕು, ಸುಖಕ್ಕೂ ವಸ್ತುವಿನ ಉಪಭೋಗವೆಂಬ ನಿಮಿತ್ತವಿರಬೇಕು. ಆದರೆ ಸುಷುಪ್ತಿಯಲ್ಲಿ ಮತ್ತೆ ಯಾವ ವಸ್ತುವಿನ ಸಂಬಂಧವೂ ಇಲ್ಲದೆ ಸತ್ತಾಮಾತ್ರ ರೂಪದಿಂದ, ಜ್ಞೇಯಸಂಬಂಧವಿಲ್ಲದೆಯೇ ಚಿನ್ಮಾತ್ರಸ್ವರೂಪದಿಂದ ವಿಷಯೋಪ ಭೋಗದ ಆಯಾಸವಿಲ್ಲದೆ ಆನಂದಮಾತ್ರರೂಪದಿಂದ ಎಲ್ಲವೂ ತಾನೇ ಆಗಿ ಆತ್ಮನು ತೋರುತ್ತಿರುವದು ನಮಗೆಲ್ಲ ಅನುಭವಕ್ಕೆ ಬರುತ್ತದೆ. ಹೀಗೆ ನೋಡಿದಾಗ ಸುಷುಪ್ತಿ ಎಂಬುದು ಒಂದು ಅವಸ್ಥೆಯೇ ಅಲ್ಲ. 'ಕಾಲಿಕವಾದ ವಿಶೇಷವೇ ಅವಸ್ಥೆ' ಎಂದು ಅಮರಕೋಶವು ಹೇಳುತ್ತಿದೆ ; ಆದರೆ ಸುಷುಪ್ತಿಯಲ್ಲಿ ಕಾಲದ ಸೆಲೆಯೇ ಇರುವದಿಲ್ಲ. ಅಜ್ಞಾತನಾದ ಆತ್ಮನನ್ನೇ ಜನರು ಸುಷುಪ್ತಿ ಎಂದು ಭಾವಿಸುತ್ತಿದಾರೆ. ಎಚ್ಚರದಲ್ಲಿ ಅಲ್ಲಿರುವಂತೆ ಇದು, ಅದು - ಎಂಬ ವಿಶೇಷಜ್ಞಾನವು ಇಲ್ಲವೆಂಬುದರಿಂದಲೇ ಜಾಗ್ರದವಸ್ಥಾಭಿಮಾನಿಗಳಾದವರು ಸುಷುಪ್ತಿಯನ್ನು 'ಅಜ್ಞಾನಾವಸ್ಥೆ' ಎನ್ನುತ್ತಿರುವರು. ನಿಜವಾಗಿ ಅಲ್ಲಿ ಜೀವರು ಸರ್ವೇಶ್ವರನಾಗಿಬಿಟ್ಟಿರುತ್ತಾರೆ, ಸರ್ವಜ್ಞರೂಪರಾಗಿ ಬಿಟ್ಟಿರುತ್ತಾರೆ.

ಈ ಜಾಗ್ರದವಸ್ಥೆಯಲ್ಲಿಯೂ ಅದೇ ಸರ್ವಜ್ಞ ಸರ್ವೇಶ್ವರರೂಪವಿರುತ್ತದೆ. ಆ ಈಶ್ವರನೇ ಸರ್ವಕ್ಕೂ ಅಂತರ್ಯಾಮಿಯಾಗಿರುತ್ತಾನೆ. ಈ ಈಶ್ವರನನ್ನು ಗುರುಗಳ ಉಪದೇಶದಂತೆ ಉಪಾಸನೆಯನ್ನು ಮಾಡಿ ಆಯಾ ಫಲಗಳನ್ನು ಪಡೆದುಕೊಳ್ಳಬಹುದು. ಇದು ಹೇಗೆಂಬುದನ್ನು ಮುಂದೆ ಹೇಳುವೆವು. ಪ್ರಕೃತದಲ್ಲಿ ಸುಷುಪ್ತಿಯ ತತ್ತ್ವವನ್ನು ಮನದಂದುಕೊಳ್ಳಬೇಕಾದ ಬಗೆಯನ್ನು ಮಾತ್ರ ನಾವು ವಿಮರ್ಶಿಸುತ್ತಿದ್ದೇವೆ.

ಕಾರ್ಯಕಾರಣಭಾವದ ವಿಷಯದಲ್ಲಿ ತಿಳಿಯತಕ್ಕದ್ದು ಮುಖ್ಯವಾಗಿ ಇಷ್ಟು : ಲೋಕದಲ್ಲಿಕಾರಣವು ಕಾರ್ಯರೂಪವಾಗಿ ಪರಿಣಮಿಸುವಂಥದ್ದು ; ಅಥವಾ ಕಾರ್ಯವನ್ನು ಮಾಡುವ ಸಾಧನವಾದ ಕಾರಕವಾಗಿರತಕ್ಕದ್ದು . ಕಾರಣವೆಂಬ ಶಬ್ದವೇ 'ಕೃ =ಮಾಡು' ಎಂಬರ್ಥದ ಧಾತುವಿನಿಂದ ಬಂದಿರುತ್ತದೆ. ಕಾರ್ಯವನ್ನುಂಟು ಮಾಡುವದೇ ಕಾರಣವು . ವ್ಯಾಪಾರವುಳ್ಳ ಕಾರಣವು ಕರಣವೆನಿಸುತ್ತದೆ ; ಉದಾರಹಣೆಗೆ ಕುಂಬಾರನ ಕೋಲು ಮುಂತಾದದದ್ದು ಇಂಥ ಕರಣವು. ಶ್ರುತಿಯು ಲೋಕಸಿದ್ಧವಾದ ಮಣ್ಣು ಮುಂತಾದ ಉಪಾದಾನಕರಣವನ್ನು ದೃಷ್ಟಾಂತವಾಗಿ ಕೊಟ್ಟು

**ಯಥಾ ಸೋಮ್ಯೈಕೇನ ಮೃತ್ಪಿಂಡೇನ ಸರ್ವಂ ಮೃನ್ಮಯಂ ವಿಜ್ಞಾತಂ ಸ್ಯಾದ್ ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಮ್ ॥**

ಛಾ. ೬-೧-೪

'ಮಣ್ಣನ್ನು ಅರಿತುಕೊಂಡರೆ ಮಣ್ಣಿನಿಂದಾದ ಕಾರ್ಯವನ್ನೆಲ್ಲ ಅರಿತು ಕೊಂಡಂತೆ ಆಗುತ್ತದೆ. ಮಡಕೆ, ಕುಡಿಕೆ - ಮುಂತಾದ ಕಾರ್ಯವೆಂಬುದೆಲ್ಲ ಮಾತಿನಿಂದಾಗಿರುವ ಹೆಸರು ಮಾತ್ರ , ಅದೆಲ್ಲವೂ ಮಣ್ಣೆಂಬುದೇ ಸತ್ಯವು' ಎಂದು ಮುಂತಾಗಿ ಹೇಳುತ್ತಿರುವದರಿಂದ 'ಆತ್ಮನು ಜಗತ್ತೆಂಬ ಕಾರ್ಯರೂಪವಾಗಿರುವ ದೆಂದರೆ ಜಗತ್ತೆಂಬ ಬರಿಯ ಹೆಸರನ್ನು ಪಡೆದಿರುವದೇ ಹೊರತು ನಿಜವಾಗಿ ಆತ್ಮನೇನೂ ಬೇರ್ಪಟ್ಟಿಲ್ಲ; ನಿಜವಾಗಿ ಈಗಲೂ ಇದೆಲ್ಲವೂ ಆತ್ಮನೇ ಆಗಿರುತ್ತಾನೆ' - ಎಂಬುದನ್ನು ಮನಸ್ಸಿಗೆ ತಾಕುವಂತೆ ಮಾಡಿಕೊಟ್ಟಿರುತ್ತದೆ. ಮಣ್ಣಿನ ಕಾರ್ಯವೆಂಬುದೆಲ್ಲವೂ ಬರಿಯ ಮಣ್ಣೇ ಆಗಿರುವಂತೆ, ಆತ್ಮನ ಕಾರ್ಯವಾದ ಜಗತ್ತೆಲ್ಲವೂ ಬರಿಯ ಆತ್ಮನೇ - ಎಂಬುದು ಶ್ರುತಿಯ ಅಭಿಪ್ರಾಯ. ಕಾರ್ಯವು ಹುಸಿ, ಕಾರಣವೊಂದೇ ಅದರ ತಿರುಳಾದ ಸತ್ಯವಸ್ತು - ಎಂಬುದನ್ನು ಜಿಜ್ಞಾಸುಗಳಿಗೆ ತಿಳಿಯಪಡಿಸುವದೇ ಶ್ರುತಿಯ ಗುರಿ. ಇದರಲ್ಲಿಯೇ ಶ್ರುತಿಗೆ ತಾತ್ಪರ್ಯವಿದೆ

ಎಂಬುದನ್ನು ಇನ್ನಷ್ಟು ಸ್ಫುಟಗೊಳಿಸುವದಕ್ಕೆಂದು ಶಂಕರಭಗವತ್ಪಾದರೇ ಮುಂತಾದ ವೇದಾಂತಸಂಪ್ರದಾಯವಿದರು ರಜ್ಜುಸರ್ಪ, ಶುಕ್ತಿರಜತ - ಮುಂತಾದ ದೃಷ್ಟಾಂತಗಳನ್ನು ಕೊಟ್ಟಿರುತ್ತಾರೆ. ಈ ಗುಟ್ಟನ್ನು ಮನಸ್ಸಿಗೆ ತಂದುಕೊಳ್ಳಲಾರದೆ ಈಚಿನವರು ಕೆಲವರು ರಜ್ಜುಸರ್ಪ, ಶುಕ್ತಿರಜತ - ಮುಂತಾದ ತೋರಿಕೆಗಳೂ 'ಪ್ರಾತಿಭಾಸಿಕ ವಸ್ತು'ಗಳು, ಅವೂ ಪ್ರಕೃತಿರೂಪವಾದ ಅಜ್ಞಾನದಿಂದ ಹುಟ್ಟುತ್ತವೆ - ಎಂದು ಹೇಳುವದಕ್ಕೆ ಉಪಕ್ರಮಿಸಿದಾರೆ!

ಶ್ರೀಶಂಕರಾಚಾರ್ಯರು ಬ್ರಹ್ಮದಿಂದ ಜಗತ್ತಿನ ಸೃಷ್ಟಿಸ್ಥಿತಿಲಯಗಳು ಹೇಗಾಗುವವೆಂಬುದನ್ನು 'ಜನ್ಮಾದ್ಯಸ್ಯ ಯತಃ' ಎಂಬ ಸೂತ್ರದ ವ್ಯಾಖ್ಯಾನದಲ್ಲಿ ಸ್ಪಷ್ಟಪಡಿಸಿರುವದು ಹೇಗೆಂದರೆ :

**"ಅಸ್ಯ ಜಗತಃ ನಾಮರೂಪಾಭ್ಯಾಂ ವ್ಯಾಕೃತಸ್ಯ ಅನೇಕಕರ್ತೃಭೋಕ್ತೃಸಂಯುಕ್ತಸ್ಯ ಪ್ರತಿನಿಯತದೇಶಕಾಲನಿಮಿತ್ತಕ್ರಿಯಾಫಲಾಶ್ರಯಸ್ಯ, ಮನಸಾಪ್ಯಚಿನ್ತ್ಯರಚನಾರೂಪಸ್ಯ, ಜನ್ಮಸ್ಥಿತಿಭಙ್ಗಂ ಯತಃ ಸರ್ವಜ್ಞಾತ್, ಸರ್ವಶಕ್ತೇಃ ಕಾರಣಾದ್ ಭವತಿ, ತದ್ ಬ್ರಹ್ಮ ಇತಿ ವಾಕ್ಯಶೇಷಃ ॥"**

ಬ್ರ. ಸೂ.

ಈ ವಾಕ್ಯದ ಅಭಿಪ್ರಾಯವೇನೆಂದರೆ : (೧) 'ನಾಮರೂಪ'ಗಳಿಂದ ವಿಂಗಡವಾಗಿರುವ ಜಗತ್ತೆಲ್ಲಕ್ಕೂ ಕಾರಣವು ಬ್ರಹ್ಮ. ಬ್ರಹ್ಮದಲ್ಲಿ ಯಾವ ನಾಮರೂಪಗಳೂ ಇಲ್ಲದಿದ್ದರೂ ಅದರಿಂದ ವ್ಯಾಕೃತನಾಮರೂಪಲಕ್ಷಣವುಳ್ಳ ಜಗತ್ತು ಉಂಟಾಗಿರುತ್ತದೆ (೨) ಅನೇಕ ಕರ್ತೃಭೋಕ್ತೃಗಳಿಂದೊಡಗೂಡಿರುವ ಜಗತ್ತಿಗೆ ಕಾರಣವು ಬ್ರಹ್ಮ. ಈ ಜಗತ್ತನ್ನುಂಟುಮಾಡಿರುವ ಬ್ರಹ್ಮವು ಕರ್ತೃವಲ್ಲ, ಭೋಕ್ತೃವಲ್ಲ ; ಆದರೂ ಯಾವ ವ್ಯಾಪಾರವನ್ನೂ ಮಾಡದ ಆ ಬ್ರಹ್ಮದಿಂದಲೇ ಈ ಜಗತ್ತು ಉಂಟಾಗಿರುತ್ತದೆ (೩) ದೇಶಕಾಲನಿಮಿತ್ತಗಳ ನಿಯಮದಿಂದ ಕೂಡಿದ ಜಗತ್ತಿಗೆ - ಇಂಥಿಂಥ ದೇಶಕಾಲ ನಿಮಿತ್ತಗಳನ್ನು ಆಶ್ರಯಿಸಿಕೊಂಡು ಉಂಟಾಗುವ ಇಂಥಿಂಥ ಕ್ರಿಯೆಗೆ ಇಂಥಿಂಥ ದೇಶಕಾಲನಿಮಿತ್ತಗಳಿಗೆ ತಕ್ಕಂತೆ ಫಲವಾಗಬೇಕೆಂಬ ನಿಯಮವುಳ್ಳದ್ದು ಜಗತ್ತು ; ಆ ಜಗತ್ತಿಗೆ - ದೇಶಕಾಲನಿಮಿತ್ತಾದಿಗಳ ಸಂಪರ್ಕವಿಲ್ಲದ, ಕ್ರಿಯಾಕಾರಕಫಲವಿಭಾಗವಿಲ್ಲದ ಬ್ರಹ್ಮವು ಕಾರಣವಾಗಿರುತ್ತದೆ. (೪) ಈ ಜಗತ್ತಿನ ರಚನೆಯು ಹೇಗಾಗಿರಬಹುದೆಂಬುದನ್ನು ಮನಸ್ಸಿನಿಂದಲೂ ಊಹಿಸುವದಕ್ಕೆ ಆಗುವದಿಲ್ಲ; ಇಂಥ ಜಗತ್ತನ್ನು ಯಾವ ಆಯಾಸವೂ ಇಲ್ಲದೆ ಸೃಷ್ಟಿಸಿ, ಅದರ ಸ್ಥಿತಿನಾಶಗಳಿಗೂ ಕಾರಣವಾಗಿರುವದು ಬ್ರಹ್ಮ. ಇಂಥ ಜಗತ್ತಿನ ರೂಪದಿಂದ ತನ್ನನ್ನು ತಾನೇ

ಮಾರ್ಪಡಿಸಿಕೊಂಡಿರುವ ಬ್ರಹ್ಮವು ಸರ್ವಜ್ಞವೆಂದೂ ಸರ್ವವಿಧವಾದ ಕಾರ್ಯಗಳೂ ಉಂಟಾಗುವಂಥ ಬೀಜಶಕ್ತಿಗಳುಳ್ಳದ್ದೆಂದೂ ಹೇಳಬೇಕಾದದ್ದೇ ಇಲ್ಲವಷ್ಟೆ?

ಸುಷುಪ್ತಿಯಲ್ಲಿರುವ ಸನ್ಮಾತ್ರಚಿನ್ಮಾತ್ರಾನಂದಮಾತ್ರವಾದ ಆತ್ಮರೂಪವು ಜಾಗ್ರತ್ತಿನಲ್ಲಿ ತೋರುವನಾಮರೂಪಕರ್ತೃಭೋಕ್ತೃಗಳಿಂದೊಡಗೂಡಿದ ಜಗತ್ತಾಗಿ ಹೇಗಾಯಿತು ? – ಎಂಬುದನ್ನು ಯಾರೊಬ್ಬರೂ ಎಷ್ಟು ವಿಚಾರಮಾಡಿದರೂ ಅವರ ಕಲ್ಪನೆಗೆ ಬರುವಂತಿರುವದಿಲ್ಲ. 'ಈ ಜಗತ್ತು ಇಷ್ಟರಲ್ಲಿಯೇ ಸುಷುಪ್ತಿಯಲ್ಲಿ ಆತ್ಮರೂಪಕ್ಕೆ ತಿರುಗುತ್ತಿದೆ' ಎಂದಾಗಲಿ, 'ಇನ್ನುಮೇಲೆ ಎಚ್ಚರವಾಗಲು ಜಗತ್ತು ತೋರಿಕೊಳ್ಳುತ್ತದೆ ಎಂದಾಗಲಿ, ಯಾರಿಗೂ ಅನುಭವಕ್ಕೆ ಬರುವದಿಲ್ಲ. ಆದರೂ ಪ್ರತಿಯೊಂದು ಎಚ್ಚರದಲ್ಲಿಯೂ ಆತ್ಮನೊಡನೆ ಜಗತ್ತು ತೋರಿಕೊಳ್ಳುತ್ತಲಿದ್ದು ಸುಷುಪ್ತಿಯಲ್ಲಿ ಆತ್ಮನಲ್ಲಿಯೇ ಕರಗಿಹೋಗುವದೆಂಬುದು ಸರ್ವಾನುಭವಸಂಮತ. ನಾವು ನಿದ್ರಿಸುತ್ತಿರುವಾಗಲೂ ಪ್ರಪಂಚವು ಹೊರಗೆ ಇದ್ದುಕೊಂಡೇ ಇರುತ್ತದೆ – ಎಂದು ಜನರು ಭಾವಿಸಿಕೊಳ್ಳುವದು ನಿಜ. ಆದರೆ ಎಚ್ಚರಕ್ಕೆ ಕಟ್ಟುಬಿದ್ದಿರುವ ಜಗತ್ತು ಎಚ್ಚರವು ಹೋದಮೇಲೂ ಇರುತ್ತದೆ ಎಂಬುದು ಅರ್ಥಹೀನವಾದ ಮಾತೆಂಬುದು ಸ್ಪಷ್ಟ. ಈ ರೀತಿಯಲ್ಲಿ ಜಗತ್ತು ಬ್ರಹ್ಮದಿಂದಾಗುವದೆಂಬುದೂ ಬ್ರಹ್ಮವು ಅದಕ್ಕೆ ಕಾರಣ ವೆಂಬುದೂ ಲೋಕದಲ್ಲಿ ಜನರು ನಂಬಿರುವ ಕಾರ್ಯಕಾರಣಭಾವದಂತೆ ಅಲ್ಲ. ಹಗ್ಗದಲ್ಲಿ ಹಾವು ತೋರಿಕೊಳ್ಳುವಂತೆಯೇ ಇದು ಎಂದು ಆಚಾರ್ಯರು ಹೇಳಿರುವದಕ್ಕೆ ಅನುಭವದ ಆಧಾರವಿದೆ. ಹೀಗೆಂದಮಾತ್ರದಿಂದ ವ್ಯವಹಾರದೃಷ್ಟಿ ಯಿಂದಲೂ ಜಗತ್ತೆಂಬುದು ಬರಿಯ ಭ್ರಾಂತಿಯೆಂದೇನೂ ಆಗುವದಿಲ್ಲ ; ಪರಮಾರ್ಥದೃಷ್ಟಿಯಿಂದ ಜಗತ್ತು ಹುಟ್ಟುತ್ತದೆಯೆಂದೂ ಆಗುವದಿಲ್ಲ.

ಸುಷುಪ್ತಿಯಲ್ಲಿ ನಾವು ನಮ್ಮ ಬ್ರಹ್ಮಸ್ವರೂಪವನ್ನೇ ಸೇರಿಕೊಳ್ಳುತ್ತಿರುವೆ ವೆಂಬುದು ಹೀಗೆ ಸ್ಫುಟವಾಗುತ್ತದಷ್ಟೆ? ಆದರೂ ಜನರಿಗೇಕೆ ಇದು ತಿಳಿಯುವದಿಲ್ಲ? – ಎಂಬ ಪ್ರಶ್ನೆಗೆ ಶ್ರುತಿ ಹೀಗೆನ್ನುತ್ತಿದೆ :

> **ಯಥಾಪಿ ಹಿರಣ್ಯನಿಧಿಂ ನಿಹಿತಮಕ್ಷೇತ್ರಜ್ಞಾ ಉಪರ್ಯುಪರಿ ಸಂಚರನ್ತೋ ನ ವಿಂದೇಯುರೇವಮೇವೇಮಾಃ ಸರ್ವಾಃ ಪ್ರಜಾ ಅಹರಹರ್ಗಚ್ಛನ್ತ್ಯ ಏತಂ ಬ್ರಹ್ಮಲೋಕಂ ನ ವಿನ್ದನ್ತ್ಯನೃತೇನ ಹಿ ಪ್ರತ್ಯೂಢಾಃ ॥** ಛಾಂ. ೮-೩-೨

ಹೇಗೆ ಭೂಮಿಯೊಳಗೆ ಹೂತಿಟ್ಟಿರುವ ಚಿನ್ನದ ನಿಧಿಯು ಅದರ ಮೇಲೆ ಮೇಲೆಯೇ ಸಂಚರಿಸುತ್ತಿದ್ದರೂ ನಿಧಿಶಾಸ್ತ್ರದಲ್ಲಿ ಹೇಳಿರುವ ರೀತಿಯಿಂದ ನಿಧಿಕ್ಷೇತ್ರವನ್ನು

ಅರಿಯದೆ ಇರುವವರಿಗೆ ಕೈವಶವಾಗದೆ ಇರುವದೋ , ಹಾಗೆಯೇ ಈ ಜೀವರುಗಳು ದಿನದಿನವೂ ಈ ಬ್ರಹ್ಮವೆಂಬ ಲೋಕಕ್ಕೆ ಹೋಗುತ್ತಲೇಇದ್ದರೂ ಇದು ಅವರಿಗೆ ದೊರಕದೆ ಇರುತ್ತದೆ. ಏಕೆಂದರೆ ಅವಿದ್ಯಾನಿಮಿತ್ತವಾದ ಕಾಮ, ಅದರಿಂದ ಅವರು ಅನುಸರಿಸುತ್ತಿರುವ ಸ್ವೇಚ್ಛಾಚಾರ - ಇವುಗಳಿಂದಾಗಿ ಅವರು ಹೊರದೂಡಲ್ಪಟ್ಟಿರುತ್ತಾರೆ . ಅಯ್ಯೋ ! ಇದೇನು ಅವರ ದುರದೃಷ್ಟ! ದಿನದಿನವೂ ತಾವು ಸುಷುಪ್ತಿಯಲ್ಲಿ ಪಡೆಯುತ್ತಿರುವ ಬ್ರಹ್ಮಸ್ವರೂಪವೇ , ಈ ಅವಿದ್ಯಾಕಾಮಕರ್ಮಗಳಿಗೆ ವಶರಾಗಿರುವ ಜನರಿಗೆ ಸಿಕ್ಕದಂತೆ ಆಗಿರುವದಲ್ಲ ! - ಎಂದು ಶ್ರುತಿಯು ಕನಿಕರವನ್ನು ತೋರಿಸುತ್ತಿದೆ. ಸುಷುಪ್ತಿಯಲ್ಲಿ ಯಾವ ಅವಿದ್ಯೆಯಾಗಲಿ, ಕಾಮಕರ್ಮಗಳಾಗಲಿ, ಇರುವದಕ್ಕೆ ಸ್ವಲ್ಪವೂ ಎಡೆಯಿಲ್ಲ ; ನೇರಾಗಿ ಒಬ್ಬೊಬ್ಬ ಜೀವನೂ ತನ್ನ ಬ್ರಹ್ಮಸ್ವರೂಪದಲ್ಲಿ ಏಕವಾಗಿಬಿಟ್ಟಿರುತ್ತಾನೆ. ಆದರೂ ಎಚ್ಚರದವಸ್ಥೆಯಲ್ಲಿ ಬಾಹ್ಯವಿಷಯಗಳ ಲೋಭದಿಂದ ಹೊರಮುಖರಾಗಿಯೇ ಇದ್ದು ನಿದ್ರಿಸುವ ಮೂರ್ಖರಿಗೆ ಸುಷುಪ್ತಿಯೆಂಬುದು ಒಂದು ಅಜ್ಞಾನದ ಅವಸ್ಥೆಯಾಗಿಬಿಟ್ಟಿರುತ್ತದೆ ! ಗೋಲಕೊಂಡದಲ್ಲಿ ರೈತನಿಗೆ ತನ್ನ ಹೊಲದಲ್ಲಿ ಸಿಕ್ಕಿದ ಅನರ್ಘವಾದ ವಜ್ರವೂ ಒಂದು ಹೊಳೆಯುವ ಕಲ್ಲೇ ಎಂದು ತೋರಿದಂತೆ ಆಗಿದೆ, ಅವಿದ್ಯಾವಂತರ ಪಾಡು ! ಕಂಕುಳಲ್ಲಿಯೇ ಮಗುವನ್ನಿಟ್ಟುಕೊಂಡು ಮನೆಯೆಲ್ಲ ಹುಡುಕಿದ ಮೂಢಳಂತೆ ನಾವುಗಳು ನಮ್ಮೊಳಗೇ ನೇರಾಗಿ ಬ್ರಹ್ಮಸ್ವರೂಪವನ್ನಿಟುಕೊಂಡಿದ್ದರೂ ಅದನ್ನು ಅರಿತುಕೊಳ್ಳಲಾರದೆ ಇರುತ್ತೇವೆ. ಆದ್ದರಿಂದ ಈ ಸುಷುಪ್ತಿಯನ್ನು ಕುರಿತು ಇನ್ನೊಮ್ಮೆ ವಿಚಾರಮಾಡಿ ಈ ವಿಷಯವನ್ನು ಪರಿಸಮಾಪ್ತಿಗೊಳಿಸಬೇಕಾಗಿದೆ.

## ೧೮. ಸುಷುಪ್ತಾತ್ಮಸ್ವರೂಪದ ಜ್ಞಾನವು ನಮಗೇಕೆ ಆಗುವದಿಲ್ಲ?

(3-9-64)

ಸರಿಯಾಗಿ ನೋಡಿದರೆ ನಮಗೆ ಆತ್ಮತತ್ತ್ವವು ಎಲ್ಲಕ್ಕಿಂತಲೂ ಹತ್ತಿರವಿರುತ್ತದೆಯಾದರೂ ವಿಚಾರದ ಬಲವಿಲ್ಲದ್ದರಿಂದ ಅದೇ ದೂರದಲ್ಲಿರುತ್ತದೆ. ಆದ್ದರಿಂದಲೇ ಶ್ರುತಿಯು 'ತದ್ದೂರೇ ತದ್ವಂತಿಕೇ' (ಈ . ೫) ಅದು ದೂರದಲ್ಲಿರುತ್ತದೆ , ಅದೇ ಹತ್ತಿರದಲ್ಲಿರುತ್ತದೆ - ಎನ್ನುತ್ತಿದೆ. ನಮ್ಮ ವ್ಯವಹಾರಕ್ಕೆಲ್ಲ ಆತ್ಮನೇ ಜ್ಯೋತಿ ಎಂದು ಶ್ರುತಿಯು ಸಾರುತ್ತಿದೆಯಾದರೂ ಈಗ್ಗೆ ನಾವು ಅದನ್ನೇ ಹುಡುಕಬೇಕಾಗಿದೆ. ಎಚ್ಚರದ

ವ್ಯವಹಾರವೊಂದೇ ನಮಗೆ ಬಹಳ ಹತ್ತಿರ ; ಕನಸಿನ ವಿಚಾರ ದೂರ , ತನಿನಿದ್ರೆಯ ವಿಚಾರವಂತೂ ಮನಸ್ಸಿಗೆ ಬರುವಹಾಗೆಯೇ ಇಲ್ಲ! ಆದ್ದರಿಂದ ಶ್ರುತಿಯು ನಮ್ಮನ್ನು ಆ ಎರಡು ಅವಸ್ಥೆಗಳ ಕಡೆಗೆ ತಿರುಗಿಸಿ 'ಇವನ್ನು ಎಚ್ಚರದ ಕಣ್ಣಿನಿಂದ ನೋಡಬೇಡಿ, ಆಯಾ ಅವಸ್ಥೆಯ ಕಣ್ಣಿನಿಂದಲೇ ನೋಡಿರಿ ! ' ಎಂದು ತಿಳಿಸುತ್ತಿದೆ.

ಎಚ್ಚರದಲ್ಲಿ ಇಂದ್ರಿಯಗಳೇ ನಮಗೆ ಕಣ್ಣು. ಅವುಗಳಿಂದ ನೋಡಿದಾಗ ಜಗತ್ತು ಪರಿಚ್ಛಿನ್ನವಾದ ಬಗೆಬಗೆಯ ದೃಶ್ಯಗಳ ರೂಪದಲ್ಲಿ ತೋರುತ್ತಿರುತ್ತದೆ. ಜೀವರ ಇಂದ್ರಿಯಗಳು ಎಷ್ಟು ! ಅವುಗಳ ಮೂಲಕ ಜೀವರು ಬಾಹ್ಯಜಗತ್ತನ್ನು ಕಾಣುತ್ತಿರುವ ಬಗೆಗಳು ಎಷ್ಟು ! ಯಾರು ಇಂದ್ರಿಯಗಳಿಗೆ ಪರವಶರಾಗಿ ಅವುಗಳು ಹೇಳಿದ್ದನ್ನೇ ನಂಬುತ್ತಿರುವರೋ ಅವರಿಗೆ ಜಗತ್ತು ಪರಿಚ್ಛಿನ್ನದೃಶ್ಯಗಳ ರಾಶಿಯಾಗಿ ಕಾಣುವದು ಸ್ವಾಭಾವಿಕವಾಗಿರುತ್ತದೆ.

ಇನ್ನು ಸ್ವಪ್ನದತ್ತ ತಿರುಗೋಣ :

**ಸ್ವಪ್ನಾನ್ತ ಉಚ್ಚಾವಚಮೀಯಮಾನೋ ರೂಪಾಣಿ ದೇವಃ ಕುರುತೇ ಬಹೂನಿ । ಉತೇವ ಸ್ತ್ರೀಭಿಃ ಸಹ ಮೋದಮಾನೋ ಜಕ್ಷದುತೇವಾಪಿ ಭಯಾನಿ ಪಶ್ಯನ್ ॥** ಬೃ. ೪-೩-೧೩

ಅಲ್ಲಿ 'ಬಗೆಬಗೆಯ ರೂಪಗಳನ್ನು ಪಡೆದು ಸ್ತ್ರೀಯರೊಡನೆ ಸಂತಸಗೊಂಡು ವಿಹರಿಸುತ್ತಿರುವಂತೆಯೂ ನಗುತ್ತಿರುವಂತೆಯೂ ಎಷ್ಟೋ ಭಯಗಳನ್ನು ಕಾಣುವವ ನಂತೆಯೂ ಇರುತ್ತಾನೆ.' ಎಚ್ಚರದಲ್ಲಿ ಹೊರಗಡೆಗೆ ತಿರುಗಿದ ಅರಿವಿದ್ದರೆ , ಕನಸಿನಲ್ಲಿ ಒಳಗಡೆಗೆ ತಿರುಗಿರುವ ಅರಿವು ಇರುತ್ತದೆ. 'ಇಂದ್ರಿಯಗಳಿಂದ ಹೊರಗೆ ವಿಷಯಗಳನ್ನು ಕಾಣುವದು ಎಚ್ಚರ , ಮನಸ್ಸಿನಿಂದಲೇ ವಿಷಯಗಳನ್ನು ಕಲ್ಪಿಸಿಕೊಳ್ಳುವದು ಕನಸು' ಎಂಬುದು ಎಚ್ಚರದ ಪ್ರಮಾತೃವಿನ ದೃಷ್ಟಿಯಿಂದ ವರ್ಣಿಸುವ ಬಗೆ . ಆದರೆ ಸರಿಯಾಗಿ ನೋಡಿದರೆ 'ಆಗ ಕನಸಾಯಿತು, ಈಗ ಎಚ್ಚರವಾಗಿರುತ್ತೇನೆ ' ಎಂಬ ಮಾತಿಗೆ ಅರ್ಥವಿಲ್ಲ. ಏಕೆಂದರೆ ಎಚ್ಚರದಲ್ಲಿರುವ ಕಾಲವು ಕನಸಿನಲ್ಲಿರುವದಿಲ್ಲ . ಕನಸಿನಲ್ಲಿ ಆ ಅವಸ್ಥೆಗೆ ತಕ್ಕ ಬೇರೊಂದು ಕಾಲಮಾನವೇ ತೋರುವದು ನಮ್ಮೆಲ್ಲರ ಅನುಭವದಲ್ಲಿದೆ. ಇದೂ ಅಲ್ಲದೆ ಒಳಹೊಕ್ಕು ನೋಡಿದರೆ, ಎಚ್ಚರದ ಅಂತಃಕರಣವು ಅಲ್ಲಿದೆ ಎಂಬುದಕ್ಕೂ ಪ್ರಮಾಣವಿಲ್ಲ ; ಏಕೆಂದರೆ ಅಲ್ಲಿರುವ ಅಂತಃಕರಣವು ಹೇಗೆಹೇಗೋ ವರ್ತಿಸಿಬಿಡುತ್ತದೆ ; ಎಚ್ಚರವಾದಮೇಲೆಯೇ ನಮಗೆ 'ಹೀಗೆಲ್ಲ ನನಗೇಕೆ ತೋರಿತೋ !' ಎದು ಅಚ್ಚರಿಯಾಗುತ್ತದೆ. ಅಲ್ಲಿ ಯಾವ ವಿಷಯಗಳೂ ನಿಜವಾಗಿ

ಇಲ್ಲದಿದ್ದರೂ ಕಲ್ಪಿತವಾದ ಆ ದೃಶ್ಯಗಳನ್ನೆಲ್ಲ ಬೆಳಗುತ್ತಿರುವ ಆತ್ಮನು ಸ್ವಯಂಜ್ಯೋತಿಯಾಗಿರುತ್ತಾನೆಂಬುದು ಸರ್ವಾನುಭವಸಿದ್ಧ.

ಇನ್ನು ಸುಷುಪ್ತಿಯತ್ತ ದೃಷ್ಟಿಯನ್ನು ಹೊರಳಿಸಿದರೆ,

**ಯತ್ರ ಸುಪ್ತೋ ನ ಕಂಚನ ಕಾಮಂ ಕಾಮಯತೇ ನ ಕಂಚನ ಸ್ವಪ್ನಂ ಪಶ್ಯತಿ ತತ್ ಸುಷುಪ್ತಮ್ ॥**

ಯಾವ ಎಚ್ಚರದ ಕಾಮವೂ ಇಲ್ಲ, ಯಾವ ಕನಸಿನ ದೃಶ್ಯವೂ ಇಲ್ಲದಿರುವ ಅವಸ್ಥೆಯದು! ಅಲ್ಲಿರುವ ಆತ್ಮನನ್ನು ಶ್ರುತಿಯು '**ಚೇತೋಮುಖಃ ಪ್ರಾಜ್ಞಃ**' ಎಂಬ ವಿಶೇಷಣಗಳಿಂದ ಕರೆದಿರುತ್ತದೆ. ಚೇತೋಮುಖನೆಂದರೆ ಚೇತಸ್ಸು (ಅರಿವು) ಎಂಬ ದ್ವಾರದಿಂದ ಸ್ವಪ್ನವನ್ನೋ ಕನಸನ್ನೋ ಪಡೆಯುವವನು ; ಅಥವಾ ಎಚ್ಚರಕನಸುಗಳ ಅರಿವಿಗೆ ದ್ವಾರವಾಗಿರುವವನು ಎಂದರ್ಥ ; ಏಕೆಂದರೆ ನಿದ್ರೆಯ ದ್ವಾರದಿಂದಲೇ ಎಚ್ಚರವೋ, ಕನಸೋ ಆಗಬೇಕಾಗಿದೆ. ಇನ್ನು ಪ್ರಾಜ್ಞನೆಂಬ ಮಾತಿಗೆ ಆಚಾರ್ಯರು ಎರಡು ಅರ್ಥಗಳನ್ನು ಬರೆದಿರುತ್ತಾರೆ :

**ಭೂತಭವಿಷ್ಯಜ್ಜ್ಞಾತೃತ್ವಂ ಸರ್ವವಿಷಯಜ್ಞಾತೃತ್ವಮ್ ಅಸ್ಯೈವ ಇತಿ ಪ್ರಾಜ್ಞಃ ; ಸುಷುಪ್ತೋಽಪಿ ಹಿ ಭೂತಪೂರ್ವಗತ್ಯಾ ಪ್ರಾಜ್ಞ ಇತ್ಯುಚ್ಯತೇ । ಅಥವಾ ಪ್ರಜ್ಞಪ್ತಿಮಾತ್ರಮ್ ಅಸ್ಯೈವ ಅಸಾಧಾರಣಂ ರೂಪಮ್ ಇತಿ ಪ್ರಾಜ್ಞಃ ; ಇತರಯೋಃ ವಿಶಿಷ್ಟಮಪಿ ವಿಜ್ಞಾನಮಸ್ತಿ ॥**

'ಹಿಂದಿನ ಮುಂದಿನ ಕಾಲಗಳಲ್ಲಿರುವ ಎಲ್ಲಾ ವಿಷಯಗಳನ್ನೂ ಅರಿಯುವ ಜ್ಞಾತೃ ಇವನೇ ; ನಿದ್ರೆಯಲ್ಲಿ ಇವನಿಗೆ ಅರಿವು ಇಲ್ಲದಿದ್ದರೂ ಮೊದಲು ಅರಿಯುತ್ತಿದ್ದವನು ಇವನೇ ಎಂಬ ಕಾರಣದಿಂದ ಪ್ರಾಜ್ಞನೆಂದಿದೆ' - ಎಂಬುದು ಒಂದು ಅರ್ಥವಿವರಣೆ. ಎಚ್ಚರದಲ್ಲಿ ಅರಿಯುತ್ತಿರುವ ನಮ್ಮ ಆತ್ಮನೇ ಸುಷುಪ್ತಿಯಲ್ಲಿ ಏನನ್ನೂ ಅರಿಯದೆ ಇರುತ್ತಾನೆ ಎಂಬುದನ್ನು ಇದು ನೆನಪಿಗೆ ತರುತ್ತದೆ. ಇದು ಎಚ್ಚರದೃಷ್ಟಿಯಿಂದ ಹೇಳಿದ ಮಾತು. ಎರಡನೆಯ ಅರ್ಥವು ಅಭಿಪ್ರಾಯಗರ್ಭಿತವಾಗಿರುತ್ತದೆ :

**ಪ್ರಜ್ಞಪ್ತಿಮಾತ್ರಮ್ ಅಸ್ಯೈವ ಅಸಾಧಾರಣಂ ರೂಪಮ್ ಇತಿ ಪ್ರಾಜ್ಞಃ । ಇತರಯೋರ್ವಿಶಿಷ್ಟಮಪಿ ವಿಜ್ಞಾನಮ್ ಅಸ್ತಿ - ಇತಿ ॥**

ಪ್ರಜ್ಞಪ್ತಿಮಾತ್ರ (ಬರಿಯರಿವು) ಎಂಬುದು ಇವನಿಗೇ ಅಸಾಧಾರಣವಾಗಿರುವ ರೂಪವು ; ಏಕೆಂದರೆ ಉಳಿದ (ವೈಶ್ವಾನರ, ತೈಜಸ ಎಂಬ) ಇಬ್ಬರಿಗೂ ವಿಶೇಷ

ಜ್ಞಾನವೂ ಇದೆ. ವಿಶೇಷಜ್ಞಾನವು (ಇದು ಇಂಥದ್ದು ಎಂಬ ರೂಪದಿಂದ ಬಿಡಿಸಿ ಬಿಡಿಸಿ ಅರಿಯುವದು) ಪ್ರಮಾತೃರೂಪಕ್ಕೆ ಅಂಟಿಕೊಂಡಿರುವ ಧರ್ಮವಾಗಿರುತ್ತದೆ. ಧರ್ಮರೂಪವಾದ ಜ್ಞಾನಕ್ಕೆ ವಿಷಯವೂ ಇರಬೇಕು. ಆದರೆ ಸುಷುಪ್ತಿಯಲ್ಲಿ ನಿರ್ವಿಷಯವಾದ 'ಬರಿಯ ಅರಿವು' ಇರುತ್ತದೆ ; ಎಂದರೆ ಅದು ಆತ್ಮನ ಧರ್ಮವಾಗಿರುವದಿಲ್ಲ . 'ಬೆಂಕಿಯ ಬಿಸಿ' ಎಂಬಂತೆ ಅದು ಆತ್ಮನ ಸ್ವರೂಪವೇ ಆಗಿರುತ್ತದೆ. ಕೇವಲಸ್ವರೂಪಜ್ಞಾನವು ಸುಷುಪ್ತಿಯಲ್ಲಿ ಮಾತ್ರವೇ ಅಲ್ಲ , ಮದ ಮೂರ್ಛಾದಿಗಳಲ್ಲಿಯೂ ಇರುತ್ತದೆ ; ಧ್ಯಾನದಿಂದ ಪಡೆಯುವ ಸಮಾಧಿಯಲ್ಲಿಯೂ ಅದೊಂದೇ ಇರುತ್ತದೆ. ಅದೇ ನಿಜವಾಗಿ ಆತ್ಮನ ಸ್ವರೂಪವು. ಸ್ವಪ್ನದಲ್ಲಿಯೂ ಎಚ್ಚರದಲ್ಲಿಯೂ ತೋರುವ ವಿಶೇಷಜ್ಞಾನಗಳೂ ಅದರ ವಿಷಯಗಳೂ - ಎಲ್ಲವೂ ಆತ್ಮನ ಮಾಯಿಕರೂಪವು ; ನಿಜವಾದ ಸ್ವರೂಪವಂತೂ ಆಗಲೂ ಇದ್ದೇಇರುತ್ತದೆ. ಈ ಅವಸ್ಥೆಗಳು ಒಂದಾಗುತ್ತಲೊಂದು ಬಂದೇ ನಮಗೆ ಸ್ವರೂಪದ ಅರಿವಾಗಬೇಕೆಂದೂ ಇಲ್ಲ; ಎಚ್ಚರವೆಂದು ನಾವು ಕರೆಯುತ್ತಿರುವ ಸ್ಥಿತಿಯಲ್ಲಿಯೇ ಈ ಮೂರು ಬಗೆಯನ್ನೂ ಅನುಭವದಲ್ಲಿ ಕಂಡುಕೊಳ್ಳಬಹುದಾಗಿದೆ. ಶ್ರೀಗೌಡಪಾದರು ಹೇಳಿರುವಂತೆ :

**ದಕ್ಷಿಣಾಕ್ಷಿಮುಖೇ ವಿಶ್ವೋ ಮನಸ್ಯನ್ತಸ್ತು ತೈಜಸಃ ।**
**ಆಕಾಶೇ ಚ ಹೃದಿ ಪ್ರಾಜ್ಞಸ್ತ್ರಿಧಾ ದೇಹೇ ವ್ಯವಸ್ಥಿತಃ ॥** ಗೌ.ಕಾ. ೧-೨

ಇಂದ್ರಿಯಗಳಿಂದ ನಾವು ವ್ಯವಹರಿಸುತ್ತಿರುವಾಗ, ಇಂದ್ರಿಯಗಳವರೆಗೂ ತಾದಾತ್ಮ್ಯವನ್ನು ಹೊಂದಿ 'ನಾನು' ಎಂದು ವ್ಯವಹರಿಸುತ್ತಿರುವಾಗ, 'ವಿಶ್ವ'ನೆನಿಸುವೆವು. ವಿಶ್ವನೆಂದರೆ ಪ್ರಮಾತೃರೂಪವೆಂದೇನೂ ಅರ್ಥವಲ್ಲ; ಜಾಗ್ರತ್ಪ್ರಪಂಚಕ್ಕೆಲ್ಲ ಸಾಕ್ಷಿಯಾಗಿರುವ ಪರಮಾತ್ಮನೇ ಆಗ ನಮ್ಮ ರೂಪವು. ಎಚ್ಚರವೆಂಬ ಈ ಅವಸ್ಥೆಯು ಇಡಿಯ ಬಾಹ್ಯಾಧ್ಯಾತ್ಮಿಕಪ್ರಪಂಚದೊಡನೆ ಆಗ ಆತ್ಮನಿಗೆ ಉಪಾಧಿಯಾಗಿರುತ್ತದೆ. ಇಂದ್ರಿಯಗಳನ್ನು ಒತ್ತಲಿಸಿ ಮನೋಮಾತ್ರದಲ್ಲಿ ತಾದಾತ್ಮ್ಯವನ್ನು ಹೊಂದಿರುವಾಗ ಅದನ್ನು ನೋಡುವ ಸಾಕ್ಷಿಯೇ ನಮ್ಮ ಸ್ವರೂಪವು ; ಅದನ್ನೇ ಅಂತಃಪ್ರಜ್ಞನಾದ **'ತೈಜಸನು'** ಎಂದು ಶ್ರುತಿಯಲ್ಲಿ ಕರೆದಿರುವದು. ಸೂಕ್ಷ್ಮಸಮಷ್ಟಿಯನ್ನೇ ಉಪಾಧಿಯಾಗಿ ಉಳ್ಳ ಆತ್ಮಸ್ವರೂಪವು ನಮ್ಮದು ಎಂದು ಅರಿತಾಗ ಈ ತೈಜಸ (ಹಿರಣ್ಯಗರ್ಭ) ರೂಪವು ನಮ್ಮದಾಗಿರುತ್ತದೆ. ಇಂದ್ರಿಯಾನುಭವದ ಸ್ಮರಣೆಯು ಮಾತ್ರ ಉಳಿಯುವಾಗ ಕನಸಿನಂತೆ ಎಚ್ಚರದಲ್ಲಿಯೂ ನಮಗೆ ಈ ತೈಜಸಾತ್ಮಭಾವವು ಅನುಭವದಲ್ಲಿ ತೋರುವದು. ಇನ್ನು ಈ ದರ್ಶನಸ್ಮರಣೆಗಳೆರಡನ್ನೂ ಬಿಟ್ಟು ಹೃದಯದಲ್ಲಿ , ಎಂದರೆ ನಮ್ಮ ಸ್ವರೂಪದಲ್ಲಿಯೇ, ನಾವು ಉಳಿದುಕೊಂಡರೆ ಆಗ

'ಪ್ರಾಜ್ಞ ರೂಪವು' ನಮ್ಮದಾಗುವದು. ಕಣ್ಣುಮುಚ್ಚಿ ಕುಳಿತುಕೊಂಡು 'ನಾನು ಪ್ರಾಜ್ಞನು' ಎಂದು ಭಾನಿಸಿಕೊಳ್ಳಬೇಕೆಂದು ಇಲ್ಲಿ ಹೇಳಿಲ್ಲ ; ಬಾಹ್ಯಜಗತ್ತಿನ ದರ್ಶನವಾಗಲಿ ಸ್ಮರಣೆಯಾಗಲಿ ಇಲ್ಲದೆ ಇದ್ದರೆ , ಮನಸ್ಸು ಕೂಡ ತನ್ನ ರೂಪದಿಂದ ಉಳಿಯುವದಿಲ್ಲ, ಆಗ ನಮ್ಮ 'ಪ್ರಜ್ಞಪ್ತಿಮಾತ್ರ' (ಬರಿಯರಿವಿನ) ರೂಪದಲ್ಲಿ ನಾವು ಉಳಿದುಕೊಂಡು ಬಿಡುತ್ತೇವೆ . ಅದೇ ಪ್ರಾಜ್ಞರೂಪವು.

ಈಗ ಇನ್ನೊಂದು ವಿಷಯ. ನಾವು ಸುಷುಪ್ತಿಯಲ್ಲಿ ನಮ್ಮ ಸ್ವರೂಪವಾದ ಚೈತನ್ಯರೂಪದಲ್ಲಿಯೇ ಉಳಿದಿದ್ದರೂ ನಮಗೇಕೆ ಅದರ ಅರಿವು ಆಗದೆ ಇರುತ್ತದೆ ? ಇಲ್ಲಿ ಚೈತನ್ಯ (ಅರಿವು) ಎಂಬ ಶಬ್ದಕ್ಕೆ ವಿಶಯವನ್ನು ಅರಿಯುವದು ಎಂದು ಅರ್ಥವನ್ನು ಇಟ್ಟು ಕೊಂಡದ್ದರಿಂದ ಈ ಆಕ್ಷೇಪವು ತಲೆಯೆತ್ತಿಕೊಂಡಿರುತ್ತದೆ. 'ಅರಿವು' ಎಂದರೆ ವಿಷಯವನ್ನು ಅರಿಯಲೇಬೇಕೆಂಬ ನಿಯಮವೇನೂ ಇಲ್ಲ. ನಮ್ಮನ್ನು ನಾವು ಅರಿಯುವದೆಂದರೆ, ನಮ್ಮನ್ನೇ ವಿಷಯವಾಗಿ ಮಾಡಿಕೊಂಡು ಅರಿಯುವದಲ್ಲ ; ನಮ್ಮನ್ನು ಅರಿಯುವದಕ್ಕೆ ನಮಗೆ ಯಾವ ಪ್ರಮಾಣವೂ ಬೇಕಿಲ್ಲ, ಪ್ರಾಜ್ಞಸ್ಥಿತಿಯಲ್ಲಿ ಯಾವ ಪ್ರಮಾಣವೂ ಇರುವದೂ ಇಲ್ಲ. ವಿಷಯವಿಷಯಿಭಾವವು ಅಳಿದ ಅವಸ್ಥೆಯನ್ನಲ್ಲವೆ ನಾವು ಸುಷುಪ್ತಿ ಎನ್ನುವದು ? ಆದರೆ ನಾವು ಶುದ್ಧವಾದ ಅನುಭವಸ್ವರೂಪರೇ ಆಗಿರುವದರಿಂದಲೂ ಅನುಭವವನ್ನು ಅರಿಯುವ ಮತ್ತೊಂದು ಸಾಧನವು ಇಲ್ಲದ್ದರಿಂದಲೂ ನಮ್ಮ ಸ್ವರೂಪವನ್ನು ಅರಿಯುವದಿಲ್ಲ . ನಾವು ಸುಷುಪ್ತಿಯ ಅನುಭವವನ್ನು ಪಡೆಯುತ್ತಿರುವದರಿಂದಲೇ , ನಮಗೆ ಆಗ ನಮ್ಮ ರೂಪವು ನಿರ್ವಿಕಲ್ಪವಾದ ಅನುಭವದಿಂದಲೇ ಗೊತ್ತಾಯಿತೆಂದು ಒಪ್ಪಬೇಕು. ಸವಿಶೇಷರೂಪವಾದ – ನಾನು ಇಂಥವನು ಎಂಬ ರೂಪದ – ಅರಿವು ಅಲ್ಲಿರುವದೇ ಇಲ್ಲ . ಏಕೆಂದರೆ ಅಲ್ಲಿ ಯಾವ ವಿಷಯವೂ ಇರುವದೇಇಲ್ಲ . ಸುಷುಪ್ತಿಯ ಈ ಅನುಭವವನ್ನು ಶ್ರುತಿಯು ಹೀಗೆ ವರ್ಣಿಸುತ್ತಿದೆ :

> **ಯಥಾ ಸೋಮ್ಯ ಮಧು ಮಧುಕೃತೋ ನಿಸ್ತಿಷ್ಠನ್ತಿ ನಾನಾತ್ಯಯಾನಾಂ ವೃಕ್ಷಾಣಾಂ ರಸಾನ್ ಸಮವಹಾರಮೇಕತಾಂ ರಸಂ ಗಮಯನ್ತಿ ॥ ತೇ ಯಥಾ ತತ್ರ ನ ವಿವೇಕಂ ಲಭನ್ತೇಽಮುಷ್ಯಾಹಂ ವೃಕ್ಷಸ್ಯ ರಸೋಽಸ್ಮ್ಯ ಮುಷ್ಯಾಹಂ ವೃಕ್ಷಸ್ಯ ರಸೋಽಸ್ಮೀತ್ಯೇವಮೇವ ಖಲು ಸೋಮ್ಯೇಮಾಃ ಸರ್ವಾಃ ಪ್ರಜಾಃ ಸತಿ ಸಂಪದ್ಯ ನ ವಿದುಃ ಸತಿ ಸಂಪದ್ಯಾಮಹ ಇತಿ ॥**
>
> ಛಾಂ. ೬-೯-೧,೨

ಜೇನುಹುಳುಗಳು ಬೇರೆಬೇರೆಯ ಹೂಗಳ ರಸಗಳನ್ನು ಸೇರಿಸಿ ಜೇನನ್ನು ಮಾಡುವಾಗ ಆ ಜೇನುತುಪ್ಪವು ಏಕರಸವಾಗಿಬಿಟ್ಟಿರುತ್ತದೆಯಲ್ಲವೆ ? ಆಗ 'ಇಂಥ

ಹೂವಿನ ರಸವಿದು, ಇಂಥ ಹೂವಿನ ರಸವಿದು' ಎಂದು ಹೇಗೆ ವಿಂಗಡವಾಗಿ ಅರಿವಾಗಬೇಕು ? ಇದರಂತೆ ನಾವು ಸುಷುಪ್ತಿಯಲ್ಲಿ ಸೇರುವಾಗ ಇಡಿಯ ಜಗತ್ತಿನೊಡನೆ ನಮ್ಮ ಪರಮಾರ್ಥಸ್ವರೂಪವಾದ ಸದ್ಬ್ರಹ್ಮದಲ್ಲಿ ಸೇರಿಬಿಟ್ಟಿರುತ್ತೇವೆ. 'ನಾನು ಇಂಥವನು' ಎಂಬ ಬಿಡಿಯ ಅರಿವು ಅಲ್ಲಿ ಹೇಗೆ ಆಗಬೇಕು ? ದೇಶಕಾಲವಸ್ತುಕೃತವಾದ ಯಾವ ಪರಿಚ್ಛೇದವೂ ಅಲ್ಲಿರುವದಿಲ್ಲ . ಏಕೀಭೂತನಾಗಿ ಪ್ರಜ್ಞಾನಘನನಾಗಿ ಜೇನುರಸದಂತೆ ಆನಂದಮಯನಾಗಿರುವ ಆತ್ಮನ ರೂಪವದು ! ಆದ್ದರಿಂದಲೇ 'ನನ್ನ ನಿದ್ರೆ', 'ನಿನ್ನ ನಿದ್ರೆ' ಎಂಬುದು ಜಾಗ್ರದ್ದೃಷ್ಟಿಯಿಂದ ಸರಿಯಾದರೂ ವಸ್ತುಸ್ವಭಾವದೃಷ್ಟಿಯಿಂದ ತಪ್ಪು ತಿಳವಳಿಕೆಯೇ ಆಗಿರುತ್ತದೆ. ಆದ್ದರಿಂದಲೇ 'ನಾನು ನಿದ್ರೆಯನ್ನು ಮಾಡುತ್ತಿದ್ದೇನೆ, ಈಗ ನನ್ನ ಸ್ವರೂಪವಾದ ಪ್ರಜ್ಞಪ್ತಿಯಲ್ಲಿ ಒಂದಾಗಿರುತ್ತೇನೆ ' ಎಂಬ ಅರಿವು ಅಲ್ಲಿ ಆಗುವದಿಲ್ಲ. ಆಗ ನಾನು ನಿದ್ರಿಸುತ್ತಿದ್ದೇನೆ ಎಂಬ ಅರಿವು ಆಗುವಂತೆಯೇ ಇಲ್ಲ. ಏಕೆಂದರೆ, ಎಚ್ಚರದ ನಾನು ಎಂಬ ಅನುಭವವು ಕನಸಿನಲ್ಲಿಯೇ ಇಲ್ಲ, ಇನ್ನು ನಿದ್ರೆಯಲ್ಲಿ ಎಲ್ಲಿಂದ ಬರಬೇಕು ? ಹೀಗೆ ಅರಿಯದೆಯೇ ಬರಿಯ ಇರವೂ ಬರಿಯ ಅರಿವೂ ಆಗಿರುವ ಪರಮಾತ್ಮನಲ್ಲಿ ಒಂದಾಗುತ್ತಿರುವದರಿಂದಲೇ ಎಚ್ಚತ್ತಾಗ ನಾವು ಆ ಪ್ರಜ್ಞಾನಘನಸ್ವರೂಪದಿಂದ ಎಚ್ಚರುವದಿಲ್ಲ ; ನಮ್ಮನಮ್ಮ ರೂಪದಿಂದಲೇ ಎಚ್ಚರುತ್ತೇವೆ – ಎಂದು ಶ್ರುತಿಯು ಹೇಳುತ್ತಿದೆ :

> **ತ ಇಹ ವ್ಯಾಘ್ರೋ ವಾ ಸಿಂಹೋ ವಾ ವೃಕೋ ವಾ ವರಾಹೋ ವಾ ಕೀಟೋ ವಾ ಪತಂಗೋ ವಾ ದಂಶೋ ವಾ ಮಶಕೋ ವಾ ಯದ್ಯದ್ ಭವನ್ತಿ ತದಾಭವನ್ತಿ॥** ಛಾಂ. ೬–೯–೩.

ಮನುಷ್ಯರು ಮಾತ್ರವಲ್ಲ . ಹುಲಿ, ಸಿಂಹ, ತೋಳ, ಕಾಡುಹಂದಿ, ಹುಳುಹುಪ್ಪಟೆ, ಕಾಡುನೊಣ, ಸೊಳ್ಳೆ – ಇಂಥ ಪ್ರಾಣಿಗಳು ಕೂಡ ಸುಷುಪ್ತಿ ಎಂದು ನಾವು ಎಚ್ಚರದ ದೃಷ್ಟಿಯಿಂದ ಕರೆಯುತ್ತಿರುವ ಸ್ಥಿತಿಯಲ್ಲಿ ಆ ಪ್ರಜ್ಞಾನಘನ ಸ್ವರೂಪದಲ್ಲಿಯೇ ಒಂದಾಗಿಬಿಟ್ಟಿರುತ್ತವೆ. ಆದರೆ ಹಾಗೆಂಬುದರ ಅರಿವು ಮನುಷ್ಯರಿಗೂ ಇರುವದಿಲ್ಲ. ಇನ್ನು ಪ್ರಾಣಿಗಳಿಗೆಲ್ಲಿ ಬರಬೇಕು ? ಆದ್ದರಿಂದ ಎಚ್ಚರುವಾಗ ಹುಲಿಯಾಗಿದ್ದದ್ದು ಹುಲಿಯಾಗಿಯೇ ಎಚ್ಚರುವದು, ಸಿಂಹವು ಸಿಂಹವಾಗಿಯೇ, ತೋಳವು ತೋಳವಾಗಿಯೇ – ಹೆಚ್ಚೇಕೆ – ಯಾವಯಾವ ಪ್ರಾಣಿಯು ಯಾವಯಾವ ರೂಪದಲ್ಲಿದ್ದು ಆ ಪರಮಾತ್ಮನಲ್ಲಿ ಐಕ್ಯವನ್ನು ಹೊಂದಿತ್ತೋ ಆಯಾ ಪ್ರಾಣಿಯ ರೂಪದಿಂದಲೇ ಎಚ್ಚರುವದು. ಆತ್ಮಸ್ವರೂಪದಲ್ಲಿರುವದು

ಸುಷುಪ್ತಿಯಲ್ಲಿ ಮಾತ್ರವೇ ಅಲ್ಲ , ಎಚ್ಚರ ಕನಸುಗಳಲ್ಲಿಯೂ ಇದ್ದೇಇದೆ ; ಆದರೆ ಅದರ ಅರಿವು ಮಾತ್ರ ಎಲ್ಲರಿಗೂ ಇಲ್ಲ . ಆದ್ದರಿಂದಲೇ ಅಧ್ಯಾತ್ಮವಿದ್ಯೆಯ ಅವಶ್ಯಕತೆ ಇದೆ - ಎಂದಾಯಿತು.

ನಿದ್ರೆಯಲ್ಲಿ 'ನಾನು ' ಎಂಬುದಿಲ್ಲವಾದ್ದರಿಂದ ಅಲ್ಲಿ ನಮ್ಮ ಸ್ವರೂಪದ ಅರಿವು ಆಗದಿದ್ದರೆ ಹೋಗಲಿ, ಎಚ್ಚತ್ತಮೇಲೆ ನಾನು ಎಂಬ ರೂಪವೂ ಇದೆಯಲ್ಲ ! ಈಗಲಾದರೂ 'ಸುಷುಪ್ತಿಯಲ್ಲಿ ನಾನು ಬರಿಯ ಇರಿವಿನ , ಬರಿಯ ಅರಿವಿನ , ಪರಮಾತ್ಮರೂಪದಲ್ಲಿ ಒಂದಾಗಿದ್ದೆನು ; ಅಲ್ಲಿಂದ ಈಗ ಎಚ್ಚರಕ್ಕೆ ಬಂದಿದೇನೆ ' ಎಂಬ ಅರಿವು ಏಕೆ ಆಗುವದಿಲ್ಲ? ಎಂದು ಯಾರಾದರೂ ಕೇಳಬಹುದು , ಇದಕ್ಕೆ ಶ್ರುತಿಯು ಈ ಉತ್ತರವನ್ನು ಕೊಟ್ಟಿದೆ :

> **ಇಮಾಃ ಸೋಮ್ಯ ನದ್ಯಃ ಪುರಸ್ತಾತ್ ಪ್ರಾಚ್ಯಃ ಸ್ಯನ್ದನ್ತೇ ಪಶ್ಚಾತ್ ಪ್ರತೀಚ್ಯಸ್ತಾಃ ಸಮುದ್ರಾತ್ ಸಮುದ್ರಮೇವಾಪಿಯನ್ತಿ ಸ ಸಮುದ್ರ ಏವ ಭವತಿ ತಾ ಯಥಾ ತತ್ರ ನ ವಿದುರಿಯಮಹಮಸ್ಮೀಯಮಹಮಸ್ಮೀತಿ । ಏವಮೇವ ಖಲು ಸೋಮ್ಯೇಮಾಃ ಸರ್ವಾಃ ಪ್ರಜಾಃ ಸತ ಆಗಮ್ಯ ನ ವಿದುಃ ಸತ ಆಗಚ್ಛಾಮಹ ಇತಿ ॥** ಛಾಂ. ೬-೧೦-೧,೨.

ಸುಷುಪ್ತಿಯಲ್ಲಿ ನಾವು ಆ ಪ್ರಾಜ್ಞನಲ್ಲಿ ಒಂದಾಗಿರುತ್ತಿದ್ದು ಅಲ್ಲಿಂದಲೇ ಬಂದರೂ ಅದರ ಅರಿವು ಇಲ್ಲದಿರುವದು ಸ್ವಾಭಾವಿಕವೇ ಆಗಿದೆ. ನದಿಗಳಲ್ಲಿ ಕೆಲವು ಪೂರ್ವಕ್ಕೆ ಮತ್ತೆ ಕೆಲವು ಪಶ್ಚಿಮಕ್ಕೆ ಹರಿಯುತ್ತಿರುತ್ತವೆ ; ಅವೆಲ್ಲವೂ ಸಮುದ್ರಕ್ಕೇ ಹೋಗಿ ಎಲ್ಲವೂ 'ಸಮುದ್ರವೇ' ಎನ್ನಿಸಿಕೊಂಡುಬಿಡುತ್ತದೆ. ಸೂರ್ಯನ ಕಿರಣದಿಂದ ಆವಿಯಾದ ಸಮುದ್ರದ ನೀರು ಮೋಡವಾಗಿ ಆಕಾಶದಲ್ಲಿ ಹರಿದಾಡಿಕೊಂಡಿದ್ದು ವರ್ಷಾಕಾಲದಲ್ಲಿ ಮತ್ತೆ ಮಳೆಯಾಗಿ ಸುರಿದು ಬೇರೆಬೇರೆಯ ನದಿಗಳ ರೂಪಗಳನ್ನು ತಳೆಯುತ್ತದೆ. ಆ ನದಿಗಳು ಮತ್ತೆ ಪೂರ್ವಕ್ಕೋ ಪಶ್ಚಿಮಕ್ಕೋ ಹರಿಯುತ್ತವೆ. ಇದಲ್ಲವೆ, ವಸ್ತುಸ್ಥಿತಿ ? ಆದರೆ 'ಈ ನದಿಗಳು ಸಮುದ್ರದಿಂದಲೇ ಬಂದಿವೆ, ಮತ್ತೆ ಸಮುದ್ರಕ್ಕೆ ಹೋಗುತ್ತಿವೆ ' ಎಂದು ಸಾಮಾನ್ಯಜನರು ಯಾರುತಾನೆ ಅರಿತುಕೊಳ್ಳುತ್ತಾರೆ ? 'ಇಂಥ ನದಿಯು ಪೂರ್ವಕ್ಕೆ ಹರಿಯುತ್ತದೆ, ಇಂಥದ್ದೊಂದು ಪಶ್ಚಿಮಕ್ಕೆ ಹರಿಯುತ್ತದೆ ' ಎಂದು ಇಷ್ಟುಮಾತ್ರವೇ ಅವರ ಮನಸ್ಸಿಗೆ ಹತ್ತಿರುತ್ತದೆ . ಅಲ್ಲವೆ ? ಇದರಂತೆಯೇ ಜೀವರುಗಳು 'ನಾನು ಇಂಥವನು ' , 'ನಾನು ಇಂಥವನು' ಎಂದು ವ್ಯಕ್ತಿರೂಪ ದಲ್ಲಿಯೇ ಅಭಿನಿವೇಶವುಳ್ಳವರಾಗಿರುತ್ತಾರೆ. ಆದ್ದರಿಂದ ಅವರಿಗೆ 'ನಾನು ಪ್ರಜ್ಞಾನೈಕರಸನಾದ ಪರಮಾತ್ಮನಾದ ನಾನು ಈ ರೂಪವನ್ನಾಂತು ಬಂದಿರುತ್ತೇನೆ '

ಎಂದು ಎಂದಿಗೂ ಅನಿಸುವದಿಲ್ಲ ; ಹುಲಿಯು ಎಚ್ಚತ್ತಾಗ ತಾನು ಹುಲಿಯೆಂದೇ ಬಗೆಯುವದು, ಸಿಂಹವು ತಾನು ಸಿಂಹವೆಂದೇ ಬಗೆಯುವದು. ನಾವು ಮತ್ತೆಮತ್ತೆ ಆ ಪ್ರಜ್ಞಾನಾಮೃತಸಮುದ್ರದಲ್ಲಿ ಒಂದಾಗಿ ಅಲ್ಲಿಂದಲೇ ಬರುತ್ತಿದ್ದರೂ 'ಇಂಥ ಹೆಸರಿನವನಾದ ನಾನು ಈವರೆಗೆ ನಿದ್ರೆಮಾಡುತ್ತಿದ್ದು , ಈಗ ಎಚ್ಚತ್ತೆನು' ಎಂಬ ಭಾವನೆಯೇ ಬಿಗಿದುಕೊಳ್ಳುವದೇ ಹೊರತು, 'ಎಂದೆಂದಿಗೂ ನಾನು ಪ್ರಾಜ್ಞ ಸ್ವರೂಪನೇ ' ಎಂಬ ಅರಿವು ಆಗುವದಿಲ್ಲ. ಇದನ್ನು ನೆನಪಿಗೆ ತರುವದಕ್ಕೆ ಶಾಸ್ತ್ರವೂ ಗುರುವೂ ಬೇಕು. ಆಗಲೇ ಈ ಅಧ್ಯಾತ್ಮವಿದ್ಯೆಯು ಅಳವಡುವದು.

ಬರಿನಿದ್ರೆಯಲ್ಲಿ ನಾವು ಯಾವ ರೂಪದಲ್ಲಿರುವೆವು - ಎಂಬುದು ಒಬ್ಬರು ಹೇಳಿಕೊಟ್ಟ ಮೇಲೆಯೇ ಮನವರಿಕೆಯಾಗಬೇಕೇ ಹೊರತು, ತನಗೆತಾನೇ ಈ ತಿಳಿವಳಿಕೆಯು ಉಂಟಾಗಲಾರದು. ಒಮ್ಮೆ ಅಜಾತಶತ್ರುವೆಂಬ ರಾಜನಿಗೂ ಗಾರ್ಗ್ಯನೆಂಬ ಬ್ರಾಹ್ಮಣನಿಗೂ ಬ್ರಹ್ಮಸ್ವರೂಪದ ವಿಷಯದಲ್ಲಿ ಸಂವಾದವಾಯಿತು. ಗಾರ್ಗ್ಯನಿಗೆ ಪರಮಾತ್ಮನ ವಿಶೇಷರೂಪಗಳು ಗೊತ್ತಿದ್ದವೇ ಹೊರತು ಅವನ ನಿರ್ವಿಶೇಷರೂಪದ ಅರಿವು ಆಗಿರಲಿಲ್ಲ. ರಾಜನು ಒಬ್ಬ ಸುಪ್ತಪುರುಷನನ್ನು ತಟ್ಟಿ ಎಬ್ಬಿಸಿ ಹೀಗೆಂದು ಗಾರ್ಗ್ಯನನ್ನು ಕೇಳಿದನು :

> **ಸ ಹೋವಾಚಾಜಾತಶತ್ರುರ್ಯತ್ರೈಷ ಏತತ್ ಸುಪ್ತೋಽಭೂತ್ ಯ ಏಷ ವಿಜ್ಞಾನಮಯಃ ಪುರುಷಃ ಕ್ವೈಷ ತದಾಭೂತ್ ಕುತ ಏತದಾಗಾತ್ ಇತಿ ತದು ಹ ನ ಮೇನೇ ಗಾರ್ಗ್ಯಃ ॥** ಬೃ. ೨-೧-೧೬.

'ಈವರೆಗೆ ನಿದ್ರಿಸುತ್ತಿದ್ದನಲ್ಲ , ಈ ವಿಜ್ಞಾನಮಯನಾದ ಪುರುಷನು ಆಗ ಎಲ್ಲಿದ್ದನು ? ಎಲ್ಲಿಂದ ಬಂದನು ?' ವಿಜ್ಞಾನಮಯನೇ ಆಗಿರುವದರಿಂದ ಇವನಿಗೆ ಅದರ ಅರಿವು ಆಗಲೂ ಆಗಬೇಕಾಗಿತ್ತಲ್ಲವೆ ? ಅವನಿಗೇಕೆ ಆಗ ಅದರ ಅರಿವಾಗಲಿಲ್ಲ ? - ಎಂಬುದು ಪ್ರಶ್ನೆಯ ಅಭಿಪ್ರಾಯ. ಹೀಗೆ ವಿಚಾರಪ್ರಚೋದಕ ವಾದ ಪ್ರಶ್ನೆಯನ್ನು ಹಾಕಿದ ಮೇಲೂ ಗಾರ್ಗ್ಯನಿಗೆ ಉತ್ತರವು ಹೊಳೆಯಲಿಲ್ಲ . ಆದ್ದರಿಂದ ಅಜಾತಶತ್ರುವು ತಾನೇ ಹೀಗೆಂದು ವಿವರಿಸಿ ಹೇಳಿದನು :

> **ಸ ಹೋವಾಚಾಜಾತಶತ್ರುರ್ಯತ್ರೈಷ ಏತತ್ ಸುಪ್ತೋಽಭೂತ್ ಯ ಏಷ ವಿಜ್ಞಾನಮಯಃ ಪುರುಷಃ ತದೇಷಾಂ ಪ್ರಾಣಾನಾಂ ವಿಜ್ಞಾನೇನ ವಿಜ್ಞಾನಮಾದಾಯ ಯ ಏಷೋಽನ್ತರ್ಹೃದಯ ಆಕಾಶಸ್ತಸ್ಮಿನ್ ಶೇತೇ ತಾನಿ ಯದಾ ಗೃಹ್ಣಾತ್ಯಥ ಹೈತತ್ ಪುರುಷಃ ಸ್ವಪಿತಿ ನಾಮ ತದ್ ಗೃಹೀತ ಏವ ಪ್ರಾಣೋ ಭವತಿ ಗೃಹೀತಾ ವಾಗ್ಗೃಹೀತಂ ಚಕ್ಷುರ್ಗೃಹೀತಂ ಶ್ರೋತ್ರಂ ಗೃಹೀತಂ ಮನಃ ॥** ಬೃ. ೨-೧-೧೭.

'ಈ ವಿಜ್ಞಾನಮಯಪುರುಷನು ಆಗ ಇಂದ್ರಿಯಗಳ ಅರಿವನ್ನೆಲ್ಲ ತನ್ನ ಅರಿವಿನಿಂದಲೇ ತೆಗೆದುಕೊಂಡು ಹೃದಯದೊಳಗೆ ಇರುವ ಆಕಾಶವಿದೆಯಲ್ಲ, ಅದರೊಳಗೆ ಇರುತ್ತಿದ್ದನು.' ಇಂದ್ರಿಯಗಳಲ್ಲಿರುವ ಅರಿವೆಂಬುದೂ ಈ ಚಿತ್ಸ್ವರೂಪನ ಆಭಾಸಮಾತ್ರವೇ ಆಗಿರುತ್ತದೆ. ಸುಷುಪ್ತಿಯಲ್ಲಿ ಇಂದ್ರಿಯಗಳೂ ಮನಸ್ಸೂ - ಎಲ್ಲವೂ ಇವನಲ್ಲಿಯೇ ಸೇರಿಬಿಟ್ಟಿರುತ್ತದೆ ; ಆಗ ಇವನಿಗೆ 'ಸ್ವಪಿತಿ' (ನಿದ್ರಿಸುತ್ತಾನೆ) ಎಂಬ ಹೆಸರು ಬರುತ್ತದೆ . ಸ್ವಪಿತಿ ಎಂದರೆ ತನ್ನಲ್ಲಿಯೇ ಲಯವಾಗಿಬಿಟ್ಟಿರುತ್ತಾನೆ ಎಂದರ್ಥ. ಆಗ ಇವನು ಆಕಾಶದಂತೆ ಸರ್ವಗತವೂ ಸೂಕ್ಷ್ಮವೂ ಆದ ತನ್ನ ಚಿನ್ಮಾತ್ರರೂಪದಿಂದ ಇರುತ್ತಾನೆ. ಇದನ್ನು ಆಚಾರ್ಯರು ಭಾಷ್ಯದಲ್ಲಿ ಹೀಗೆಂದು ವಿವರಿಸಿರುತ್ತಾರೆ :

**ಆಕಾಶಶಬ್ದೇನ ಪರ ಏವ ಸ್ವ ಆತ್ಮಾ ಉಚ್ಯತೇ।**
**ತಸ್ಮಿನ್ ಸ್ವೇ ಆತ್ಮನಿ ಆಕಾಶೇ ಶೇತೇ ಸ್ವಾಭಾವಿಕೇ ಅಸಂಸಾರಿಕೇ ॥**

'ಆಕಾಶವೆಂದರೆ ಪರಮಾತ್ಮನೇ. ಆ ತನ್ನ ಆತ್ಮನೇ ಆಗಿರುವ ಆಕಾಶದಲ್ಲಿ - ಸ್ವಭಾವದಿಂದಲೇ ಯಾವ ಸಂಸಾರಧರ್ಮವೂ ಇಲ್ಲದ ಸ್ವರೂಪದಲ್ಲಿ - ಇದ್ದುಕೊಂಡಿರುತಾನೆ ಈ ಸ್ವರೂಪದಲ್ಲಿರುತ್ತಾನೆ ಈ ಸ್ವರೂಪದಿಂದಲೇ ಬರುತ್ತಾನೆ. ಆದರೆ ಎಚ್ಚರದಲ್ಲಿರುವ ವಿಶೇಷರೂಪದಲ್ಲಿರುವ ಅಭಿಮಾನವೆಂಬ ಅವಿದ್ಯೆಗೆ ಪರವಶನಾಗಿರುವದರಿಂದ ಇವನಿಗೆ ಅದರ ಅರಿವಾಗದೆ ಇರುತ್ತದೆ.

ಹಾಗಾದರೆ ಜೀವನು ಸುಷುಪ್ತಿಯಲ್ಲಿ ತನ್ನ ವ್ಯಕ್ತಿತ್ವವನ್ನು ಕಳೆದುಕೊಳ್ಳುತ್ತಾನೆಯೇ ? - ಎಂದು ಹೆದರಿಕೊಳ್ಳುವ ಕಾರಣವೇನೂ ಇಲ್ಲ. ಏಕೆಂದರೆ ನಿಜವಾಗಿ ನಾವು ಎಂದೆಂದಿಗೂ ಆ ಪರಮಾತ್ಮರೂಪದಲ್ಲಿಯೇ ಇರುತ್ತೇವೆ. ವ್ಯಕ್ತಿರೂಪದಿಂದ ಇದ್ದುಕೊಂಡು 'ನೋಡುತ್ತೇನೆ', 'ಕೇಳುತ್ತೇನೆ', 'ಆಲೋಚಿಸುತ್ತೇನೆ', 'ಅರಿಯುತ್ತೇನೆ' - ಎಂದುಮುಂತಾಗಿ ಈಗ ನಾವು ನಂಬಿರುವ ರೂಪವು ಅಜ್ಞಾನಕೃತವಾದ ನಮ್ಮ 'ಅಕೃತ್ಸ್ನರೂಪ' (ಏಕದೇಶವಾದ ರೂಪ) ; ಆ ಪೂರ್ಣರೂಪವೇ ನಮ್ಮ ಸ್ವಾಭಾವಿಕವಾದರೂಪ. ಅದೊಂದೇ ಎಲ್ಲಾ ಜೀವರುಗಳಲ್ಲಿರುವ ಪರಮಾರ್ಥವಾದ ಆತ್ಮರೂಪ. ಜಾಗ್ರತ್ಸ್ವಪ್ನಸುಷುಪ್ತಿಗಳೆಂಬಿವು ನಿಜವಾಗಿ ಆ ನಮ್ಮ ರೂಪಕ್ಕೆ ಸೇರಿರುವದಿಲ್ಲ. ಈಗಿನ ಪ್ರಮಾತೃರೂಪದ ಅಭಿಮಾನದಿಂದ 'ನಾವು ಅವಸ್ಥಾವಂತರು' ಎಂಬ ಜ್ಞಾನವು ಇದ್ದುಕೊಂಡಿರುತ್ತವೆ. ಆದ್ದರಿಂದಲೇ ಶ್ರುತಿಯು

**'ತಸ್ಯ ತ್ರಯ ಆವಸಥಾಃ ತ್ರಯಃ ಸ್ವಪ್ನಾಃ'** ಐ. ೧-೩

'ಅವನಿಗೆ ಇಂದ್ರಿಯಗಳು, ಮನಸ್ಸು, ಹೃದಯಾಕಾಶ - ಎಂಬ ಮೂರು ವಾಸಸ್ಥಾನಗಳಿರುತ್ತವೆ, ಜಾಗ್ರತ್ಸ್ವಪ್ನಸುಷುಪ್ತಿಗಳೆಂಬ ಮೂರು ಸ್ವಪ್ನಗಳು ಆಗುತ್ತಿವೆ'

ಎಂದು ಹೇಳುತ್ತಿದೆ. ಈ ಮೂರೂ ಅವಸ್ಥೆಗಳ ಸಂಪರ್ಕವು ನಮಗೆ ಇಲ್ಲವೆಂಬುದನ್ನು ಇನ್ನೂ ವಿವರಿಸಬೇಕಾಗಿದೆ. ಆದರೆ ಶಾಸ್ತ್ರಾಚಾರ್ಯರ ಉಪದೇಶವನ್ನನುಸರಿಸಿದರೆ ನಮ್ಮ ಪರಮಾರ್ಥಸ್ವರೂಪವನ್ನು ಅರಿತುಕೊಳ್ಳುವದಕ್ಕೆ ಮಾತ್ರ ಇವು ಒಳ್ಳೆಯ ಸಾಧನವಾಗಿರುತ್ತವೆ - ಎಂಬುದನ್ನು ಇಲ್ಲಿ ನೆನಪಿನಲ್ಲಿಡಬೇಕು.

## ೧೯. ವಿಜ್ಞಾನಮಯನ ಪರಮಾರ್ಥರೂಪ

(5-9-64)

ನಮ್ಮ ವ್ಯವಹಾರಕ್ಕೆ ಏತರ ಬೆಳಕು ಸಹಾಯಕವಾಗಿದೆ ? - ಎಂಬ ಪ್ರಶ್ನೆಗೆ 'ಈ ಇಂದ್ರಿಯಗಳ ನಡುವೆ ಇದ್ದುಕೊಂಡಿರುವ, ಹೃದಯದ ಒಳಗೆ ಇರುವ ಜ್ಯೋತಿಯಾದ ಪುರುಷನೇ ಆ ಬೆಳಕು' ಎಂಬ ಉತ್ತರವನ್ನು ಯಾಜ್ಞವಲ್ಕ್ಯರು ಕೊಟ್ಟು ಅವಸ್ಥಾ ತ್ರಯವಿಚಾರವನ್ನು ಮಾಡಿರುತ್ತಾರೆ. ಅದನ್ನನುಸರಿಸಿ ವಿಮರ್ಶಿಸಿದ್ದರಿಂದ ಜಾಗ್ರತ್ಸ್ವಪ್ನಗಳಿಗೆ ನಿಜವಾಗಿ ಯಾವ ಭೇದವೂ ಇಲ್ಲವೆಂದೂ ಆತ್ಮನು ಸ್ವಯಂಜ್ಯೋತಿ ಯಾಗಿಯೇ ಇದ್ದುಕೊಂಡು ವ್ಯವಹಾರಕ್ಕೆಲ್ಲ ಸಹಾಯಕನಾಗಿರುತ್ತಾನೆ ಎಂದೂ ನಿರ್ಣಯಿಸಿದ್ದಾಯಿತು. ಬಳಿಕ ಸುಷುಪ್ತಿಯ ತತ್ತ್ವವನ್ನು ವಿಚಾರಮಾಡಲಾಯಿತು. ಪ್ರತಿಯೊಂದು ಅವಸ್ಥೆಯನ್ನೂ ಎಚ್ಚರದ ದೃಷ್ಟಿಯಿಂದಲೂ ಆಯಾ ಅವಸ್ಥೆಗಳ ದೃಷ್ಟಿಯಿಂದಲೂ ವಿಮರ್ಶಿಸುತ್ತಿರುತ್ತೇವೆ.

ಎಚ್ಚರದ ದೃಷ್ಟಿಯಿಂದ ಕನಸು ಮಿಥ್ಯಾಪ್ರಪಂಚವುಳ್ಳದ್ದು, ಸುಷುಪ್ತಿಯಲ್ಲಿ ಏತರ ಅರಿವೂ ಆಗುತ್ತಿರುವದಿಲ್ಲ . ಕನಸಿನ ದೃಷ್ಟಿಯಿಂದ ಕನಸನ್ನು ನೋಡಿದಾಗ ಅದೂ ಎಚ್ಚರದಂತೆಯೇ ಕಾಣುತ್ತಿರುತ್ತದೆ ; ಯಾವದು ಎಚ್ಚರ , ಯಾವದು ಕನಸು ? - ಎಂಬುದನ್ನು ನಿರ್ಣಯಿಸುವದೇ ಆಗುವಂತಿಲ್ಲ . ಸುಷುಪ್ತಿಯ ದೃಷ್ಟಿಯಿಂದಲೇ ಸುಷುಪ್ತಿಯನ್ನು ಪರಿಶೀಲಿಸಿದಾಗ ಅಲ್ಲಿ ನಾನು, ನೀನು, ಪ್ರಪಂಚ - ಮುಂತಾದವುಗಳ ಅನುಭವವೇ ಇರುವದಿಲ್ಲ; ಅಲ್ಲಿ ನಮ್ಮ ಆತ್ಮನು ಸಚ್ಚಿದಾನಂದಸ್ವರೂಪವೇ ಆಗಿರುತ್ತಾನೆ. ಸುಷುಪ್ತಿಯ ಕಣ್ಣಿನಿಂದಲೇ ಎಚ್ಚರಕನಸುಗಳನ್ನು ಪರಿಶೀಲಿಸಿದರೆ ಅಲ್ಲಿಯೂ ಈ ಸಚ್ಚಿದಾನಂದರೂಪವು ಇದ್ದೇಇರುತ್ತದೆಯಾದರೂ ನಮಗೆ ಪ್ರಮಾತೃರೂಪವೂ ಇರುತ್ತದೆ , ಪ್ರಪಂಚವೂ ಕಾಣುತ್ತಿರುತ್ತದೆ . ಹಾಗಾದರೆ ಆತ್ಮಸ್ವರೂಪದಲ್ಲಿ ಆಗ ಯಾವದಾದರೂ ಮಾರ್ಪಾಡು ಆಗಿರುತ್ತದೆಯೇ ? - ಎಂದರೆ ಅದೂ ಇಲ್ಲ ; ಏಕೆಂದರೆ ಆ ದ್ವಿತೀಯಾಭಾಸರೂಪದಿಂದ ನಮ್ಮ ಪರಮಾರ್ಥ

ರೂಪಕ್ಕೂ ಯಾವ ಪರಿಚ್ಛೇದವೂ ಆಗಿರುವದಿಲ್ಲ. ಎಲ್ಲಕ್ಕೂ 'ಸಾಕ್ಷಿ' ಎಂದು ನಾವು ಹೇಳುತ್ತಿರುವ ಆ ಸಚ್ಚಿದಾನಂದಸ್ವರೂಪವೇ ಪ್ರಮಾತೃಪ್ರಮಾಣಪ್ರಮೇಯ ರೂಪವಾಗಿ ವಿಭಕ್ತವಾಗಿರುವ ಪ್ರಪಂಚವೆಲ್ಲವನ್ನೂ ವ್ಯಾಪಿಸಿರುವದರಿಂದ ಆಗಲೂ ನಾವು ನಮ್ಮ ಅದ್ವಿತೀಯಸ್ವರೂಪದಿಂದಲೇ ಇರುತ್ತೇವೆ ಎಂದಾಯಿತು.

ಹೀಗೆ ಅವಸ್ಥೆಗಳನ್ನು ಪರಿಶೀಲಿಸುವದಕ್ಕೆ ನಮಗೆ ಅನುಭವವೇ ಸಾಧನವು. ಸರಿಯಾಗಿ ನೋಡಿದರೆ ಎಚ್ಚರ , ಕನಸು , ಬರಿನಿದ್ರೆ - ಎಂದು ಯಾವಯಾವ ಹೆಸರಿನಿಂದ ಕರೆದರೂ ಅದೆಲ್ಲ ರಾಹುವಿನ ತಲೆ - ಎಂಬಂತೆ ಕಲ್ಪಿತಭೇದವನ್ನು ಅನುಸರಿಸಿ ಹೇಳುವದೇ ಆಗಿದೆ. ಅವಸ್ಥಾತ್ರಯವೆಂಬ ಮಾತೂ ಅದರಿಂದಾಗುವ ಪ್ರತ್ಯಯವೂ ವಿಕಲ್ಪಮಾತ್ರವಾಗಿದೆ. ನಿಜವಾಗಿ ನೋಡಿದರೆ ಅವಸ್ಥೆಗಳ ತತ್ತ್ವವು ಅದ್ವಿತೀಯಪರಮಾತ್ಮನೇ.

ಹಾಗಾದರೆ ಆತ್ಮನ ಸ್ವರೂಪವನ್ನು ಅರಿಯುವದಕ್ಕೆ ಯಾವದು ಸಾಧನ ? ಎಂದರೆ ಇದಕ್ಕೆ ಉತ್ತರವನ್ನು ಆಗಲೇ ಹೇಳಿದ್ದಾಗಿದೆ. ಅನುಭವವೊಂದೇ ಇದಕ್ಕೆ ಸಾಧನ. ತನ್ನ ಸ್ವರೂಪವನ್ನು ಪ್ರಮೇಯವಸ್ತುಗಳನ್ನು ಅರಿಯುವಂತೆ ಕರಣಗಳ ಸಹಾಯದಿಂದ ನೋಡಬೇಕಾದದ್ದೇನೂ ಇಲ್ಲ. ಪ್ರಮಾತೃರೂಪದಿಂದ ನೋಡುವದಕ್ಕೆ ಹೊರಟಾಗ ಅವಸ್ಥಾಭೇದವೇ ಕಾಣುತ್ತದೆ ; ಅನುಭವದಿಂದ ಆತ್ಮೈಕ್ಯವೇ ಕಾಣುತ್ತದೆ . 'ಅವಸ್ಥೆಗಳು ಮೂರು ಇವೆ ' ಎಂಬುದು ಪ್ರಮಾತೃದೃಷ್ಟಿಯಿಂದ ನೋಡಿ 'ಎಲ್ಲಕ್ಕೂ ಸಮಾನವಾಗಿ ಕಾಲವು ಆಧಾರವಾಗಿದೆ ' ಎಂದು ತಪ್ಪಾಗಿ ಅತಿದೇಶಮಾಡಿಕೊಂಡದ್ದರಿಂದ ಆಗಿದೆ. ಎಚ್ಚರಕನಸುಗಳಲ್ಲಿ ವಿಶೇಷಜ್ಞಾನ, ಸುಷುಪ್ತಿಯಲ್ಲಿ ಅಜ್ಞಾನ - ಎಂಬ ಕಲ್ಪನೆಯೂ ಇದರಿಂದಲೇ ಆಗಿರುತ್ತದೆ . ಆದ್ದರಿಂದ ನಾವು ಎಚ್ಚರ , ಕನಸು , ನಿದ್ರೆ - ಎಂದು ಆತ್ಮನನ್ನೇ ವಿಕಲ್ಪಿಸುತ್ತಿರುತ್ತೇವೆ. ಒಂದಕ್ಕೊಂದು ಸಂಬಂಧವಿಲ್ಲದ ಮೂರು ವಿಕಲ್ಪಗಳನ್ನು ಹೇಗೋ ಹೊಂದಿಸಿ ನಾವು ಇಂಥ ಭಾಷೆಯನ್ನು ಪ್ರಯೋಗಿಸುತ್ತಿದೇವೆ. ಇದು '**ಜರದ್ಗವಃ ಕಮ್ಬಲಪಾದುಕಾಭ್ಯಾಂ ದ್ವಾರಿ ಸ್ಥಿತೋ ಗಾಯತಿ ಮದ್ರಕಾಣಿ । ತಂ ಬ್ರಾಹ್ಮಣೀ ಪೃಚ್ಛತಿ ಪುತ್ರಕಾಮಾ ರಾಜನ್ ರುಮಾಯಾಂ ಲಶುನಸ್ಯ ಕೋಽರ್ಘಃ ॥**' (ಮುದಿ ಎತ್ತೊಂದು ಕಂಬಳಿಯ ಕಾಲುಚೀಲವನ್ನು ಹಾಕಿಕೊಂಡು ಬಾಗಿಲಬಳಿ ನಿಂತು ಮದ್ರದೇಶಪದಗಳನ್ನು ಹಾಡುತ್ತಿದೆ. ಮಕ್ಕಳಬಯಕೆ ಇರುವ ಬ್ರಾಹ್ಮಣಿಯು ಅದನ್ನು ಕುರಿತು 'ರಾಜನೆ , ರುಮಾದಲ್ಲಿ ಬೆಳ್ಳುಳ್ಳಿಗೆ ಬೆಲೆ ಏನು ? ' ಎಂದು ಕೇಳುತ್ತಾಳೆ) ಎಂಬ ವಾಕ್ಯದಂತೆ ಅಸಂಬದ್ಧಾರ್ಥವಾಗಿರುತ್ತದೆ. ಶ್ರುತಿಯು ನಮಗೆ ಆತ್ಮಸ್ವರೂಪವನ್ನು ಅನುಭವಕ್ಕೆ ತಂದುಕೊಡುವದಕ್ಕಾಗಿಯೇ ಈ ಅವಸ್ಥೆಗಳೂ

ಇರುವಂತೆ ಅನುವಾದಮಾಡಿಕೊಂಡು 'ಜಾಗರಿತಾವಸ್ಥೆಯ ಆತ್ಮನು ವೈಶ್ವಾನರನು', 'ಸ್ವಪ್ನಾವಸ್ಥೆಯ ಆತ್ಮನು ತೈಜಸನು', 'ಸುಷುಪ್ತಾವಸ್ಥೆಯ ಆತ್ಮನು ಪ್ರಾಜ್ಞನು' - ಎಂದು ಮೆಲ್ಲಮೆಲ್ಲಗೆ ಆತ್ಮಸ್ವರೂಪದ ಅರಿವಿಗೆ ಹತ್ತಿರ ಹತ್ತಿರವಾಗುವಂತೆ ಹೇಳಿಕೊಡುತ್ತಿದೆ.

ಹಾಗಾದರೆ ಆತ್ಮಸ್ವರೂಪವನ್ನು ಇದ್ದದ್ದು ಇದ್ದಂತೆ ಹೇಳುವದು ಹೇಗೆ ? - ಎಂದರೆ ಶ್ರುತಿಯನ್ನು ಕೇಳಿ : -

**'ನಾಂತಃಪ್ರಜ್ಞಂ ನ ಬಹಿಃಪ್ರಜ್ಞಂ ನೋಭಯತಃ ಪ್ರಜ್ಞಂ ನ ಪ್ರಜ್ಞಾನಘನಂ ನ ಪ್ರಜ್ಞಂ ನಾಪ್ರಜ್ಞಮ್ । ಅದೃಷ್ಟಮವ್ಯವಹಾರ್ಯಮಗ್ರಾಹ್ಯಮಲಕ್ಷಣಮ - ಚಿಂತ್ಯಮವ್ಯಪದೇಶ್ಯಮೇಕಾತ್ಮಪ್ರತ್ಯಯಸಾರಂ ಪ್ರಪಂಚೋಪಶಮಂ ಶಾನ್ತಂ ಶಿವಮದ್ವೈತಂ ಚತುರ್ಥಂ ಮನ್ಯನ್ತೇ ಸ ಆತ್ಮಾ ಸ ವಿಜ್ಞೇಯಃ ॥** ಮಾಂ. ೭

ಆತ್ಮನು ಜಾಗ್ರತ್ತಿನಿಂದ ಸ್ವಪ್ನವನ್ನೂ ಸ್ವಪ್ನದಿಂದ ಸುಷುಪ್ತಿಯನ್ನೂ ಒಂದೇ ರಸ್ತೆಯಲ್ಲಿರುವ ಮೂರು ಊರುಗಳನ್ನು ಸೇರಿದಂತೆ ಒಂದೊಂದಾಗಿ ಸೇರುತ್ತಾನೆಂದು ತಿಳಿದಿರುವದು ಬರಿಯ ಭ್ರಾಂತಿ. ಅವೆಲ್ಲ ಶುಕ್ತಿಯಲ್ಲಿ ಬೆಳ್ಳಿಯನ್ನು ಕಲ್ಪಿಸಿದಂತೆ ವಿಕಲ್ಪಮಾತ್ರವಾಗಿರುತ್ತವೆ. ಆರೋಪಿಸಿದ ಬೆಳ್ಳಿ ಮುಂತಾದ ವಿಕಲ್ಪಗಳಿಗೆ ಆಸ್ಪದವಾಗಿರುವ ಕಪ್ಪೆಯಚಿಪ್ಪಿನಂತೆಯೇ ತೈಜಸಾದಿವಿಕಲ್ಪಗಳಿಗೆ ಆಸ್ಪದವಾಗಿರುವದೇ ಆತ್ಮತತ್ತ್ವವು. ಪರಮಾರ್ಥಾತ್ಮನು ಒಳಅರಿವುಳ್ಳ ತೈಜಸನಲ್ಲ, ಹೊರಅರಿವುಳ್ಳ ವಿಶ್ವನೂ ಅಲ್ಲ; ಇವೆರಡರ ನಡುವೆ ಇರುವ, ಒಂದು ಅವಸ್ಥೆಯ ಅರಿವುಳ್ಳವನೂ ಅಲ್ಲ; ಈಗ ಅರಿವಿನ ಗಟ್ಟಿಯಾಗಿದ್ದು ಆಮೇಲೆ ಬಿಡಿಬಿಡಿಯಾಗಿ ಅರಿವುಗಳಿಂದೊಡಗೂಡಿ ಎಚ್ಚರವಾಗುವ ಸ್ವಭಾವದ ಪ್ರಾಜ್ಞನೂ ಅಲ್ಲ. ಈ ಅವಸ್ಥೆಗಳು ಒಂದಿರುವಾಗ ಮಿಕ್ಕೆರಡೂ ಇರುವದಿಲ್ಲ. ಈ ತೈಜಸಾದಿರೂಪವು ಯಾವದೂ ಆತ್ಮನಿಗೆ ಸ್ವಾಭಾವಿಕವಲ್ಲ. ಕೇವಲ ಚೈತನ್ಯಸ್ವರೂಪವೇ ಈತನದು. ಇವನು ಏತಕ್ಕೂ ಗೋಚರನಲ್ಲ, ಹೇಗೂ ಜ್ಞಾನೇಂದ್ರಿಯಗಳಿಂದ ವ್ಯವಹರಿಸುವದಕ್ಕೆ ಬರುವವನಲ್ಲ, ಕರ್ಮೇಂದ್ರಿಯಗಳಿಂದ ಹಿಡಿಯುವದಕ್ಕೆ ಸಿಕ್ಕುವವನಲ್ಲ, ಹೊಗೆಯಿಂದ ಬೆಂಕಿಯನ್ನೂಹಿಸಿ ಸಾಧಿಸುವಂತೆ ಅನುಮಾನಪ್ರಮಾಣದಿಂದ ಗೊತ್ತು ಪಡಿಸುವದಕ್ಕೆ ಇವನಲ್ಲಿ ಯಾವ ಹೆಗ್ಗುರುತೂ ಇರುವದಿಲ್ಲ. ಆದ್ದರಿಂದಲೇ ಮನಸ್ಸಿನಿಂದ ಇವನನ್ನು ಯಾವ ರೀತಿಯಿಂದಲೂ ಚಿಂತಿಸಿಕೊಳ್ಳುವದಕ್ಕೆ ಆಗುವಂತಿಲ್ಲ. ಯಾವ ಶಬ್ದಗಳಿಂದಲೂ ಹೇಳುವದಕ್ಕೂ ಬರುವಂತಿರುವದಿಲ್ಲ, ಜಾತಿ, ದ್ರವ್ಯ, ಗುಣ, ಕ್ರಿಯೆ, ಸಂಬಂಧ - ಮುಂತಾದ ವಿಶೇಷಗಳಿದ್ದರಲ್ಲವೆ, ಶಬ್ದಗಳಿಂದ ವಿವರಿಸಿ ಹೇಳುವದಕ್ಕಾಗಲಿ, ಮನಸ್ಸಿನ ಪ್ರತ್ಯಯದಿಂದ ಚಿಂತಿಸಿ ತಿಳಿಯುವದಕ್ಕಾಗಲಿ ಆದೀತು ?

ಇವನು ಏಕಾತ್ಮಪ್ರತ್ಯಯಸಾರನು , ಆತ್ಮಪ್ರತ್ಯಯದಿಂದಲೇ ಅನುಸರಿಸುವದಕ್ಕೆ ಬರುವಂಥವನು. ಎಚ್ಚರದಲ್ಲಿ ಅಂತಃಕರಣದ ಪ್ರತಯ್ಯಗಳು ಮರ, ಗಿಡ, ಮಡಕೆ , ಕುಡಿಕೆ, ಮನೆಬಾಗಿಲು - ಎಂದು ಮುಂತಾಗಿ ವಸ್ತುಗಳನ್ನು ಗೊತ್ತುಪಡಿಸುವದಕ್ಕೆ ಸಹಾಯಕವಾಗಿರುತ್ತವೆ ; ಆತ್ಮನನ್ನು ಹಾಗೆ ಯಾವದೊಂದು ಪ್ರತ್ಯಯದಿಂದಲೂ ಪರಿಚ್ಛೇದಗೊಳಿಸಿ ಗೊತ್ತುಪಡಿಸಿಕೊಳ್ಳುವದಕ್ಕೆ ಆಗುವದಿಲ್ಲ ; ಆತ್ಮಪ್ರತ್ಯಯವೆಂದರೆ ನಾನೆಂಬ ಅರಿವು. ದೇಹ, ಪ್ರಾಣ, ಮನಆದಿಗಳಲ್ಲಿಯೂ ನಾನೆಂಬ ಪ್ರತ್ಯಯವಿರುವದಾದರೂ ಅವು ಯಾವದೂ ಸಮ್ಯಕ್ಪ್ರತ್ಯಯವಲ್ಲ ; ಮಿಥ್ಯಾ ಪ್ರತ್ಯಯಗಳು. ನಿಜವಾಗಿರುವ ಆತ್ಮನನ್ನು ಕಾಣುವವರೆಗೂ ಈ ಪ್ರತ್ಯಯವನ್ನು ಬೆನ್ನಂಟಿಕೊಂಡು ಒಳಕ್ಕೊಳಕ್ಕೆ ಹೋಗಿ ಅರಿತುಕೊಳ್ಳಬೇಕಾಗಿರುತ್ತದೆ. ಎಚ್ಚರ , ಕನಸು, ಬರಿನಿದ್ರೆ - ಇವುಗಳಲ್ಲೆಲ್ಲ ಈ ಆತ್ಮನೇ ಇರುತ್ತಾನೆ - ಎಂದು ಆತ್ಮಪ್ರತ್ಯಯವನ್ನೇ ಹಿಂಬಾಲಿಸಿಕೊಂಡುಹೋದರೆ ಆತ್ಮನ ಜ್ಞಾನವು ಉಂಟಾಗುತ್ತದೆ. ಹೊಸಬನೊಬ್ಬನು ಬಾಗಿಲಬಳಿಯಿದ್ದ ರಾಜನನ್ನು 'ರಾಜರು ಎಲ್ಲಿದ್ದಾರೆ ?' ಎಂದು ಕೇಳಿದಾಗ ಒಳಕ್ಕೆ ಕರೆದುಕೊಂಡುಹೋಗಿ ಅವನಿಗೆ ರಾಜನೇ ತನ್ನ ಪರಿಚಯವನ್ನು ಮಾಡಿಕೊಟ್ಟಂತೆ ಆತ್ಮಪ್ರತ್ಯಯದಿಂದ ಆತ್ಮನೇ ನಮಗೆ ಕಾಣಿಸಿಕೊಳ್ಳುತ್ತಾನೆ. ಆದ್ದರಿಂದಲೂ ಇವನು 'ಏಕಾತ್ಮಪ್ರತ್ಯಯಸಾರನು.'

ಈ ಆತ್ಮನು **ಪ್ರಪಂಚೋಪಶಮನು.** ಇವನು ತೈಜಸ, ವೈಶ್ವಾನರ - ಮುಂತಾದ ಅವಸ್ಥಾವಂತನು ಹೇಗಲ್ಲವೋ ಹಾಗೆಯೇ ಸ್ವಪ್ನ , ಜಾಗರಿತ, ಸುಷುಪ್ತಿ - ಎಂಬ ಅವಸ್ಥೆಗಳ ರೂಪದ ಪ್ರಪಂಚವೂ ಇಲ್ಲದವನು.

ಇವನು ಸರ್ವವಿಧವಾದ ದ್ವೈತವನ್ನೂ ಮೀರಿರುವ **ಶಾಂತನು,** ಇವನ ಅರಿವು ರಾಗದ್ವೇಷಗಳಿಗೆ ಎಡೆಗೊಡದಿರುವದರಿಂದ ಇವನು **ಶಿವನು.** ಇವನಲ್ಲಿ ತನ್ನಂತೆ ಇರುವ ಮತ್ತೊಂದಿಲ್ಲ , ತನಗಿಂತ ವಿಲಕ್ಷಣವಾದ ಮತ್ತೊಂದಿಲ್ಲ , ತನ್ನೊಳಗೇ ವಿಭಕ್ತವಾಗಿರುವ ಭಾಗಗಳಿಲ್ಲ; ಸರ್ವಥಾ ಅದ್ವೈತನಾಗಿರುತ್ತಾನೆ.

ಹೀಗಿರುವದರಿಂದ ಇವನು **ಚತುರ್ಥನು** , ಎಂದರೆ ಜಾಗ್ರತ್ಸ್ವಪ್ನಸುಷುಪ್ತಿಗಳ ಸಾಕ್ಷಿಯಾಗಿ ತೋರುವ ಆತ್ಮಸ್ವರೂಪಗಳಿಗಿಂತ ವಿಲಕ್ಷಣವಾಗಿರುವ ನಾಲ್ಕನೆಯ ಸ್ವರೂಪದವನು. ಇವನೇ **ಆತ್ಮನು** ; ಅವಸ್ಥೆಗಳು , ಅವಸ್ಥೋಪಹಿತವಾದ ಆತ್ಮರೂಪ ಗಳು - ಎಲ್ಲವನ್ನೂ ವ್ಯಾಪಿಸಿಕೊಂಡಿರುವ ರೂಪದವನು.

ಹೀಗೆ ಸರ್ವವಿಕಲ್ಪಗಳನ್ನೂ ಅಲ್ಲಗಳೆದು ತೋರಿಸಿರುವ ಆತ್ಮನನ್ನು ಅನುಭವದಿಂದಲೇ ತನ್ನನ್ನು ತಾನೇ ಅರಿತುಕೊಳ್ಳಬೇಕು - ಎಂದು ತಿಳಿಸಿಕೊಡುವದ

ಕ್ಕಾಗಿ 'ವಿಜ್ಞೇಯಃ' ಎಂದುಶ್ರುತಿ ಹೇಳುತ್ತಿದೆ. ಆತ್ಮನನ್ನು ಹೇಗೂ ವಿಷಯವಾಗಿಸಿಕೊಂಡು ಅರಿಯುವದಕ್ಕೆ ಆಗುವದಿಲ್ಲ. 'ದೃಷ್ಟಿಯ ದ್ರಷ್ಟೃವನ್ನು ನೀನು ನೋಡಲಾರೆ, ವಿಜ್ಞಾನದ ವಿಜ್ಞಾತೃವನ್ನು ಅರಿಯಲಾರೆ'. (ಬೃ . ೨-೪-೨) ಎಂದು ಉಷಸ್ತನಿಗೂ, 'ಯಾವನಿಂದ ಇದೆಲ್ಲವನ್ನೂ ಅರಿಯುತ್ತಾರೋ ಆತನನ್ನು ಏತರಿಂದ ಅರಿಯಲಾದೀತು, ವಿಜ್ಞಾತೃವನ್ನೇ ಏತರಿಂದ ಅರಿಯಲಾದೀತು ?' ( ಬೃ.೨-೫-೧೪) ಎಂದು ಮೈತ್ರೇಯಿಗೂ ಯಾಜ್ಞವಲ್ಕ್ಯರು ಹೇಳಿದ್ದರ ಅಭಿಪ್ರಾಯವೇ ಇದು. **ತಾನೇ ತನ್ನನ್ನೇ ತನ್ನಿಂದಲೇ ಅನುಭವದಿಂದ ಅರಿತುಕೊಳ್ಳಬೇಕು ; ಆತ್ಮನನ್ನು ತನಗಿಂತ ಬೇರೆಯಾಗಿ ಮಾಡಿಕೊಂಡು ಅರಿಯುವದು ಎಂದೆಂದಿಗೂ ಆಗದು** , ಹಾಗೆ ಅರಿತದ್ದು ಎಂದಿಗೂ ಆತ್ಮನಲ್ಲ , ಅನುಭವರೂಪನಾದ ಆತ್ಮನು ಇಲ್ಲವೆಂಬುದಂತೂ ಎಂದಿಗೂ ಆಗದ ಮಾತು.

ಈ ಆತ್ಮಜ್ಞಾನವು ಆಗುವ ಬಗೆಯನ್ನು ಶ್ರೀಗೌಡಪಾದಾಚಾರ್ಯರು ಹೀಗೆಂದು ವರ್ಣಿಸಿರುತ್ತಾರೆ :

**ಅನಾದಿಮಾಯಯಾ ಸುಪ್ತೋ ಯದಾ ಜೀವಃ ಪ್ರಬುಧ್ಯತೇ ।**
**ಅಜಮನಿದ್ರಮಸ್ವಪ್ನಮದ್ವೈತಂ ಬುಧ್ಯತೇ ತದಾ ॥** ಗೌ. ಕಾ. ೧-೧೬

ಈ ಆತ್ಮನು ಅನಾದಿಯಾದ ಒಂದಾನೊಂದು ಮಾಯಾನಿದ್ರೆಯಲ್ಲಿದ್ದುಕೊಂಡು ಕನವರಿಸಿಕೊಳ್ಳುತ್ತಿದ್ದಾನೆ. ಯುಕ್ತಿಗೆ ಹೊಂದದೆ ತೋರುವದು ಯಾವದೋ ಅದು ಮಾಯೆಯು ; ನಾವು ಎಚ್ಚರಕನಸುನಿದ್ರೆಗಳನ್ನು ಕಾಣುತ್ತಿದ್ದೇವೆಂಬುದೊಂದು ಇಂಥ ಹುಸಿನಿದ್ರೆಯ ಕನಸು. ಯಾವಗ ಪರಮಕಾರುಣಿಕನಾದ ಗುರುವು ನಿಜವನ್ನು ಬೋಧಿಸುತ್ತಾನೋ ಆಗ ಅವನಿಗೆ ಈ ಹುಸಿಗನಸಿನಿಂದ ಎಚ್ಚರಾಗುವದು. ಅಲ್ಲಿಯವರೆಗೆ ನನ್ನ ತಂದೆ ಇವನು, ಇವನು ಮಗನು, ಇವನು ಮೊಮ್ಮಗನು, ಇವು ಹೊಲಗದ್ದೆಗಳು, ಇವು ದನಕರುಗಳು - ಇವುಗಳಿಂದ ನಾನು ಸುಖದುಃಖಗಳನ್ನು ಅನುಭವಿಸುತ್ತಿರುವೆನು ; ಇದರಿಂದ ಸೊರಗುತ್ತಿದ್ದೇನೆ , ಇದರಿಂದ ಪುಷ್ಟಿಯಾಗುತ್ತಿದೇನೆ - ಎಂದು ಮುಂತಾದ ರೀತಿಯಲ್ಲಿ ಜಾಗ್ರತ್ಸ್ವಪ್ನಗಳೆರಡರಲ್ಲಿಯೂ ಕನವರಿಸಿಕೊಳ್ಳುತ್ತಿರುತ್ತಾನೆ. ಆಚಾರ್ಯನು 'ನೀನು ಇಂಥ ಸ್ವರೂಪದವನಲ್ಲ , ಆ ಪರಮಾತ್ಮನೇ ನೀನು ! ' ಎಂದು ಬೋಧಿಸಲಾಗಿ 'ನಾನು ಎಂದಿಗೂ ಹುಟ್ಟು ಮುಂತಾದ ವಿಕಾರಗಳನ್ನು ಅನುಭವಿಸಿಲ್ಲ , ನಾನು ಎಂದಿಗೂ ಅಜ್ಞಾನನಿದ್ರೆಯಲ್ಲಿರಲಿಲ್ಲ , ಅನ್ಯಥಾಜ್ಞಾನವೆಂಬ ಸ್ವಪ್ನವನ್ನು ಕಾಣಲಿಲ್ಲ , ಎಂದೆಂದಿಗೂ ಅವಸ್ಥಾತ್ರಯಾತೀತನಾದ ನಿತ್ಯಶುದ್ಧಬುದ್ಧ ಮುಕ್ತಸ್ವಭಾವನಾದ ಅದ್ವೈತಾತ್ಮನೇ ನಾನು' ಎಂಬ ಎಚ್ಚರವನ್ನು ಹೊಂದುವನು. ಆಗ

ಕೃತ್ಸ್ನ (ಪೂರ್ಣ, ಸರ್ವ) ರೂಪನಾದ ಆತ್ಮನನ್ನೇ ಅರಿತುಕೊಳ್ಳುವದರಿಂದ, ಸಾಕ್ಷಾತ್ತಾಗಿ ಅಪರೋಕ್ಷವಾಗಿರುವ ಅನುಭವರೂಪನಾದ ಆತ್ಮನೇ ಆಗಿಬಿಡುತ್ತಾನೆ.

ಆತ್ಮನನ್ನು ಅರಿತುಕೊಳ್ಳುವದಕ್ಕೆ **ಅನುಭವವೇದ್ವಾರ** ; ಅನುಭವವನ್ನೇ ಸಾಧನವನ್ನಾಗಿ ಮಾಡಿಕೊಂಡು ವಿಚಾರಮಾಡಬೇಕು. ಆಗ ಮೇಲೆ ಹೇಳಿದಂತೆ ಅಜಾನಿದ್ರಾಸ್ವಪ್ನನಾದ ಅದ್ವೈತಾತ್ಮನ ಅನುಭವವಾಗುವದರಿಂದ **ಅನುಭವವೇ ಫಲ.** ನಮ್ಮ ಆತ್ಮನು ನಿತ್ಯಾನುಭವಸ್ವರೂಪನೇ ಆಗಿರುತ್ತಾನೆ , ಅವನ ಜ್ಯೋತಿಯಿಂದಲೇ ವಿಚಾರವನ್ನು ಮಾಡಿ , ಕೊನೆಯಲ್ಲಿ ಅನುಭವವನ್ನೇ ಮುಟ್ಟುತ್ತೇವೆ. ಇದೇ ಅಧ್ಯಾತ್ಮವಿಚಾರದ ಕ್ರಮ . ಭಗವಂತನು ಹೇಳಿರುವಂತೆ :

**ರಾಜವಿದ್ಯಾ ರಾಜಗುಹ್ಯಂ ಪವಿತ್ರಮಿದಮುತ್ತಮಮ್**
**ಪ್ರತ್ಯಕ್ಷಾವಗಮಂ ಧರ್ಮ್ಯಂ ಸುಸುಖಂ ಕರ್ತುಮವ್ಯಯಮ್** ‖ ಗೀ. ೯-೨

ಇದು ವಿದ್ಯೆಗಳ ರಾಜನಾದ ಅಧ್ಯಾತ್ಮವಿದ್ಯೆ, ಗುಟ್ಟುಗಳಲ್ಲೆಲ್ಲ ರಾಜನಾದ ಗುಟ್ಟು. ಇದರಿಂದ ಜಿಜ್ಞಾಸುವು ಪರಮಪವಿತ್ರನಾಗಿ ನಿತ್ಯಶುದ್ಧಾತ್ಮನೇ ಆಗಿಬಿಡುತ್ತಾನೆ. ಸುಖಾದ್ಯನುಭವಗಳಂತೆ ಇದು ನೇರಾಗಿ ಅನುಭವಕ್ಕೆ ಬರುತ್ತದೆ. ಇದು ಧರ್ಮಕ್ಕೆ ವಿರುದ್ಧವಲ್ಲ . ಸರಿಯಾದ ದಾರಿಯನ್ನು ಕಂಡುಕೊಂಡವರು , ರತ್ನಪರೀಕ್ಷೆಯನ್ನು ಮಾಡುವಂತೆ ಈ ಜ್ಞಾನವನ್ನು ಹೆಚ್ಚಿನ ಆಯಾಸವಿಲ್ಲದೆಯೇ ಸಂಪಾದಿಸಿಕೊಳ್ಳಬಹುದು. ಇದರ ಫಲವಂತೂ ಅವ್ಯಯವಾಗಿರುತ್ತದೆ , ಎಂದೆಂದಿಗೂ ಅದು ನಾಶವಾಗುವಂತಿಲ್ಲ. ಚಾಲೀಸಬಂದವರು ಓದುವ ಕನ್ನಡಕದಂತೆ , ಇದನ್ನು ಉಪಯೋಗಿಸಿಕೊಳ್ಳಬೇಕು . ಶಾಸ್ತ್ರ , ಗುರು - ಇಬ್ಬರ ಜ್ಞಾನಕ್ಕೂ ತನ್ನ ಜ್ಞಾನವನ್ನು ಹೊಂದಿಸಿಕೊಂಡರೆ ಸಾಕಾಗಿದೆ. ಆದರೆ ಓದುವದಕ್ಕೆ ಬಾರದವರಿಗೆ ಕನ್ನಡಕವೇತಕ್ಕೆ ಬಂದೀತು ? ಇದರಂತೆ ಈ ಜ್ಞಾನಮಾರ್ಗಕ್ಕೆ ಸಜ್ಜಾಗಿರಬೇಕು . ಅದಕ್ಕಾಗಿ ಈ ವಿದ್ಯೆಯ ಸಾಧನಮಾರ್ಗವನ್ನು ಅರಿತುಕೊಳ್ಳುವದು ಅವಶ್ಯ .

## ೨೦. ಆತ್ಮಜ್ಞಾನಕ್ಕೆ ಸಾಧನಗಳು

(6-9-64)

ಪ್ರಾಣಗಳೊಳಗೆ ಇರುವ ವಿಜ್ಞಾನಮಯನೇ ನಿಜವಾಗಿ ಹೃದಯದೊಳಗೆ ಇರುವ ಜ್ಯೋತಿಯು ಅವನು ಶರೀರೇಂದ್ರಿಯಗಳಿಗಾಗಲಿ , ಅಂತಃಕರಣಕ್ಕಾಗಲಿ ಸೇರಿಕೊಂಡಿಲ್ಲ . ಎಚ್ಚರದಲ್ಲಿ ಶರೀರೇಂದ್ರಿಯಗಳಿಗೆ ಸಂಬಂಧಪಟ್ಟವನೆಂದೂ ಸ್ವಪ್ನದಲ್ಲಿ

ಅವುಗಳನ್ನು ಮೀರಿರುವನೆಂದೂ ಹೇಳಿರುವದು ಜಾಗ್ರದೃಷ್ಟಿಯಿಂದ. ನಿಜವಾಗಿ ಜಾಗ್ರದವಸ್ಥೆಯೂ ಸ್ವಪ್ನದಂತೆಯೇ ಇದೆ. ಎಚ್ಚರದಲ್ಲಿಕೂಡ ನಾವು ಸಶರೀರರಾಗಿರುವೆವೆಂಬುದು ಅಜ್ಞಾನದ ನಿಮಿತ್ತದಿಂದ. 'ಮಿಥ್ಯಾಪ್ರತ್ಯಯನಿಮಿತ್ತತ್ವಾತ್ ಸಶರೀರತ್ವಸ್ಯ ಸಿದ್ಧಂ ಜೀವತೋಽಪಿ ವಿದುಷೋಽಶರೀರತ್ವಮ್' ಶರೀರವು ನಮಗೆ ಇದೆ ಎಂಬುದು ತಪ್ಪುತಿಳಿವಳಿಕೆಯ ನಿಮಿತ್ತದಿಂದಾಗಿರುವದರಿಂದ ತತ್ತ್ವವನ್ನು ಸರಿಯಾಗಿ ತಿಳಿದುಕೊಂಡವನು ಬದುಕಿರುವಾಗಲೇ ಅಶರೀರನಾಗಿರುತ್ತಾನೆ – ಎಂದು ಭಾಷ್ಯಕಾರರು ಬರೆದಿರುತ್ತಾರೆ. 'ಅವನು ಒಳಗುಹೊರಗುಗಳಿಲ್ಲದ ಅಜನಾಗಿರುತ್ತಾನೆ' (ಮುಂ.), ಸರ್ವಾವಸ್ಥೆಗಳನ್ನೂ ಮೀರಿದ 'ಆತ್ಮನೇ ಅವನು, ಅವನನ್ನೇ ಅರಿತುಕೊಳ್ಳಬೇಕು' (ಮಾಂ), ಆತನನ್ನು ಚಕ್ಷುರಿಂದ್ರಿಯವೇ ಮುಂತಾದವುಗಳಿಂದ ಅರಿತುಕೊಳ್ಳಲಾಗುವದಿಲ್ಲ; ಅವನನ್ನು ಅನುಭವದಿಂದಲೇ ಅರಿತುಕೊಳ್ಳಬೇಕು – ಎಂಬುದು ಈವರೆಗಿನ ವಿಚಾರದಿಂದ ಏರ್ಪಟ್ಟಿರುವ ನಿರ್ಣಯ.

ಆದರೆ ಯಾವ ಮುಮುಕ್ಷುಗಳಿಗೆ ಈ ಸಿದ್ಧಾಂತವನ್ನು ಮನಗಾಣುವ ಸಿದ್ಧತೆ ಇನ್ನೂ ಆಗಿಲ್ಲವೋ ಅಂಥ ಮುಮುಕ್ಷುಗಳಿಗೆ ಈ ವೇದಾಂತಬೋಧನೆಯನ್ನು ಅರಿತುಕೊಳ್ಳುವದಕ್ಕೆ ಸಾಧನಗಳು ಬೇಕು. ಅವರಿಗೆ ಶ್ರುತಿಯಲ್ಲಿಯೂ ಸ್ಮೃತಿಗಳಲ್ಲಿಯೂ ಕೆಲವು ಸಾಧನಗಳನ್ನು ಮೆಟ್ಟಿಲುಮೆಟ್ಟಿಲಾಗಿ ಬೋಧಿಸಿರುತ್ತದೆ.

**(೧) ತಮೇತಂ ವೇದಾನುವಚನೇನ ಬ್ರಾಹ್ಮಣಾ ವಿವಿದಿಷನ್ತಿ ಯಜ್ಞೇನ ದಾನೇನ ತಪಸಾಽನಾಶಕೇನ॥** ಬೃ. ೪-೪-೨೨.

**ಯಜ್ಞೋ ದಾನಂ ತಪಶ್ಚೈವ ಪಾವನಾನಿ ಮನೀಷಿಣಾಮ್ ॥** ಗೀ. ೧೮-೫.

**ಏತಾನ್ಯಪಿ ತು ಕರ್ಮಾಣಿ ಸಙ್ಗಂ ತ್ಯಕ್ತ್ವಾ ಫಲಾನಿ ಚ।**
**ಕರ್ತವ್ಯಾನೀತಿ ಮೇ ಪಾರ್ಥ ನಿಶ್ಚಿತಂ ಮತಮುತ್ತಮಮ್॥** ಗೀ. ೧೮-೬.

**ಯತಃ ಪ್ರವೃತ್ತಿರ್ಭೂತಾನಾಂ ಯೇನ ಸರ್ವಮಿದಂ ತತಮ್।**
**ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿನ್ದತಿ ಮಾನವಃ॥** ಗೀ. ೧೮-೪೬.

ಶಾಸ್ತ್ರೋಕ್ತವಾದ ಯಜ್ಞಗಳನ್ನೂ ದಾನವನ್ನೂ ತಪಸ್ಸನ್ನೂ ಮಾಡಿದರೆ ಆತ್ಮನನ್ನು ವಿಚಾರಮಾಡಿ ಅರಿತುಕೊಳ್ಳುವದಕ್ಕೆ ಯೋಗ್ಯತೆ ಬರುತ್ತದೆ – ಎಂದು ಶ್ರುತಿ ಹೇಳಿರುತ್ತದೆ. ಈ ಕರ್ಮಗಳನ್ನು ಸಂಗವನ್ನೂ ಫಲವನ್ನೂ ಬಿಟ್ಟು ಮಾಡಬೇಕು ; ಅವನವನಿಗೆ ಶಾಸ್ತ್ರದಲ್ಲಿ ವಿಧಿಸಿರುವ ಕರ್ಮಗಳನ್ನು ಭಗವಂತನ ಅರ್ಚನೆ ಎಂಬ ಬುದ್ಧಿಯಿಂದ ಮಾಡಿದರೆ ಚಿತ್ತಶುದ್ಧಿಯಾಗಿ ಜಿಜ್ಞಾಸೆಯನ್ನು ಮಾಡಿ ಅರಿತುಕೊಳ್ಳುವ

ಯೋಗ್ಯತೆ ದೊರಕುತ್ತದೆ - ಎಂದು ಭಗವದ್ಗೀತೆಯಲ್ಲಿಯೂ ಹೇಳಿರುತ್ತದೆ. ಕರ್ಮದಿಂದ ನೇರಾಗಿ ಆತ್ಮಪ್ರಾಪ್ತಿಯಾಗುವದಿಲ್ಲವಾದ್ದರಿಂದ ಅವುಗಳನ್ನು ಮಾಡದೆ ಇದ್ದರೆ ಪ್ರಾಪ್ತಿಯಾಗುತ್ತದೆ - ಎಂಬ ಅರ್ಥವನ್ನು ಮಾಡಿಕೊಳ್ಳುವ ವ್ಯಾಖ್ಯಾನ ಧುರೀಣರು ಈ ವಾಕ್ಯಗಳನ್ನು ಚೆನ್ನಾಗಿ ಮನನಮಾಡಬೇಕು. ಕರ್ಮಗಳನ್ನು ಮಾಡುವದರಿಂದಲೇ ಮನಸ್ಸು ಜ್ಞಾನಕ್ಕೆ ಸಜ್ಜಾಗುತ್ತದೆಯೇ ಹೊರತು ಬಿಡುವದರಿಂದಲ್ಲ.

ಇನ್ನು ಎರಡನೆಯ ಸಾಧನವೆಂದರೆ, ವೈರಾಗ್ಯ ಮತ್ತು ಗುರೂಪಸತ್ತಿ . ಈ ವಿಷಯಕ್ಕೆ ಶ್ರುತಿಯಲ್ಲಿಯೂ ಗೀತೆಯಲ್ಲಿಯೂ ಇರುವ ವಾಕ್ಯಗಳಿವು :

(೨) **ಏತಮೇವ ಪ್ರವ್ರಾಜಿನೋ ಲೋಕಮಿಚ್ಛನ್ತಃ ಪ್ರವ್ರಜನ್ತಿ ॥**

ಬೃ. ೪-೪-೨೨

**ಪರೀಕ್ಷ್ಯ ಲೋಕಾನ್ ಕರ್ಮಚಿತಾನ್ ಬ್ರಾಹ್ಮಣೋ ನಿರ್ವೇದ ಮಾಯಾನ್ನಾಸ್ತ್ಯಕೃತಃ ಕೃತೇನ । ತದ್ವಿಜ್ಞಾನಾರ್ಥಂ ಸ ಗುರುಮೇವಾಭಿ ಗಚ್ಛೇತ್ ಸಮಿತ್ಪಾಣಿಃ ಶ್ರೋತ್ರಿಯಂ ಬ್ರಹ್ಮನಿಷ್ಠಮ್ ॥** ಮುಂ. ೧-೨-೧೨

**ಅನಿಷ್ಟಮಿಷ್ಟಂ ಮಿಶ್ರಂ ಚ ತ್ರಿವಿಧಂ ಕರ್ಮಣಃ ಫಲಮ್ ।**
**ಭವತ್ಯತ್ಯಾಗಿನಾಂ ಪ್ರೇತ್ಯ ನ ತು ಸಂನ್ಯಾಸಿನಾಂ ಕ್ವಚಿತ್ ॥** ಗೀ. ೧೮-೧೨.

**ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ ।**
**ಉಪದೇಕ್ಷ್ಯನ್ತಿ ತೇ ಜ್ಞಾನಂ ಜ್ಞಾನಿನಸ್ತತ್ತ್ವದರ್ಶಿನಃ ॥** ಗೀ. ೪-೩೪.

ಕರ್ಮವನ್ನು ಚೆನ್ನಾಗಿ ಮಾಡಿ ಚಿತ್ತಶುದ್ಧಿಯನ್ನು ಸಂಪಾದಿಸಿಕೊಂಡ ಬಳಿಕ ಕರ್ಮಾನುಷ್ಠಾನವನ್ನು ಬಿಟ್ಟು ಕರ್ಮಫಲವೆಲ್ಲವೂ ಅನಿತ್ಯವೆಂಬ ನಿಶ್ಚಯವನ್ನು ಹೊಂದಿ ವೈರಾಗ್ಯದಿಂದ ಗುರುವನ್ನಾಶ್ರಯಿಸಬೇಕು. ವೈರಾಗ್ಯವೆಂದರೆ ವಿಷಯಗಳಲ್ಲಿ ವೈರವನ್ನು ಸಂಪಾದಿಸಿಕೊಳ್ಳುವದಲ್ಲ . ವಿಷಯಗಳು ಎದುರಿಗೆ ಬಂದಾಗ ಅಥವಾ ಅವುಗಳ ವಿಷಯವಾದ ಮಾತನ್ನು ಕೇಳಿದಾಗ ಅವುಗಳ ಗುಣಗಳನ್ನು ಸಂಕಲ್ಪಿಸಿಕೊಳ್ಳುತ್ತಾ ಚಿತ್ತವನ್ನು ರಂಗುರಂಗಾಗಿ ಮಾಡಿಕೊಳ್ಳುವದೇ 'ರಾಗವು' ; ಇದು ಜನರಿಗೆ ಸ್ವಭಾವದಿಂದಲೇ ಆಗುತ್ತಿರುತ್ತದೆ. ವಿಷಯದ ಅನಿತ್ಯತ್ವ , ಇಂದ್ರಿಯಗಳ ತೇಜಸ್ಸನ್ನು ಹರಣಮಾಡುವ ಸ್ವಭಾವ , ನಾಶದಿಂದ ದುಃಖಕ್ಕೆ ಕಾರಣವಾಗಿರುವದು - ಮುಂತಾದ ದೋಷಗಳು ಮನದಟ್ಟಾದಹಾಗೆಲ್ಲ ಹೀಗೆ ರಂಗಾಗುವದು ಕಡಿಮೆಯಾಗುತ್ತಾ ಬರುತ್ತದೆ. ಆಗ ವಿಷಯಗಳಲ್ಲಿ ಉಂಟಾಗುವ ಅಸಾರಬುದ್ಧಿಯೇ ವೈರಾಗ್ಯವು.

ನಿತ್ಯಶುದ್ಧಬುದ್ಧಮುಕ್ತಸ್ವಭಾವವುಳ್ಳ ಪರಮಾರ್ಥವೊಂದಿದೆ, ಅದರ ಜ್ಞಾನದಿಂದ ನಿತ್ಯಾನಂದವು ದೊರಕುತ್ತದೆ - ಎಂಬ ಶ್ರದ್ಧೆಯು ಶಾಸ್ತ್ರಶ್ರವಣದಿಂದಲೂ ಸತ್ಸಹವಾಸ ದಿಂದಲೂ ತಿಳಿಯಬರಲಾಗಿ ಅದನ್ನು ಬಲ್ಲವರಿಂದ ಅರಿತುಕೊಳ್ಳಬೇಕೆಂಬ ಹಂಬಲಿಕೆಯೂ ಉಂಟಾಗುವವು. ಆಗ ವಿಚಾರಮಾಡುವದಕ್ಕೆ ಯೋಗ್ಯತೆ ಬಂದಂತಾಯಿತು.

ಹೇಳುವ ಆಚಾರ್ಯನು ಶಾಸ್ತ್ರಾರ್ಥವನ್ನು ಬಲ್ಲವನೂ ತತ್ತ್ವದರ್ಶಿಯೂ ಆಗಿದ್ದರೆ ಮಾತ್ರ ಅವನ ಉಪದೇಶವು ಕಾರ್ಯಕಾರಿಯಾಗುತ್ತದೆ. ಅವರು ಹೇಳಿಕೊಟ್ಟರೇ ನಮ್ಮ ಅಂತಃಕರಣದಲ್ಲಿ ಉಂಟಾಗಿರುವ ತಪ್ಪು ತಿಳಿವಳಿಕೆಯು ತೊಲಗುತ್ತದೆ , ಇಲ್ಲದಿದ್ದರೆ ಇಲ್ಲ . ಈ ಕಾರಣದಿಂದ ವೈರಾಗ್ಯವನ್ನು ಪಡೆದು ಗುರುಶುಶ್ರೂಷೆಯನ್ನು ಮಾಡುವದಕ್ಕೆ ಸಿದ್ಧರಾಗಬೇಕು. 'ಗುರುವಿನ ಬಳಿಗೇ ನಮ್ರತೆಯಿಂದ ಹೋಗಿ ಕೇಳಬೇಕು ' ಎಂದು ಶ್ರುತಿಸ್ಮೃತಿಗಳಲ್ಲಿ ಹೇಳಿರುವದರ ಅಭಿಪ್ರಾಯವನ್ನು ಭಾಷ್ಯದಲ್ಲಿ ಹೀಗೆಂದು ವಿವರಿಸಿರುತ್ತದೆ :

**ಶಾಸ್ತ್ರಜ್ಞೋಽಪಿ ಸ್ವಾತನ್ತ್ರ್ಯೇಣ ಬ್ರಹ್ಮಜ್ಞಾನಾನ್ವೇಷಣಂ ನ ಕುರ್ಯಾತ್ ಇತ್ಯೇತತ್ ಗುರುಮೇವ - ಇತ್ಯವಧಾರಣಫಲಮ್ ॥**

ಶಾಸ್ತ್ರವನ್ನು ಬಲ್ಲವನಾದರೂ ತಾನೇ ಬ್ರಹ್ಮಜ್ಞಾನವನ್ನು ಹುಡುಕಿ ತಿಳಿದುಕೊಳ್ಳುವೆನೆಂದು ಬಗೆಯಬಾರದು - ಎಂಬುದು 'ಗುರುವಿನ ಬಳಿಗೇ ಹೋಗಬೇಕು' ಎಂದು ಒತ್ತಿಹೇಳಿರುವದರಿಂದ ತಿಳಿಯಬೇಕಾದದ್ದು. ಶಾಸ್ತ್ರಕ್ಕೆ ತನ್ನ ಮೂಗಿನ ನೇರಕ್ಕೇ ನೋಡಿ ಮಾಡಿಕೊಳ್ಳುವ ಅರ್ಥವು ಸರಿಯಾಗಿರುವದೆಂಬ ಭರವಸೆಯೇನೂ ಇರುವದಿಲ್ಲ . ಏಕೆಂದರೆ ಬುದ್ಧಿಪ್ರಧಾನರಾದವರು ಮಾಡಿಕೊಳ್ಳುವ ಶಾಸ್ತ್ರದ ಅರ್ಥಕ್ಕೂ ಅನುಭವಾನುಸಾರವಾಗಿ ಅರಿತುಕೊಳ್ಳಬೇಕಾಗಿರುವ ಅರ್ಥಕ್ಕೂ ಬಹಳ ಹೆಚ್ಚು ಕಡಿಮೆಯಿರುತ್ತದೆ. ಆದ್ದರಿಂದ ತಾನೂ ಬ್ರಹ್ಮನಿಷ್ಠನಾಗಿ ಕರುಣೆಯಿಂದ ತತ್ತ್ವ ದರ್ಶನದ ಮಾರ್ಗವನ್ನು ಉಪದೇಶಿಸುವ ಆಚಾರ್ಯನ ಬಳಿಗೇ ಹೋಗಿ ಸೇವೆಯಿಂದ ಆತನ ಮನಸ್ಸನ್ನು ನಮ್ಮ ಕಡೆಗೆ ಒಲಿಸಿಕೊಂಡೇ ನಿಜವನ್ನು ಅರಿತು ಕೊಳ್ಳಬೇಕು.

ಈ ಸಾಧನವು ಅಳವಟ್ಟಮೇಲೂ ಮಾಡಿಕೊಂಡಿರಬೇಕಾದ ಸಿದ್ಧತೆಯೊಂದಿದೆ.

(೩) **ಶಾಂತೋ ದಾಂತ ಉಪರತಸ್ತಿತಿಕ್ಷುಃ ಸಮಾಹಿತೋ ಭೂತ್ವಾ ಆತ್ಮನ್ಯೇವಾತ್ಮಾನಂ ಪಶ್ಯತಿ ಸರ್ವಮಾತ್ಮಾನಂ ಪಶ್ಯತಿ ॥** ಬೃ. ೪-೪-೨೩.

**ಅಮಾನಿತ್ವಮದಮ್ಭಿತ್ವಮಹಿಂಸಾ ಕ್ಷಾನ್ತಿರಾರ್ಜವಮ್ ।**
**ಆಚಾರ್ಯೋಪಾಸನಂ ಶೌಚಂ ಸ್ಥೈರ್ಯಮಾತ್ಮವಿನಿಗ್ರಹಃ ॥**

(ಎಂಬ ಶ್ಲೋಕದಿಂದ ಹಿಡಿದು)

**ಅಧ್ಯಾತ್ಮಜ್ಞಾನನಿತ್ಯತ್ವಂ ತತ್ತ್ವಜ್ಞಾನಾರ್ಥದರ್ಶನಮ್ ।**
**ಏತಜ್ಜ್ಞಾನಮಿತಿ ಪ್ರೋಕ್ತಮಜ್ಞಾನಂ ಯದತೋಽನ್ಯಥಾ ॥**

(ಎಂಬವರೆಗಿನ ಐದು ಶ್ಲೋಕಗಳು) ಗೀ. ೧೩-೭ರಿಂದ ೧೧

ಎಂದು ಶ್ರುತಿಸ್ಮೃತಿಗಳಲ್ಲಿ ಉಪದೇಶಿಸಿರುವ ಆಧ್ಯಾತ್ಮಕಸಿದ್ಧತೆಯೂ ಅವಶ್ಯವಾಗಿ ಬೇಕು.

ಗುರುಗಳ ಬಳಿಯಲ್ಲಿ ನಮಸ್ಕಾರಾದಿಗಳಿಂದ ಪ್ರಶ್ನೆಮಾಡಿದಮಾತ್ರದಿಂದ ಜ್ಞಾನಕ್ಕೆ ಯೋಗ್ಯತೆ ಬಂದಿತೆಂದು ನಂಬುವದಕ್ಕಾಗುವದಿಲ್ಲ. ಏಕೆಂದರೆ ಆಚಾರ್ಯರು ಹೇಳಿರುವಂತೆ ಈ ನಮಸ್ಕಾರಾದಿಗಳು ಹೊರಗಿನ ಸಾಧನವಾಗಿರುವದರಿಂದ ಬರಿಯ ನಟನೆಗಾಗಿ ಮಾಡಿದವುಗಳಾಗಿಯೂ ಇರಬಹುದು. ಆದರೆ ಶ್ರದ್ಧೆ, ಗುರುಸೇವೆಯೇ ಮುಂತಾದವುಗಳಲ್ಲಿ ತಾತ್ಪರ್ಯ, ಜಿತೇಂದ್ರಿಯತ್ವ - ಇವುಗಳು ಅತ್ಯಂತಅವಶ್ಯ . ಅಮಾನಿತ್ವಾದಿಗಳಿದ್ದರೆ ಜ್ಞಾನವು ದೊರಕುವದೆಂಬುದಕ್ಕೆ ಅವು ಸೂಚಕವಾಗಿರುತ್ತವೆ ; ಹೇಗೆಂದರೆ ಅವು ಇಲ್ಲದಿದ್ದರೆ ಅವಕ್ಕೆ ವಿಪರೀತವಾಗಿರುವ ಅಭಿಮಾನ, ದಂಭ - ಮುಂತಾದವುಗಳಿದ್ದರೆ ಅಜ್ಞಾನವು ದಟ್ಟವಾಗುವದು ನಿಶ್ಚಯ.

ಪ್ರಾಕೃತಜನರು ಇಷ್ಟೆಲ್ಲ ಸಾಧನವೇಕೆಂದು ಬೇಸತ್ತು ಜ್ಞಾನಮಾರ್ಗದಿಂದಲೇ ಹಿಂತಿರುಗುವ ಸಂಭವವೂ ಇದೆ. ಆದರೆ ಜ್ಞಾನವೆಂಬುದು ನಮ್ಮ ತೀರ ಒಳಗಿರುವ ಆತ್ಮನು ವಿಷಯದ್ದು. ಈಗ್ಗೆ ನಮಗೆ ಹೊರಗಿನ ವಿಷಯಗಳಲ್ಲಿಯೇ ಆಸಕ್ತಿ ಇದ್ದುಬಿಟ್ಟಿರುವದರಿಂದ ನಾವು ತಪ್ಪು ಹಾದಿಯನ್ನು ತುಳಿಯುತ್ತಾ ಆತ್ಮನಿಗೆ ಬಲುದೂರ ಬಂದುಬಿಟ್ಟಿರುತ್ತೇವೆ. ಆದ್ದರಿಂದ ಈ ತಪ್ಪುಹಾದಿಯಿಂದ ಹಿಂತಿರುಗುವದೆಂಬ ನಿವೃತ್ತಿಮಾರ್ಗವನ್ನು ಅವಶ್ಯವಾಗಿ ಆಶ್ರಯಿಸಬೇಕಾಗಿದೆ.

ಯಾವನು ಮೇಲೆ ಹೇಳಿದ ಶಮದಮಾದಿಗಳನ್ನು ಅಳವಡಿಸಿಕೊಂಡಿರುತ್ತಾನೋ ಅವನ ಮನಸ್ಸು ಒಳಮುಖವಾಗಿರುತ್ತದೆ. ಈಗ ಅವನು ಸಾಧಿಸಿಕೊಳ್ಳಬೇಕಾದ ಕರ್ತವ್ಯವೊಂದಿದೆ :

**(೪) ಯಚ್ಛೇದ್ ವಾಙ್ಮನಸೀ ಪ್ರಾಜ್ಞಃ ತದ್ಯಚ್ಛೇತ್ ಜ್ಞಾನ ಆತ್ಮನಿ ।**
**ಜ್ಞಾನಮಾತ್ಮನಿ ಮಹತಿ ನಿಯಚ್ಛೇತ್ ತದ್ಯಚ್ಛೇಚ್ಛಾಂತ ಆತ್ಮನಿ ॥**

ಕಾ. ೧-೨-೧೩

ಬುದ್ಧ್ಯಾ ವಿಶುದ್ಧಯಾ ಯುಕ್ತೋ ಧೃತ್ಯಾಽಽತ್ಮಾನಂ ನಿಯಮ್ಯ ಚ।
ಶಬ್ದಾದೀನ್ ವಿಷಯಾಂಸ್ತ್ಯಕ್ತ್ವಾ ರಾಗದ್ವೇಷೌ ವ್ಯುದಸ್ಯ ಚ ॥
ವಿವಿಕ್ತಸೇವೀ ಲಘ್ವಾಶೀ ಯತವಾಕ್ಕಾಯಮಾನಸಃ।
ಧ್ಯಾನಯೋಗಪರೋ ನಿತ್ಯಂ ವೈರಾಗ್ಯಂ ಸಮುಪಾಶ್ರಿತಃ॥
ಅಹಙ್ಕಾರಂ ಬಲಂ ದರ್ಪಂ ಕಾಮಂ ಕ್ರೋಧಂ ಪರಿಗ್ರಹಮ್।
ವಿಮುಚ್ಯ ನಿರ್ಮಮಃ ಶಾನ್ತೋ ಬ್ರಹ್ಮಭೂಯಾಯ ಕಲ್ಪತೇ॥
ಗೀ. ೧೮-೫೧ರಿಂದ ೫೩

ಶನೈಃ ಶನೈರುಪರಮೇದ್ಬುದ್ಧ್ಯಾ ಧೃತಿಗೃಹೀತಯಾ।
ಆತ್ಮಸಂಸ್ಥಂ ಮನಃ ಕೃತ್ವಾ ನ ಕಿಞ್ಚಿದಪಿ ಚಿನ್ತಯೇತ್ ॥ ಗೀ. ೬-೨೫.

ಇದಕ್ಕೆ ಅಧ್ಯಾತ್ಮಯೋಗವೆಂದು ಹೆಸರು. ಇಂದ್ರಿಯಗಳನ್ನು ಸುಮ್ಮನೆ ಹಿಂದಕ್ಕೆ ಸರಿಯಿಸಿಕೊಂಡರೆ ಸಾಲದು. ಅದು ಆಗಲೂ ಯಾವದಾದರೊಂದು ವಿಷಯವನ್ನು ಚಿಂತಿಸುತ್ತಲೇಇರುತ್ತದೆ. ಹೀಗೆ ನಟನೆಯ ಧ್ಯಾನವನ್ನು ಮಾಡುವವನು ಮಿಥ್ಯಾಚಾರ ದವನೆನಿಸುತ್ತಾನೆ. ವಿಷಯಗಳನ್ನು ಸ್ವಲ್ಪವೂ ಚಿಂತಿಸದೆ ರಾಗದ್ವೇಷಗಳುಂಟಾಗದಂತೆ ಮನಸ್ಸನ್ನು ಸಜ್ಜುಗೊಳಿಸಿಕೊಂಡು ದಿನದಿನವೂ ಬಿಡದೆ ಆತ್ಮನನ್ನೇ ಧ್ಯಾನಿಸುತ್ತಿರಬೇಕು. ವಿವೇಕವೈರಾಗ್ಯಗಳ ಅಭ್ಯಾಸಗಳು ಬಲವಾಗಿದ್ದರೆ ಮನಸ್ಸು ಆತ್ಮನಲ್ಲಿಯೇ ಕರಗಿ ಆತ್ಮನೇ ಆಗಿಬಿಡುತ್ತದೆ. ಇಂದ್ರಿಯಗಳು, ಮನಸ್ಸು, ಬುದ್ಧಿ, ಆತ್ಮ, ಪರಮಾತ್ಮ - ಇವುಗಳು ಹಿಂದುಹಿಂದಿನದು ಮುಂದುಮುಂದಿನದರಲ್ಲಿ ತಾದಾತ್ಮ್ಯವನ್ನು ಹೊಂದುವಷ್ಟು ಮಟ್ಟಿಗೆ ಹಿಂಜರಿದವನು ಕೊನೆಗೆ ಆತ್ಮಾನುಭವದಲ್ಲಿ ಮುಳುಗಿಬಿಡುವನು.

ಈ ನಮ್ಮ ವಿಜ್ಞಾನಮಯಾತ್ಮನು ವಿಜ್ಞಾನವೆಂಬ ಉಪಾಧಿಯಿಂದ ಪರಿಚ್ಛಿನ್ನ ನಾಗಿರುತ್ತಾನೆ. ಆದರೆ ಆ ಉಪಾಧಿಯನ್ನು ಲಯಗೊಳಿಸಿಕೊಂಡೆವೆಂದರೆ, ಆ ಆತ್ಮಸ್ವರೂಪವನ್ನೇ ಚಿಂತಿಸುತ್ತಾ ಆತ್ಮನಲ್ಲಿಯೇ ಏಕಾಗ್ರತೆಯನ್ನು ತಾತ್ಪರ್ಯದಿಂದ ಮಾಡುತ್ತಿದ್ದರೆ, 'ನನ್ನ ಆತ್ಮ', 'ನಿನ್ನ ಆತ್ಮ' - ಎಂಬ ಪರಿಚ್ಛಿನ್ನಭಾವವು ಅಡಗಿಹೋಗಿ ಎಲ್ಲೆಲ್ಲಿಯೂ ಎಲ್ಲರಿಗೂ ಆತ್ಮನಾಗಿರುವ ಪರಮಾತ್ಮಸ್ವರೂಪವೇ ನಮ್ಮದು. 'ಅಭಯ ಬ್ರಹ್ಮವೇ ನಾನು' ಎಂಬ ತತ್ತ್ವವು ಅನುಭವಕ್ಕೆ ಬರುವದು. ಇದೇ ಅಧ್ಯಾತ್ಮವಿದ್ಯೆಯ ಕೊನೆಯ ಮಜಲು.

# ೨೧. ಭಾವನಾಪ್ರಧಾನವಾದ ಅಧ್ಯಾತ್ಮವಿದ್ಯೆ

(11-9-64)

ಅಧ್ಯಾತ್ಮವಿದ್ಯೆಯು ಪರಮಾರ್ಥದೃಷ್ಟಿಯಿಂದ ಒಂದೇ ಆದರೂ ಅದನ್ನು ಮುಟ್ಟುವ ದಾರಿಗಳು ಹಲವು ಇರುತ್ತವೆ. ಅಧಿಕಾರಿಗಳ ಬುದ್ಧಿಯು ಯಾವಯಾವ ಮಟ್ಟದಲ್ಲಿರುತ್ತದೆಯೋ, ಆಯಾ ಮಟ್ಟದಿಂದ ಅವರನ್ನು ಮೇಲಕ್ಕೆ ಒಯ್ಯಬೇಕಾಗುತ್ತದೆ. ಶ್ರುತಿಸ್ಮೃತಿಪುರಾಣಗಳು - ಈ ಅಧಿಕಾರಭೇದವನ್ನು ಅನುಸರಿಸಿ ಬೇರೆಬೇರೆಯ ಪ್ರಕಾರದ ಸಾಧನಗಳನ್ನು ಉಪದೇಶಿಸುತ್ತವೆ. ಈ ದೃಷ್ಟಿಯಿಂದ ನೋಡಿದಾಗ ಶ್ರುತಿಯಲ್ಲಿಯೇ ಎರಡು ಬಗೆಯ ಅಧ್ಯಾತ್ಮವಿದ್ಯೆಗಳಿವೆ. ಈವರೆಗೆ ನಾವು ಹೇಳಿದ್ದು ಜ್ಞಾನಪ್ರಧಾನವಾದ ಅಧ್ಯಾತ್ಮವಿದ್ಯೆ. ಈಗ ಭಾವನಾಪ್ರಧಾನವಾದ ವಿದ್ಯೆಯನ್ನು ಪ್ರಾರಂಭಿಸಬೇಕಾಗಿದೆ.

ಅಂತಃಕರಣದಲ್ಲಿ ವಿಚಾರಶಕ್ತಿಯಿರುವಂತೆಯೇ ಭಾವನಾಶಕ್ತಿಯೂ ಇರುತ್ತದೆ. ವಿಚಾರದಿಂದ ಜ್ಞಾನವುಂಟಾಗುತ್ತದೆ ; ಭಾವನೆಯಿಂದ ನಮ್ಮ ವ್ಯವಹಾರಕ್ಕೆ ಪುಷ್ಟಿ ಬರುತ್ತದೆ. ಎರಡಕ್ಕೂ ಶ್ರದ್ಧೆ ಬೇಕು. 'ಹೀಗೆ ವಿಚಾರಮಾಡುತ್ತಿದ್ದರೆ ತತ್ತ್ವವು ಹೊಳೆಯುವದು' ಎಂಬ ಶ್ರದ್ಧೆಯೊಂದು ಬಗೆ ; 'ಈ ನಂಬಿಕೆಯಿಂದ ನಾನು ವರ್ತಿಸಿದರೆ ಕೊನೆಗೆ ಗುರಿಯನ್ನು ಮುಟ್ಟಿಯೇ ಮುಟ್ಟುವೆನು' ಎಂಬುದು ಇನ್ನೊಂದು ಬಗೆ. ಈ ಎರಡನೆಯ ಬಗೆಯ ಶ್ರದ್ಧೆಯು ವ್ಯವಹಾರದಲ್ಲಿ ಜನರಿಗೆ ಸ್ವಭಾವದಿಂದಲೇ ಇರುತ್ತದೆ. ನೆಲವು ಗಟ್ಟಿಯಾಗಿದೆ ಎಂಬ ವಿಶ್ವಾಸದಿಂದಲೇ ನಾವು ಧೈರ್ಯದಿಂದ ನಡೆಯುತ್ತಿರುವೆವು ; ಒಂದೊಂದು ವೇಳೆ ಅದು ಕುಸಿದುಹೋಗಬಹುದಾದರೂ ಅದು ಸಾಮಾನ್ಯನಿಯಮಕ್ಕೆ ಪ್ರತಿಷೇಧವೆಂದೇ ಜನರು ಬಗೆಯುತ್ತಾರೆ. ಜೀವನದಲ್ಲಿ ವೃತ್ತಿಗಳನ್ನು ಅವಲಂಬಿಸುವದು, ವ್ಯಾಪಾರಾದಲ್ಲಿ ಬಂಡವಾಳವನ್ನು ತೊಡಗಿಸಿ ಮುನ್ನುಗ್ಗುವದು, ಕೊಳ್ಳುವದು, ಮಾರುವದು, ಒಬ್ಬರ ಸಹಾಯವನ್ನು ಅವಲಂಬಿಸಿ ಯಾವದಾದರೊಂದು ಉದ್ಯಮವನ್ನು ಮಾಡುವದು - ಇಂಥ ಕೆಲಸಗಳೆಲ್ಲ ವಿಶ್ವಾಸದ ಆಧಾರದಮೇಲೆಯೇ ನಡೆಯುತ್ತಿರುವವು. ಜನರು ಬಹುಜನರ ಹಾದಿಯನ್ನು ಅನುಸರಿಸಿ ನಡೆದರೆ ವ್ಯವಹಾರದಲ್ಲಿ ಜಯಶೀಲರಾಗುವೆವೆಂದೂ ನಂಬಿ ಶ್ರದ್ಧೆಯಿಂದಲೇ ಮುನ್ನಡೆಯುತ್ತಿರುವರು.

ಮನುಷ್ಯನಿಗೆ '**ಭಾವನೆ**'ಯು ಸಹಜವಾಗಿರುತ್ತದೆ. ವಿಚಾರಶಕ್ತಿಯು ಬೆಳೆದುಕೊಂಡಿರಲಿ, ಬೆಳೆದುಕೊಳ್ಳದೆ ಇರಲಿ, ಬಹುಜನರು ಭಾವನಾಪ್ರಧಾನರಾಗಿಯೇ

ಇರುತ್ತಾರೆ. ಜನರ ಅಂತಃಕರಣದಲ್ಲಿ ಯಾವದಾದರೊಂದು ಭಾವನೆಯು ತಲೆದೋರಿದರೆ ಮತ್ತೊಂದು ಬಲವಾದ ಭಾವನೆಯು ಅದನ್ನು ಒತ್ತಲಿಸಿದ ಹೊರತು ಅದು ನಿಲ್ಲುವದಿಲ್ಲ, ಸಾಗುತ್ತಲೇ ಇರುವದು. ಮನುಷ್ಯನಿಗೆ ಯಾವದಾದರೊಂದು ವಸ್ತುವಿನ ಕಾಮವುಂಟಾದರೆ, ಆ ಕಾಮವು ಅವನನ್ನು ಮುಂದಕ್ಕೆ ದೂಡುತ್ತಲೇ ಇರುತ್ತದೆ. ಸಿಟ್ಟು ಬಂದರೆ ಅದು ಇಳಿಯುವದಕ್ಕೆ ಎಷ್ಟೋ ಹೊತ್ತಾಗುವದು. ಶೋಕವು ಬಂದರೂ ಹಾಗೆಯೇ. ಯಾವದಾದರೊಂದು ಫಲವು ಇಷ್ಟರಲ್ಲಿಯೇ ತನಗೆ ದೊರಕುವದೆಂಬ ನಿರೀಕ್ಷಣೆಯಿದ್ದರೆ ಅದೊಂದೇ ಅಂತಃಕರಣವನ್ನು ಆವರಿಸಿಕೊಂಡು ಬಿಟ್ಟಿರುತ್ತದೆ. 'ಶ್ರದ್ಧಾಮಯೋಽಯಂ ಪುರುಷೋ ಯೋ ಯಚ್ಛ್ರದ್ಧಃ ಸ ಏವ ಸಃ ॥ (ಗೀ. ೧೭-೩) ಎಂಬಂತೆ 'ಹೀಗೆಹೀಗೆ ಆಗುವದು ಅಥವಾ ಆಗಬೇಕು' ಎಂದು ಮನಸ್ಸಿನಲ್ಲಿ ಭಾವನೆಯಿದ್ದರೆ ಅದರಂತೆಯೇ ಮನುಷ್ಯನು ವರ್ತಿಸುತ್ತಾನೆ. ವಾಣಿಜ್ಯವನ್ನು ಮಾಡುವವನಿಗೆ ಧನದ ಭಾವನೆ, ವಿದ್ಯಾರ್ಥಿಗಳಿಗೆ ಓದುಬರಹದ ಭಾವನೆ, ಲೇಖಕನಿಗೆ ಬರೆಯುವ ವಿಷಯದ ಭಾವನೆ, ಕುಟುಂಬಿಕರಿಗೆ ಯೋಗ ಕ್ಷೇಮದ ಭಾವನೆ, ಕೃಷಿಕನಿಗೆ ಮಳೆಬೆಳೆಗಳ ಭಾವನೆ, ಉದ್ಯೋಗದವರಿಗೆ ತಮ್ಮ ತಮ್ಮ ಗುರಿಯಲ್ಲಿರುವ ಕೆಲಸದ ಮತ್ತು ಗುರಿಯಲ್ಲಿರುವ ಕುಶಲವಿದ್ಯೆಯ ಭಾವನೆ - ಇವುಗಳೇ ಜೀವನದಲ್ಲಿ ಸಾಗುತ್ತಿರುತ್ತವೆ. ಸಂಗೀತಗಾರನ ರಾಗದ ಆಲಾಪದಂತೆ ಭಾವನೆಯು ದೀರ್ಘವಾಗಿರುವದೇ ಮನುಷ್ಯನಸ್ವಭಾವ. ಯಾವನು ಎಂಥ ಭಾವನೆಯನ್ನು ಹೃದಯದಲ್ಲಿ ತುಂಬಿಕೊಂಡಿರುವನೋ ಅವನು ಅಂಥ ಜೀವನವನ್ನೇ ಅವಲಂಬಿಸುತ್ತಿರುತ್ತಾನೆ.

ಆದ್ದರಿಂದ ಶಾಸ್ತ್ರೀಯಭಾವನೆಗೂ ಹೀಗೆಯೇ ಫಲವಾಗುತ್ತದೆ ಎಂದು ನಿಶ್ಚಯಿಸಬಹುದಾಗಿದೆ. ಆದ್ದರಿಂದಲೇ ಶ್ರುತಿಯು ಹೀಗೆನ್ನುತ್ತಿದೆ :

**ಅಥ ಖಲು ಕ್ರತುಮಯಃ ಪುರುಷಃ ಯಥಾಕ್ರತುರಸ್ಮಿನ್ ಲೋಕೇ**
**ಪುರುಷೋ ಭವತಿ ತಥೇತಃ ಪ್ರೇತ್ಯ ಭವತಿ ಸ ಕ್ರತುಂ ಕುರ್ವೀತ ॥**

ಛಾಂ. ೩-೧೪-೧

ಮನುಷ್ಯನು ಭಾವನಾಮಯನಾಗಿರುತ್ತಾನೆ. ಈ ಲೋಕದಲ್ಲಿ ಎಂಥ ಭಾವನಾ ನಿಶ್ಚಯವನ್ನು ಗಟ್ಟಿಗೊಳಿಸಿಕೊಂಡಿರುತ್ತಾನೋ ಅದಕ್ಕೆ ತಕ್ಕಂತೆಯೇ ದೇಹವನ್ನು ಬಿಟ್ಟು ತೆರಳಿದಬಳಿಕ ಫಲವಾಗುವದು. ಆದ್ದರಿಂದ ಶಾಸ್ತ್ರದಲ್ಲಿ ಹೇಳಿರುವಂತೆ ಉಪಾಸನೆಯನ್ನು ಮಾಡುವ ಅಧ್ಯಾತ್ಮವಿದ್ಯೆಯ ಅಭ್ಯಾಸವನ್ನು ಮಾಡಬೇಕು.

ಶಾಸ್ತ್ರದಲ್ಲಿ 'ಉಪಾಸನೆ', 'ಜ್ಞಾನ' - ಎಂಬ ಶಬ್ದಗಳನ್ನು ಈವರೆಗೆ ನಾವು ವಿಮರ್ಶಿಸಿರುವ 'ವಸ್ತುಜ್ಞಾನ' ಎಂಬರ್ಥದಲ್ಲಿಯೂ ಪ್ರಕೃತದಲ್ಲಿ ನಾವು ಪರಿಶೀಲಿಸುವದಕ್ಕೆ ಹೊರಟಿರುವ 'ಭಾವನೆ' ಎಂಬರ್ಥದಲ್ಲಿಯೂ ಶ್ರುತಿಯಲ್ಲಿ ಬಳಸಿರುತ್ತದೆ. ಈ ಶಬ್ದಗಳಿಗೆ ಯಾವ ಸಂದರ್ಭದಲ್ಲಿ ಯಾವ ಅರ್ಥವಿದೆ ಎಂಬುದನ್ನು ನೋಡಿ ಗೊತ್ತುಪಡಿಸಬೇಕಾಗುತ್ತದೆ.

ಶಾಸ್ತ್ರದಲ್ಲಿ ಹೇಳಿರುವ ಧ್ಯಾನವು ಅಥವಾ ಉಪಾಸನೆಯು ಎರಡು ಬಗೆಯಾಗಿರುತ್ತದೆ. ಸೂಕ್ಷ್ಮವಾದ ವಸ್ತುತತ್ತ್ವವನ್ನು ಚಿತ್ತದ ಏಕಾಗ್ರತೆಯಿಂದ ಅರಿತುಕೊಳ್ಳಬೇಕಾಗುತ್ತದೆ; ಲೋಕದಲ್ಲಿ ರತ್ನತತ್ತ್ವಪರೀಕ್ಷೆಗೆ ಮಾಡಬೇಕಾಗಿರುವ ಮನಸ್ಸಿನ ಐಕಾಗ್ರ್ಯವು ಈ ಜಾತಿಯದು. ಹೀಗೆಯೇ ಇಲ್ಲಿಯೇ ಈಗಲೇ ನಮ್ಮ ಆತ್ಮರೂಪದಿಂದ ಇರುವ ಪರಮಾರ್ಥವನ್ನು ಕಂಡುಕೊಳ್ಳುವದಕ್ಕೆ ಮಾಡಬೇಕಾಗಿರುವ 'ಅಧ್ಯಾತ್ಮಯೋಗ'ವೆಂಬ ಧ್ಯಾನವೂ ಸೂಕ್ಷ್ಮವಾಗಿ ಆತ್ಮತತ್ತ್ವವನ್ನು ಕಂಡುಕೊಳ್ಳುವದಕ್ಕಾಗಿರುವದರಿಂದ ಈ ಬಗೆಯ ಧ್ಯಾನವೇ ಆಗಿದೆ. ಇದಕ್ಕೆ ನಿದಿಧ್ಯಾಸನ ಎಂಬ ಹೆಸರನ್ನು ಶಾಸ್ತ್ರದಲ್ಲಿ ಕೊಟ್ಟಿದೆ. ನಿದಿಧ್ಯಾಸನವನ್ನು 'ಉಪಾಸನೇ' ಎಂದೂ ಕರೆದಿರುವದು ಸೂತ್ರಭಾಷ್ಯದಲ್ಲಿ (ಸೂ.ಭಾ. ೪-೧-೧, ೪-೧-೧೨) ಕಂಡುಬರುತ್ತದೆ. ಇದು ಒಂದು ಬಗೆಯ ಧ್ಯಾನ. ಇನ್ನು ಮನಸ್ಸಿನಲ್ಲಿ ಶಾಸ್ತ್ರೋಕ್ತವಾದ ವಿಷಯವನ್ನು ಹಾಗೆಯೇ ಕಲ್ಪನೆ ಮಾಡಿಕೊಂಡು ಭಾವಿಸುತ್ತಾಹೋಗುವ ಧ್ಯಾನವೂ ಒಂದಿದೆ. ಅದೇ ಪ್ರಕೃತವಾದ ಉಪಾಸನೆ.

ಉಪಾಸನೆಗಳಲ್ಲಿ ಕೆಲವು ಕರ್ಮಕ್ಕೆ ಅಂಗವಾಗಿ ಹೇಳಿದವುಗಳಾಗಿರುತ್ತವೆ. ಅವುಗಳನ್ನು ಮಾಡುವದರಿಂದ ಕರ್ಮವು ವೀರ್ಯವತ್ತರವಾಗಿ ಸಮೃದ್ಧಫಲವು ದೊರಕುತ್ತದೆ. ಇನ್ನು ಕೆಲವು ನಮಗೆ ಬೇಕಾದ ಕೆಲವುಕಾಮಗಳನ್ನು ನೆರವೇರಿಸಿ ಕೊಡುವವುಗಳು; ಇಂಥಿಂಥ ಫಲವು ಸಿದ್ಧಿಸಬೇಕಾದರೆ ಇಂಥಿಂಥ ಉಪಾಸನೆಯನ್ನು ಮಾಡಬೇಕೆಂಬ ನಿಯಮವಿರುತ್ತದೆ. ಆಯಾ ಕಾಮಗಳ ಅಭಿಲಾಷೆಯಿರುವವರು ಶಾಸ್ತ್ರಾಚಾರ್ಯರುಗಳ ಉಪದೇಶವನ್ನು ಅನುಸರಿಸಿ ಉಪಾಸನೆಯನ್ನು ಮಾಡಬೇಕು. ಕಾಮಗಳು ಹೆಚ್ಚಾಗಿದ್ದವರು ಎರಡುಮೂರು ಕಾಮ್ಯೋಪಾಸನೆಗಳನ್ನು ಮಾಡಬಹುದೆಂಬುದು ಸ್ಪಷ್ಟವಾಗಿದೆ. ಈಗಿನ ಕಾಲಕ್ಕೆ ವೈದಿಕೋಪಾಸನೆಗಳನ್ನು ಮಾಡುವವರು ಬಹಳಕಡಿಮೆಯ ಸಂಖ್ಯೆಯವರು; ಇಲ್ಲವೇಇಲ್ಲವೆಂದೂ ಹೇಳಬಹುದಾದಷ್ಟು ವಿರಳರಾಗಿ ಈ ಉಪಾಸನೆಗಳನ್ನು ಮಾಡುವ ಜನ ಅಲ್ಲಲ್ಲಿ ದೊರಕಬಹುದು. ಸರಿಯಾದ ಮಾರ್ಗದಲ್ಲಿ ಮಾಡಿದ ಧ್ಯಾನಕ್ಕೆ ಫಲವು ಆಗಿಯೇ ತೀರುವದೆಂದು

ಶ್ರದ್ಧಾವಂತರು ನಂಬಿ ಮಾಡಬೇಕಾದ ಉಪಾಸನೆಗಳಿವು ; ಅಂಥ ಫಲಗಳನ್ನು ಇಲ್ಲಿಯೇ ಕಾಣಬಹುದಾಗಿರುವದರಿಂದ ಇವು ಶ್ರದ್ಧಾಯುಕ್ತರಾಗಿ ಮಾಡಿ ಮನಗಾಣತಕ್ಕದ್ದಾಗಿರುತ್ತವೆ.

ಈ ಉಪಾಸನೆಗಳನ್ನು ಜ್ಞಾನಕಾಂಡದಲ್ಲಿ ಏಕೆ ಹೇಳಿದೆ ? - ಎಂದರೆ ಆಚಾರ್ಯರು ಇದಕ್ಕೆ ಈ ಉತ್ತರವನ್ನು ಕೊಟ್ಟಿರುತ್ತಾರೆ.

**'ರಹಸ್ಯಸಾಮಾನ್ಯಾತ್ ಮನೋವೃತ್ತಿ ಸಾಮಾನ್ಯಾಚ್ಚ । ಯಥಾ ಅದ್ವೈತಜ್ಞಾನಂ ಮನೋವೃತ್ತಿಮಾತ್ರಮ್, ತಥಾ ಅನ್ಯಾನ್ಯಪಿ ಉಪಾಸನಾನಿ ಮನೋವೃತ್ತಿರೂಪಾಣಿ ಇತ್ಯಸ್ತಿ ಹಿ ಸಾಮಾನ್ಯಮ್ ॥'**

ಜ್ಞಾನವು ರಹಸ್ಯ , ಧ್ಯಾನವು ರಹಸ್ಯ . ರಹಸ್ಯವೆಂದರೆ ಇಂದ್ರಿಯಗಳಿಗೆ ಗೋಚರವಲ್ಲದ್ದರಿಂದ ಲೌಕಿಕಜ್ಞಾನಕ್ಕೆ ವಿಷಯವಲ್ಲದ್ದು , ಶಾಸ್ತ್ರಾಚಾರ್ಯರ ಉಪದೇಶದಿಂದಲೇ ಮನದಟ್ಟುಮಾಡಿಕೊಳ್ಳಬೇಕಾದದ್ದು. ಜ್ಞಾನವೂ ಮನಸ್ಸಿನ ವೃತ್ತಿ, ಧ್ಯಾನವೂ ಮನಸ್ಸಿನ ವೃತ್ತಿ . ವೃತ್ತಿ ಎಂದರೆ ಮನಸ್ಸಿನಲ್ಲಿ ಆಗುವ ವಿಕಾರವಿಶೇಷ . ಆದ್ದರಿಂದ ಧ್ಯಾನವನ್ನೂ ಈ ಜ್ಞಾನಪ್ರಕರಣದಲ್ಲಿ ಹೇಳಿರುತ್ತದೆ.

ಜ್ಞಾನಕ್ಕೂ ಧ್ಯಾನಕ್ಕೂ ಇರುವ ವಿಶೇಷವೇನೆಂದರೆ :

**ಸ್ವಾಭಾವಿಕಸ್ಯ ಆತ್ಮನಿ ಅಕ್ರಿಯೇ ಅಧ್ಯಾರೋಪಿತಸ್ಯ ಕರ್ತ್ರಾದಿಕಾರಕಕ್ರಿಯಾ ನಿವರ್ತಕಮ್ ಅದ್ವೈತವಿಜ್ಞಾನಮ್, ರಜ್ಜ್ವಾದಾವಿವ ಸರ್ಪಾದ್ಯಧ್ಯಾರೋಪಣಲಕ್ಷಣಸ್ಯ ರಜ್ಜ್ವಾದಿಸ್ವರೂಪನಿಶ್ಚಯಃ ಪ್ರಕಾಶನಿಮಿತ್ತಃ। ಉಪಾಸನಂ ತು ಯಥಾಶಾಸ್ತ್ರ ಸಮರ್ಪಿತಂ ಕಿಞ್ಚಿದಾಲಮ್ಬನಮ್ ಉಪಾದಾಯ ತಸ್ಮಿನ್ ಸಮಾನಚಿತ್ತವೃತ್ತಿಸನ್ತಾನಕರಣಂ ತದ್ವಿಲಕ್ಷಣಪ್ರತ್ಯಯಾನನ್ತರಿತಮ್ ಇತಿ ವಿಶೇಷಃ ॥** ಛಾಂ. ಅವತರಣಿಕೆ.

ಯಾವ ಕ್ರಿಯೆಯೂ ಇಲ್ಲದ ಕೂಟಸ್ಥನಾಗಿರುವ ಆತ್ಮನಲ್ಲಿ ಕರ್ತೃಕರ್ಮಕರಣಾದಿಕಾರಕಗಳನ್ನೂ ಕ್ರಿಯೆಯನ್ನೂ ಅದರ ಫಲವನ್ನೂ - ಹಗ್ಗದಲ್ಲಿ ಹಾವೇ ಮುಂತಾದದ್ದನ್ನು ಭ್ರಾಂತಿಯಿಂದ ಹುಟ್ಟಿಹಾಕಿಕೊಂಡಿರುವಂತೆ - ಅಜ್ಞಾನದಿಂದ ಹುಟ್ಟಿಹಾಕಿಕೊಂಡಿರುತ್ತಾರಷ್ಟೆ? ಇದನ್ನು - ಬೆಳಕಿನ ಸಹಾಯದಿಂದ 'ಇದು ಹಗ್ಗವೇ, ಹಾವಲ್ಲ' ಎಂದು ನಿಶ್ಚಯಿಸುವಂತೆ - ಏತರ ಸಹಾಯದಿಂದ ಆತ್ಮಮಾತ್ರವೆಂದು ನಿಶ್ಚಯಿಸಿಕೊಳ್ಳುತ್ತಾರೋ ಅದೇ ಅದ್ವೈತಜ್ಞಾನವು. ಶಾಸ್ತ್ರದಲ್ಲಿ ಹೇಳಿರುವ ಯಾವದಾದರೊಂದು ವಿಷಯವನ್ನು ತೆಗೆದುಕೊಂಡು ಅದರಲ್ಲಿ ಅದೇ ಚಿತ್ತವೃತ್ತಿಯನ್ನು

ಸಂತತವಾಗಿ ಮಾಡುತ್ತಾ ಅದಕ್ಕಿಂತ ವಿಲಕ್ಷಣವಾದ ಭಾವನೆಯು ಬಾರದಂತೆ ನೋಡಿಕೊಳ್ಳುತ್ತಿರುವದೇ ಉಪಾಸನೆಯು.

ಉಪಾಸನೆಗಳೊಳಗೆ ಕೇವಲ ಬ್ರಹ್ಮಪ್ರಾಪ್ತಿಗಾಗಿಮಾಡುವ ಉಪಾಸನೆಗಳೂ ಇರುತ್ತವೆ. ಬ್ರಹ್ಮವು ನಮ್ಮ ಆತ್ಮನೇ, ಈ ಬ್ರಹ್ಮದಲ್ಲಿ ಇಂಥಿಂಥ ಶಾಸ್ತ್ರೋಕ್ತವಾದ ಗುಣಗಳಿವೆ ಎಂದು ಚಿಂತಿಸುತ್ತಿರುವ ಕೆಲವು ಉಪಾಸನೆಗಳಿವೆ. ಅವುಗಳನ್ನು ಮಾಡಿದವರಿಗೆ ದೇಹಪಾತವಾದ ಬಳಿಕ ಲೋಕಾಂತರದಲ್ಲಿ ಬ್ರಹ್ಮಸ್ವರೂಪಪ್ರಾಪ್ತಿಯಾಗುವದು. ಆಗ ಅವರಿಗೆ ಶಾಸ್ತ್ರದಲ್ಲಿ ಹೇಳಿದಂಥ ಸಿದ್ಧಿಗಳೂ ಉಂಟಾಗುವವು. ಈ ಪ್ರಕಾರದ ಉಪಾಸಕರುಗಳಿಗೆ ಬ್ರಹ್ಮಲೋಕ ವಿರುವವರೆಗೂ – ಆ ಕಲ್ಪವು ಮುಗಿಯುವವರೆಗೂ ವಾಸವಿರುತ್ತದೆ. ಕಲ್ಪಾಂತರದಲ್ಲಿ ಜ್ಞಾನವುಂಟಾದರೆ ಆತ್ಯಂತಿಕ ಮೋಕ್ಷವೇ ಆಗಿಬಿಡುತ್ತದೆ ; ಇಲ್ಲದಿದ್ದರೆ ಮತ್ತೆ ಸಂಸಾರಕ್ಕೆ ಮರಳಿಬರಬೇಕಾಗುತ್ತದೆ.

ಈ ಉಪಾಸನೆಗೆ ಸತ್ತಮೇಲೆಯೇ ಫಲವೆಂದು ತಿಳಿಯಬಾರದು. ಧ್ಯೇಯವಾದ ಬ್ರಹ್ಮದ ಸಾಕ್ಷಾತ್ಕಾರವಾಗಿದ್ದರೆ ಇಲ್ಲಿಯೇ ಆ ಫಲದ ಕುರುಹುಗಳು ಕಂಡು ಬರುತ್ತವೆ. ಉಪಾಸನೆಯು ಅಳವಟ್ಟಿತೆಂಬುದಕ್ಕೆ ಇದೇ ಗುರುತು. 'ದೇವರು ಪೂಜಾರಿಯಮೇಲೆ ಬರುತ್ತಾನೆ, ಅವನು ಮೈದುಂಬುತ್ತಾನೆ ಎಂದು ಹಳ್ಳಿಗರು ಆಡಿಕೊಳ್ಳುವದನ್ನು ನನ್ನ ಬಾಲ್ಯದಲ್ಲಿ ಕೇಳಿದ್ದೆನು, ಆ ಪ್ರಕಾರವನ್ನು ನಿಮ್ಮಲ್ಲಿಯೂ ಕೆಲವರು ನೋಡಿರಬಹುದು, ಅಥವಾ ಕೇಳಿರಬಹುದು. ಅದರಲ್ಲಿ ನಿಜದ ಅಂಶವೇ ಇಲ್ಲವೆಂದು ಭಾವಿಸಕೂಡದು. ದೋಣುಬಾರಿಸುವದು, ತಾಳಹಾಕುವದು, ಹಾಡುವದು – ಮುಂತಾದವುಗಳಿಂದ ಆಯಾ ದೇವರ ಭಾವನೆಯು ಸ್ಪಂದಗಳನ್ನು ಸುತ್ತಲಿನ ವಾತಾವರಣದಲ್ಲಿ ಕಲ್ಪಿಸಲು ಅದೇ ಭಾವನೆಯಿಂದ ಕುಳಿತಿರುವ ಪೂಜಾರಿಗೆ ದೇವರ ಆವೇಶವು ತನ್ನ ಚಿತ್ತದಲ್ಲಿ ಆದಂತೆ ಮನದಟ್ಟಾಗಿಬಿಡುತ್ತದೆ. ಇದರಂತೆ ಉಪಾಸನೆಗಳಲ್ಲಿಯೂ ಎಡೆಬಿಡದೆ ಶಾಸ್ತ್ರೋಕ್ತವಾದ ಪರಮಾತ್ಮರೂಪವನ್ನೇ ಚಿಂತಿಸುತ್ತಿರುವ ಉಪಾಸಕನಿಗೆ ತಾದಾತ್ಮ್ಯಭಾವನೆಯು ಬಂದರೆ ಆಶ್ಚರ್ಯವೇನೂ ಇಲ್ಲ. **'ದೇವೋ ಭೂತ್ವಾ ದೇವಾನಪ್ಯೇತಿ'** (ಬೃ.) ದೇವತೆಗಳನ್ನು ಭಾವನೆಮಾಡಿ ಸಾಕ್ಷಾತ್ಕಾರವನ್ನು ಪಡೆದವನು ಆಯಾ ದೇವತೆಯ ಸಾಯುಜ್ಯವನ್ನೇ ಪಡೆದುಕೊಳ್ಳುತ್ತಾನೆ – ಎಂಬ ಶ್ರುತಿಯ ಅಭಿಪ್ರಾಯವು ಇದೇ. **'ಯಂ ಯಂ ವಾಪಿ ಸ್ಮರನ್ ಭಾವಂ ತ್ಯಜತ್ಯನ್ತೇ ಕಲೇವರಮ್ । ತಂ ತಮೇವೈತಿ ಕೌನ್ತೇಯ ಸದಾ ॥'** (ಗೀ. ೮-೬) ಯಾವನು ಯಾವಯಾವ ಪದಾರ್ಥವನ್ನು

ಯಾವಯಾವ ದೇವತಾ ವಿಶೇಷವನ್ನು - ಸ್ಮರಿಸುತ್ತಾ ದೇಹವನ್ನು ಬಿಡುವನೋ ಅವನು ಆಯಾ ಭಾವವನ್ನೇ ಸೇರಿಬಿಡುತ್ತಾನೆ - ಎಂಬ ಗೀತಾವಾಕ್ಯದಲ್ಲಿ ಈ ತತ್ತ್ವದ ಮರ್ಮವನ್ನು ತಿಳಿಸಿದೆ. ನಮ್ಮನಮ್ಮ ಭಾವದಂತೆ ನಮಗೆ ದೇಹತ್ಯಾಗಾನಂತರದಲ್ಲಿ ಫಲವಾಗುತ್ತದೆ. ಆದ್ದರಿಂದ ಪರಬ್ರಹ್ಮವನ್ನೇ ಭಾವಿಸುತ್ತಾ ದೇಹವನ್ನು ಬಿಟ್ಟವರಿಗೆ ಪರಬ್ರಹ್ಮಸಾಯುಜ್ಯವೇ ಆಗುವದೆಂಬ ವಿಷಯಕ್ಕೆ ಸಂಶಯ ಪಡುವ ಕಾರಣವಿಲ್ಲ.

ಪರಮಾತ್ಮನನ್ನೇ ಅಹಂಗ್ರಹದಿಂದ ಅವನೇ ನಾನೆಂಬ ಭಾವನೆಯಿಂದ ಉಪಾಸನೆಯನ್ನು ಎಡೆಬಿಡದೆ ಮಾಡುವ ಪ್ರಕಾರಗಳಿಗೆ ವಿದ್ಯೆಗಳೆಂದು ಹೆಸರು. ವೈಶ್ವಾನರವಿದ್ಯೆ , ಶಾಂಡಿಲ್ಯವಿದ್ಯೆ , ದಹರವಿದ್ಯೆ - ಮುಂತಾದ ಉಪಾಸನೆಗಳು ಈ ಬಗೆಯವು. ಇವುಗಳಲ್ಲಿ ದಹರೋಪಾಸನೆ ಎಂಬುದು ಒಂದು. ಪರಮಾತ್ಮನು ಎಂಟು ಗುಣಗಳಿಂದ ಕೂಡಿ ಹೃದಯದಲ್ಲಿರುತ್ತಾನೆ , ಅವನಲ್ಲಿ ಸತ್ಯಕಾಮಗಳಿರುತ್ತವೆ. ಯಾರು ಹೊರಗಿನ ಅನೃತವಿಷಯಗಳ ಕಾಮವನ್ನು ತೊಲಗಿಸಿಕೊಂಡು ಆತನನ್ನೇ ನಿತ್ಯವೂ ಚಿಂತಿಸುತ್ತಿರುವರೋ ಅವರಿಗೆ ದೇವಯಾನಮಾರ್ಗದಿಂದ ಬ್ರಹ್ಮಲೋಕಕ್ಕೆ ಹೋಗುವ ಗತಿಯು ಪ್ರಾಪ್ತವಾಗುವದು. ಅಲ್ಲಿ ಅವರು ಸತ್ಯ ಸಂಕಲ್ಪರಾಗಿ ತಮ್ಮ ಇಚ್ಛಾಮಾತ್ರದಿಂದ ಆಯಾ ಕಾಮಗಳನ್ನು ಪಡೆದು ಭೋಗೈಶ್ವರ್ಯವನ್ನು ಅನುಭವಿಸಿ ಜ್ಞಾನದಿಂದ ತಮ್ಮ ಸ್ವರೂಪವಾದ ಬ್ರಹ್ಮದಲ್ಲಿಯೇ ಸೇರಿಹೋಗುತ್ತಾರೆ ಎಂದು ಶ್ರುತಿಯಲ್ಲಿ ವರ್ಣಿಸಿದೆ. ಈ ಉಪಾಸನಾಪ್ರಕಾರವನ್ನು ಇನ್ನಷ್ಟು ಹಿಗ್ಗಿಸಿ ವಿಮರ್ಶೆಮಾಡುವದು ಈಗ ಉಳಿದಿದೆ.

## ೨೨. ವೈದಿಕೋಪಾಸನೆಗಳ ಸ್ವರೂಪ, ದಹರವಿದ್ಯೆ

(12-9-64)

ಜ್ಞಾನ, ಧ್ಯಾನ (ಉಪಾಸನೆ) - ಎಂಬ ಶಬ್ದಗಳನ್ನು ಈಗ ಒಂದೊಂದೇ ಅರ್ಥದಲ್ಲಿ ಪ್ರಯೋಗಿಸುವದು ವಾಡಿಕೆ. ವಿಷಯವನ್ನು ವಿವಿಕ್ತವಾಗಿ ತಿಳಿಯಿಸುವದಕ್ಕೆ ಈ ಪದ್ಧತಿಯು ಅನುಕೂಲವಾಗಿಯೂ ಇರುತ್ತದೆ. ಈ ವಿವೇಚನೆಯನ್ನು ನಿನ್ನೆಯ ...ವೇ ಛಾಂದೋಗ್ಯೋಪನಿಷತ್ತಿನ ಭಾಷ್ಯಾವಚನವನ್ನು ಉದಾಹರಿಸಿ ಸ್ವಲ್ಪಮಟ್ಟಿಗೆ ...ಸಿರುತ್ತೇನೆ. ಈಗ ಸೂತ್ರಭಾಷ್ಯದಿಂದ ಎರಡು ವಚನಗಳನ್ನು ಇದೇ ವಿವೇಚನೆಯ ...ಕರಣಕ್ಕಾಗಿ ಉದಾಹರಿಸುತ್ತೇನೆ.

**(೧) ಧ್ಯಾನಂ ಚಿನ್ತನಂ ಯದ್ಯಪಿ ಮಾನಸಮ್ । ತಥಾಪಿ ಪುರುಷೇಣ ಕರ್ತುಮ್ ಅಕರ್ತುಮ್, ಅನ್ಯಥಾ ವಾ ಕರ್ತುಂ ಶಕ್ಯಮ್ । ಪುರುಷ ತನ್ತ್ರತ್ವಾತ್ ॥** ಸೂ.ಭಾ. ೧-೧-೪

ಧ್ಯಾನವೆಂದರೆ ಚಿಂತನೆಮಾಡುವದು. ಇದು ಮನಸ್ಸಿನಲ್ಲಿ ಆಗುವದೇ ಆಗಿದ್ದರೂ ಜ್ಞಾನಕ್ಕೂ ಇದಕ್ಕೂ ವೈಲಕ್ಷಣ್ಯವುಂಟು. ಹೇಗೆಂದರೆ ಈ ಧ್ಯಾನವನ್ನು ಬೇಕಾದರೆ ಮಾಡಬಹುದು, ಬೇಡವಾದರೆ ಬಿಡಬಹುದು, ಅದಕ್ಕಿಂತ ಬೇರೆಯಾಗಿಯೇ ಮಾಡಬಹುದು. ಏಕೆಂದರೆ ಇದು ತನ್ನ ಇಚ್ಛೆಗೆ ಅನುಗುಣವಾಗಿ ಉಂಟಾಗುವ ಕ್ರಿಯೆಯಾಗಿದೆ - ಎಂಬುದು ವಾಕ್ಯದ ಅಭಿಪ್ರಾಯ . ಇದರಿಂದ ಧ್ಯಾನವೆಂಬುದೊಂದು ಕ್ರಿಯೆ ಎಂದು ಹೇಳಿದಂತೆ ಆಯಿತು. ಶಾಸ್ತ್ರೋಕ್ತವಾದ ಕರ್ಮದಂತೆಯೇ ಇದು ಹೀಗೆ ಮಾಡಬೇಕು ಎಂದು ವಿಹಿತವಾಗಿರುತ್ತದೆ. ಕರ್ಮವು ನಮ್ಮ ಇಚ್ಛೆಗೆ ಅಧೀನವಾಗಿ ಉಂಟಾಗತಕ್ಕದ್ದೆಂಬುದನ್ನು ಆಚಾರ್ಯರು ಮತ್ತೊಂದು ಕಡೆಯಲ್ಲಿ ಹೀಗೆ ಸ್ಪಷ್ಟಪಡಿಸಿಕೊಟ್ಟಿರುತ್ತಾರೆ :

**"ಕರ್ತುಮ್, ಅಕರ್ತುಮ್, ಅನ್ಯಥಾ ವಾ ಕರ್ತುಂ ಶಕ್ಯಂ ಲೌಕಿಕಂ ವೈದಿಕಂ ಚ ಕರ್ಮ । ಯಥಾ ಅಶ್ವೇನ ಗಚ್ಛತಿ, ಪದ್ಭ್ಯಾಮ್ ಅನ್ಯಥಾ ವಾ, ನ ವಾ ಗಚ್ಛತೀತಿ । ತಥಾ ಅತಿರಾತ್ರೇ ಷೋಡಶಿನಂ ಗೃಹ್ಣಾತಿ , ನಾತಿರಾತ್ರೇ ಷೋಡಶಿನಂ ಗೃಹ್ಣಾತಿ , 'ಉದಿತೇ ಜುಹೋತಿ , ಅನುದಿತೇ ಜುಹೋತಿ' ಇತಿ ॥"** ಸೂ.ಭಾ. ೧-೧-೨

ಲೌಕಿಕವಾಗಲಿ ವೈದಿಕವಾಗಲಿ ಕರ್ಮವನ್ನು (ಕೆಲಸವನ್ನು) ಮಾಡುವದಕ್ಕೂ ಬಿಡುವದಕ್ಕೂ ಅಥವಾ ಬೇರೆಯ ಪ್ರಕಾರದಿಂದ ಮಾಡುವದಕ್ಕೂ ಆಗುತ್ತದೆ. ಉದಾಹರಣೆಗೆ ಕುದುರೆಯಮೇಲಾಗಲಿ ಕಾಲುನಡಗೆಯಿಂದಾಗಲಿ ಅಥವಾ ಬೇರೊಂದು ಪ್ರಕಾರದಿಂದ ಹೋಗಬಹುದು ; ಹೋಗದೆಯೇ ಇರಲೂಬಹುದು. ಹೀಗೆಯೇ ಒಂದೊಂದು ಯಾಗದಲ್ಲಿ 'ಷೋಡಶಿ' ಎಂಬ ಬಟ್ಟಲನ್ನು ಬಳಸುವದು ಅಥವಾ ಬಳಸದೆಯಿರುವದು ಈ ಎರಡು ಪ್ರಕಾರವೂ ಉಂಟು ; ಹೋಮವನ್ನು. ಸೂರ್ಯೋದಯವಾದಮೇಲೂ ಮಾಡುವವರಿದ್ದಾರೆ, ಮುಂಚೆಯೇ ಮಾಡು ವವರೂ ಇದಾರೆ - ಈ ಎರಡಕ್ಕೂ ಶಾಸ್ತ್ರವಿಧಿಯಿದೆ - ಎಂಬುದು ಭಾಷ್ಯವಾಕ್ಯದ ಅಭಿಪ್ರಾಯ. ಹೀಗೆ ಇಚ್ಛಾಧೀನವಾಗಿರುವ ಮನಸ್ಸಿನ ಒಂದಾನೊಂದು ಕ್ರಿಯಾ ವಿಶೇಷವನ್ನು ಶಾಸ್ತ್ರದಲ್ಲಿ ವಿಧಿಸಿದ್ದರೆ ಅದನ್ನು ಧ್ಯಾನ, ಉಪಾಸನೆ - ಎಂಬ ಶಬ್ದ ಗಳಿಂದ ಕರೆಯಲಾಗುತದೆ.

[ನಿದಿಧ್ಯಾಸನವೂ ಹೀಗೆಯೇ ಪುರುಷನ ಇಚ್ಛೆಗೆ ಅಧೀನವಾಗಿಯೇ ಇದ್ದರೂ ಆ ಉಪಾಸನೆಯಿಂದ ನೇರಾಗಿ ಆತ್ಮಸ್ವರೂಪದ ಜ್ಞಾನವಾಗುತ್ತದೆ ; ಆದರೆ ಈಗ ನಾವು ವಿಚಾರಕ್ಕೆ ತೆಗೆದುಕೊಂಡಿರುವ ಉಪಾಸನೆಗಳಿಂದ ಕಾಲಾಂತರದಲ್ಲಿಯೇ ಫಲವಾಗುತ್ತದೆ - ಎಂಬ ವಿಶೇಷವಿದೆ. ಇದನ್ನು ಹಿಂದಿನದಿನವೇ ಹೇಳಿದೆ. ಪ್ರಕೃತಕ್ಕೆ ನಿದಿಧ್ಯಾಸನ ರೂಪವಾದ ಉಪಾಸನೆಯನ್ನು ನಾವು ವಿಚಾರಕ್ಕಿಟ್ಟುಕೊಂಡಿಲ್ಲವೆಂಬುದನ್ನು ಮನಸ್ಸಿನಲ್ಲಿಟ್ಟುಕೊಂಡಿರಬೇಕು.]

ಈವರೆಗೆ ಹೇಳಿದ್ದು ಧ್ಯಾನ (ಅಥವಾ ಉಪಾಸನೆಯ) ಲಕ್ಷಣವಾಯಿತು. ಇನ್ನು 'ಜ್ಞಾನ'ದ ಲಕ್ಷಣವು ಹೇಗಿದೆಯೆಂದರೆ :

> (೨) **ಜ್ಞಾನಂ ತು ಪ್ರಮಾಣಜನ್ಯಮ್ । ಪ್ರಮಾಣಂ ಚ ಯಥಾಭೂತವಸ್ತುವಿಷಯಮ್ , ಅತೋ ಜ್ಞಾನಂ ಕರ್ತುಮ್, ಅಕರ್ತುಮ್, ಅನ್ಯಥಾ ವಾ ಕರ್ತುಮ್ ಅಶಕ್ಯಮ್ ಕೇವಲಂ ವಸ್ತುತನ್ತ್ರಮೇವ ತತ್, ನ ಚೋದನಾತನ್ತ್ರಮ್ ನಾಪಿ ಪುರುಷತನ್ತ್ರಮ್ । ತಸ್ಮಾತ್ ಮಾನಸತ್ವೇऽಪಿ ಜ್ಞಾನಸ್ಯ ಮಹದ್ ವೈಲಕ್ಷಣ್ಯಮ್ ॥** ಸೂ.ಭಾ. ೧-೧-೪

ಜ್ಞಾನವಾದರೊ, ಪ್ರಮಾಣದಿಂದ ಉಂಟಾಗತಕ್ಕದ್ದು. ಆ ಪ್ರಮಾಣವೆಂಬುದು ಆಗಲೆ ಸಿದ್ಧವಾಗಿರುವ ವಸ್ತುವಿನ ವಿಷಯದಲ್ಲಿ ವ್ಯಾಪಾರಮಾಡುತ್ತದೆ, ಸಾಧ್ಯವಾಗಿರುವ ಕ್ರಿಯೆಯಲ್ಲಲ್ಲ. ಆದ್ದರಿಂದ ಜ್ಞಾನವು ಕ್ರಿಯೆಯಂತೆ ಮಾಡುವದಕ್ಕೆ, ಬಿಡುವದಕ್ಕೆ ಅಥವಾ ಬೇರೊಂದು ತೆರನಾಗಿಯೇ ಮಾಡುವದಕ್ಕೆ ಆಗಲಾರದು. ಅದು ವಸ್ತುವಿಗಧೀನವಾಗಿಯೇ ಉಂಟಾಗತಕ್ಕದ್ದಾಗಿದೆ ; ಶಾಸ್ತ್ರವಿಧಿಗೆ ಅಧೀನವಾದದ್ದೂ ಅಲ್ಲ, ಪುರುಷನ ಇಚ್ಛೆಗೆ ಅಧೀನವಾದದ್ದೂ ಅಲ್ಲ. ಆದ್ದರಿಂದ ಜ್ಞಾನವೂ ಮಾನಸವೇ ಆಗಿದ್ದರೂ ಧ್ಯಾನಕ್ಕೂ ಜ್ಞಾನಕ್ಕೂ ಬಹಳ ವೈಲಕ್ಷಣ್ಯವಿದೆ - ಎಂಬುದು ವಾಕ್ಯದ ಅಭಿಪ್ರಾಯ. ಇದನ್ನು ವಿಶದೀಕರಿಸುವದಕ್ಕೆ ಆಚಾರ್ಯರು ಒಂದು ಉದಾಹರಣೆಯನ್ನು ಕೊಟ್ಟಿರುತ್ತಾರೆ. ಉಪನಿಷತ್ತಿನಲ್ಲಿ ಬರುವ ಪಂಚಾಗ್ನಿವಿದ್ಯೆ ಎಂಬ ಉಪಾಸನೆಯಲ್ಲಿ 'ಪುರುಷನನ್ನು ಅಗ್ನಿಯೆಂದು ಧ್ಯಾನಿಸಬೇಕು' , 'ಅವನ ಸ್ತ್ರೀಯನ್ನು ಅಗ್ನಿಯೆಂದು ಭಾವಿಸಬೇಕು' ಎಂದುಮುಂತಾಗಿ ಕೆಲವು ಧ್ಯಾನಪ್ರಕಾರಗಳನ್ನು ವಿಧಿಸಿರುತ್ತದೆ. ಇಲ್ಲಿ ಗಂಡಸಾಗಲಿ, ಹೆಂಗಸಾಗಲಿ ಬೆಂಕಿಯಲ್ಲವೆಂಬುದು ಸ್ಪಷ್ಟ. ಶಾಸ್ತ್ರದಲ್ಲಿ ಅವರನ್ನು ಅಗ್ನಿ ಎಂದು ಧ್ಯಾನಿಸಬೇಕೆಂದು ವಿಧಿಸಿದೆಯಾದ್ದರಿಂದ ಹಾಗೆಂದು ಉಪಾಸನೆಯನ್ನು ಮಾಡಬೇಕೆಂಬ ಇಚ್ಛೆಯುಳ್ಳವರು ಹಾಗೆಂದು ಧ್ಯಾನಮಾಡುತ್ತಾರೆ. ಅಷ್ಟೇ. ಆದರೆ ಲೋಕದಲ್ಲಿ ಪ್ರಸಿದ್ಧವಾಗಿರುವ ಬೆಂಕಿಯನ್ನು ಬೆಂಕಿಯೆಂದು ತಿಳಿಯಬೇಕೆಂದು ಶಾಸ್ತ್ರ

ದಲ್ಲಿ ವಿಧಿಸಿರುವದೂ ಇಲ್ಲ , ನಮ್ಮ ಇಚ್ಛೆಗೆ ಅನುಗುಣವಾಗಿ ಕೆಲವರು ಅದನ್ನು ಬೆಂಕಿಯೆಂದೂ ಮತ್ತೆ ಕೆಲವರು ಅದನ್ನು ಕಲ್ಲೆಂದೂ ಅರಿತುಕೊಳ್ಳುವದಕ್ಕೂ ಆಗುವದಿಲ್ಲ. ಅಲ್ಲಿ 'ಬೆಂಕಿ' ಎಂಬ ಅರಿವು ಆಗುವದು ಬೆಂಕಿಯೆಂಬ ಸಿದ್ಧವಸ್ತುವಿಗೂ ಅದನ್ನು ನೋಡುವ ಇಂದ್ರಿಯರೂಪವಾದ ಪ್ರಮಾಣಕ್ಕೆ ಅಧೀನವಾಗಿಯೇ ಎಲ್ಲರಿಗೂ ಉಂಟಾಗಿಬಿಡುತ್ತದೆ. ಅದನ್ನು ಶಾಸ್ತ್ರದಿಂದಾಗಲಿ ಮತ್ತೆ ಯಾರಿಂದಾಗಲಿ ಹಾಗಲ್ಲ ವೆಂದು ಅಲ್ಲಗಳೆಯುವದು ಆಗಲಾರದು.

ವೇದಾಂತದಲ್ಲಿ ಉಕ್ತವಾಗಿರುವ ಜ್ಞಾನಲಕ್ಷಣವಾದ ಅಧ್ಯಾತ್ಮವಿದ್ಯೆಗೂ ಧ್ಯಾನ (ಉಪಾಸನಾ) ರೂಪವಾದ ಅಧ್ಯಾತ್ಮವಿದ್ಯೆಗೂ ಇದೇ ಬಗೆಯ ವೈಲಕ್ಷಣ್ಯವಿದೆ. ಜ್ಞಾನ ಲಕ್ಷಣವಾದ ಅಧ್ಯಾತ್ಮವಿದ್ಯೆಯಲ್ಲಿ ಆತ್ಮವಸ್ತುವನ್ನು ಇದ್ದದ್ದು ಇದ್ದಂತೆ ಅರಿಯ ಬೇಕಾಗಿರುತ್ತದೆ . ಚಕ್ಷುರಾದೀಂದ್ರಿಯಗಳು ಬಾಹ್ಯವಸ್ತುಗಳ ಜ್ಞಾನವುಂಟಾಗುವದಕ್ಕೆ ಪ್ರಮಾಣವಾಗಿರುವಂತೆ, ವೇದಾಂತವಾಕ್ಯವು ಆತ್ಮಜ್ಞಾನವುಂಟಾಗುವದಕ್ಕೆ ಪ್ರಮಾಣ ವಾಗಿದೆ. ಇಂದ್ರಿಯಗಳೇನೂ ಹೊರಗಿನ ವಸ್ತುಗಳನ್ನು ಉಂಟುಮಾಡುವದಿಲ್ಲ , ಇದ್ದದ್ದನ್ನು ಇದ್ದಂತೆ ತಿಳಿಸುತ್ತವೆ. ಅಷ್ಟೇ. ಇದರಂತೆ ವೇದಾಂತವಾಕ್ಯವೂ ಆತ್ಮವಸ್ತುವನ್ನು ಹೊಸದಾಗಿ ಉಂಟುಮಾಡುವದಿಲ್ಲ. ಸ್ವತಃ ಸಿದ್ಧವಾಗಿರುವ ಆತ್ಮವಸ್ತುವನ್ನು ಇದ್ದದ್ದು ಇದ್ದಂತೆ ತಿಳಿಸಿಕೊಡುತ್ತವೆ. ಅಷ್ಟೇ . ಆದರೆ ಒಂದು ವಿಶೇಷ . ಹೊರಗಿನ ವಸ್ತುಗಳು ತಾವೇ ತೋರಿಕೊಳ್ಳಬಲ್ಲ ಸ್ವಭಾವದವುಗಳಲ್ಲ , ಅವುಗಳನ್ನು ಇಂದ್ರಿಯಗಳಿಂದಲೂ ಮನಸ್ಸಿನಿಂದಲೂ ಬೆಳಗಿಸಿಕೊಂಡು ಅರಿಯಬೇಕು. ಆತ್ಮವಸ್ತುವೋ ಎಂದರೆ **'ವಿಜ್ಞಾನಮಯಃ ಪ್ರಾಣೇಷು ಹೃದ್ಯನ್ತರ್ಜ್ಯೋತಿಃ ಪುರುಷಃ** ಎಂಬಂತೆ ಇಂದ್ರಿಯಗಳಿಗಿಂತಲೂ ಮನಸ್ಸಿಗಿಂತಲೂ ವಿಲಕ್ಷಣನಾಗಿ ಮನಸ್ಸಿಗೂ ಒಳಗಡೆ ಇದ್ದು ಸ್ವಯಂಜ್ಯೋತಿಯಾಗಿರುತ್ತಾನೆ ; ತಾನೇ ಚೈತನ್ಯರೂಪದಿಂದ ತೋರಿಕೊಳ್ಳುತ್ತಿರುವದ ಲ್ಲದೆ, ಇಂದ್ರಿಯಗಳನ್ನೂ ಮನಸ್ಸುಗಳನ್ನೂ, ಬೆಳಗಿಸುತ್ತಾ, ಅವುಗಳಿಗೆ ವಿಷಯಗಳನ್ನು ಬೆಳಗಿಸುವ ಯೋಗ್ಯತೆಯನ್ನು ನೀಡುತ್ತಾ ಇರುತ್ತಾನೆ. ಆದ್ದರಿಂದ ಆತ್ಮವಸ್ತುವನ್ನು ತಿಳಿಯಿಸಿಕೊಡುವಾಗ ಅದಕ್ಕೆ ಮರೆಯಾಗಿರುವ ಅನಾತ್ಮಪ್ರಪಂಚದ ಅಧ್ಯಾರೋಪವನ್ನು ಅತ್ತಸರಿಯಿಸುವಂತೆ ಹೇಳಬೇಕು ; ಆಗ ಆತ್ಮನು ತನ್ನ ಸ್ವರೂಪದಿಂದ ತಾನೇ ಅನುಭವದಲ್ಲಿ ತೋರಿಕೊಳ್ಳುತ್ತಾನೆ. ಒಂದೇ ಆತ್ಮವಸ್ತುವನ್ನು ಹೀಗೆ ಉತ್ತಮಾಧಿ ಕಾರಿಗಳಿಗೆ ಜ್ಞಾನವುಂಟಾಗುವದಕ್ಕಾಗಿ ನೇರಾಗಿಯೂ, ಮಧ್ಯಮಾಧಿಕಾರಿಗಳಿಗೆ ಉಪಾಸನೆಯ ಮೂಲಕವೂ ಶಾಸ್ತ್ರದಲ್ಲಿ ಉಪದೇಶಿಸಿರುತ್ತದೆ. ಈ ಎರಡು ಬಗೆಗಳನ್ನು ಹೇಗೆ ಹೊಂದುಗಡೆ ಮಾಡಿಕೊಳ್ಳಬೇಕೆಂಬುದನ್ನು ಸ್ಪಷ್ಟಗೊಳಿಸುವದಕ್ಕಾಗಿ

ಈಗ ಹಿಂದೆಯೇ ಸಂಕ್ಷೇಪವಾಗಿ ಹೇಳಿರುವ ದಹರವಿದ್ಯೆಯನ್ನು ಈಗ ವಿಸ್ತರಿಸಿ ಹೇಳುತ್ತೇನೆ.

**ಅಥ ಯದಿದಮಸ್ಮಿನ್ ಬ್ರಹ್ಮಪುರೇ ದಹರಂ ಪುಂಡರೀಕಂ ವೇಶ್ಮ ದಹರೋಽಸ್ಮಿನ್ ಅಂತರಾಕಾಶಸ್ತಸ್ಮಿನ್ ಯದನ್ತಸ್ತದನ್ವೇಷ್ಟವ್ಯಂ ತದ್ವಾವ ವಿಜಿಜ್ಞಾಸಿತವ್ಯಮಿತಿ ॥** ಛಾಂ. ೮-೧-೧

"ಈ ಶರೀರಕ್ಕೆ 'ಬ್ರಹ್ಮಪುರ' ವೆಂದು ಹೆಸರು. ಇದರೊಳಗೆ ಸಣ್ಣದಾದ ಹೃದಯ ಪುಂಡರೀಕವೆಂಬ ಒಂದು ಭವನವಿದೆ. ಅದರೊಳಗೆ ಸಣ್ಣದಾದ ಒಂದು ಆಕಾಶವಿದೆ. ಅದರಲ್ಲಿ ಏನಿದೆಯೋ ಅದನ್ನು ಅನ್ವೇಷಣೆಮಾಡಿ ಅರಿತುಕೊಳ್ಳಬೇಕು" ಎಂದು ಒಂದು ಉಪಾಸನಾವಿಧಿ ಇದೆ. ಇದರಲ್ಲಿ ದಹರಾಕಾಶವನ್ನು (ಅಲ್ಪಪರಿಮಾಣದ ಹೃದಯದೊಳಗಿನ ಆಕಾಶವನ್ನು) ಉಪಾಸನೆಮಾಡಬೇಕೆಂದು ಹೇಳುವ ಸಂದರ್ಭದಲ್ಲಿ ದಹರ ಎಂಬ ಮಾತನ್ನು ಉಪಯೋಗಿಸುವದರಿಂದ ಇಲ್ಲಿ ಹೇಳಿರುವ ಉಪಾಸನೆಗೆ 'ದಹರವಿದ್ಯೆ' ಎಂಬ ವೈದಿಕಸಂಕೇತವು ಬಂದಿರುತ್ತದೆ.

ಬ್ರಹ್ಮಪುರವೆಂಬ ಮಾತಿಗೆ ಪರಮಾತ್ಮನ ಕೋಟೆ ಎಂದರ್ಥವಾಗುತ್ತದೆ. ಈ ಶರೀರವು ಒಂದು ದುರ್ಗದಂತೆ ಇರುತ್ತದೆ. ಇದರಲ್ಲಿ ಅನೇಕ ಇಂದ್ರಿಯಗಳು, ಮನಸ್ಸು, ಬುದ್ಧಿಯೂ ಇದ್ದುಕೊಂಡಿವೆ. ಇವುಗಳ ಅನುಜ್ಞೆಯಿಂದ - ಕೋಟೆಯೊಳಗಿರುವ ಅರಮನೆಯನ್ನು ಸೇರುವಂತೆ - ಹೃದಯವೆಂಬ ಅರಮನೆಯನ್ನು ಸೇರಬೇಕು; ಅದರಲ್ಲಿ 'ಬ್ರಹ್ಮವಿದೆ.'

(೧) "**ಅಸ್ಮಿನ್ ಹೃದಯಪುಣ್ಡರೀಕೇ ವೇಶ್ಮನಿ ಉಪಸಂಹೃತಕರಣೈರ್ಬಾಹ್ಯ ವಿಷಯವಿರಕ್ತೈಃ ವಿಶೇಷತೋ ಬ್ರಹ್ಮಚರ್ಯಸತ್ಯಸಾಧನಾಭ್ಯಾಂ ಯುಕ್ತೈಃ ವಕ್ಷ್ಯಮಾಣಗುಣವದ್ ಉಪಲಭ್ಯತೇ ॥** ಛಾ. ಭಾ.ಭಾ. ೬೦೭

(೨) **ಅನ್ತರಾಕಾಶಃ ಆಕಾಶಾಖ್ಯಂ ಬ್ರಹ್ಮ । 'ಆಕಾಶೋ ವೈ ನಾಮ' ಇತಿ ಹಿ ವಕ್ಷ್ಯತಿ । ಆಕಾಶ ಇವ ಅಶರೀರತ್ವಾತ್ ಸೂಕ್ಷ್ಮತ್ವಸರ್ವಗತತ್ವ ಸಾಮಾನ್ಯಾಚ್ಚ । ತಸ್ಮಿನ್ನಾಕಾಶೇ ಯತ್ ಅನ್ತಃ ಮಧ್ಯೇ ತದನ್ವೇಷ್ಟವ್ಯಮ್ । ತದ್ವಾವ ತದೇವ ಚ ವಿಶೇಷೇಣ ಜಿಜ್ಞಾಸಿತವ್ಯಮ್ । ಗುರ್ವಾಶ್ರಯ ಶ್ರವಣಾದ್ಯುಪಾಯೈರನ್ವಿಷ್ಯ ಚ ಸಾಕ್ಷಾತ್ಕರಣೀಯಮ್ ಇತ್ಯರ್ಥಃ ॥**"

ಈ ಹೃದಯಪುಣ್ಡರೀಕವೆಂಬ ಭವನದಲ್ಲಿ, ಕರಣಗಳೆಲ್ಲವನ್ನೂ ಉಪಸಂಹಾರ ಮಾಡಿಕೊಂಡು ಮುಖ್ಯವಾಗಿ ಬ್ರಹ್ಮಚರ್ಯ, ಸತ್ಯ - ಎಂಬ ಸಾಧನಗಳಿಂದೊಡಗೂಡಿ

ಮುಂದೆ ಹೇಳುವ ಗುಣಗಳಿಂದೊಡಗೂಡಿದ ಬ್ರಹ್ಮವನ್ನು ಕಂಡುಕೊಳ್ಳಬಹುದು . ಹೃದಯದ ಒಳಗೆ ಇರುವ ಆಕಾಶವೆಂದರೆ ಆಕಾಶವೆಂಬ ಹೆಸರುಳ್ಳ ಬ್ರಹ್ಮವು ; ಆಕಾಶವು ಬ್ರಹ್ಮಕ್ಕೆ ಹೆಸರೆಂಬುದು ಮುಂದೆ ಈ ಉಪನಿಷತ್ತಿನಲ್ಲಿಯೇ ತಿಳಿದುಬರುತ್ತದೆ. ಆಕಾಶದಂತೆ ಶರೀರರಹಿತವಾಗಿರುವದರಿಂದಲೂ ಆಕಾಶದಂತೆ ಸೂಕ್ಷ್ಮವಾಗಿರುವದ ರಿಂದಲೂ, ಸರ್ವಗತವಾಗಿರುವದರಿಂದಲೂ ಬ್ರಹ್ಮಕ್ಕೆ ಆಕಾಶವೆಂಬ ಹೆಸರು ಸಲ್ಲುತ್ತದೆ. ಆ ಆಕಾಶದಲ್ಲಿ ಯಾವದಿದೆಯೋ ಅದನ್ನು ಹುಡುಕಬೇಕು ; ಗುರುಗಳನ್ನು ಆಶ್ರಯಿಸಿ ಶ್ರವಣಮಾಡುವದೇ ಮುಂತಾದ ಉಪಾಯಗಳನ್ನು ಅನುಷ್ಠಾನಮಾಡುವದೇ ಹುಡುಕುವದೆಂಬುದು. ಆ ರೀತಿಯಲ್ಲಿ ಹುಡುಕಿ ಆ ಬ್ರಹ್ಮವನ್ನು ಅಲ್ಲಿ ಸಾಕ್ಷಾತ್ಕಾರಮಾಡಿ ಕೊಳ್ಳಬೇಕು - ಎಂದು ಅರ್ಥ ಎಂದು ಶ್ರುತಿವಾಕ್ಯಕ್ಕೆ ಆಚಾರ್ಯರು ಭಾಷ್ಯವನ್ನು ಬರೆದಿರುತ್ತಾರೆ.

ಈ ಶ್ರುತಿವಾಕ್ಯದಲ್ಲಿ ಹೃದಯಪುಂಡರೀಕವೆಂದರೇನು ? ವಿಜ್ಞಾನ , ಸಾಕ್ಷಾತ್ಕಾರ - ಎಂದರೇನು ? - ಎಂಬೀ ಎರಡು ವಿಷಯಗಳನ್ನು ಕುರಿತು ವಿಚಾರ ಮಾಡತಕ್ಕದ್ದಿದೆ. ಹೃದಯವೆಂಬುದು ಲೋಕಪ್ರಸಿದ್ಧವಾಗಿರುವ ರಕ್ತನಾಳಗಳೊಡ ಗೂಡಿರುವ ಮಾಂಸಪಿಂಡವೇ ಎಂಬುದು ಮುಂದೆ ಆರನೆಯ ಖಂಡದಲ್ಲಿ (೮-೬-೧) 'ಅಥ ಯಾ ಏತಾ ಹೃದಯಸ್ಯ ನಾಡ್ಯಃ ' ಎಂಬ ಮಂತ್ರದ ವ್ಯಾಖ್ಯಾನದಲ್ಲಿ 'ಅಥ ಯಾ ಏತಾ ವಕ್ಷ್ಯಮಾಣಾ ಹೃದಯಸ್ಯ ಪುಂಡರೀಕಾಕಾರಸ್ಯ ಬ್ರಹ್ಮೋಪಾಸನಸ್ಥಾನಸ್ಯ ಸಂಬನ್ಧಿನ್ಯೋ ನಾಡ್ಯಃ ಸರ್ವತೋ ವಿನಿಃಸೃತಾಃ ರಶ್ಮಯಃ ॥ ' (ಕಮಲದ ಆಕಾರವುಳ್ಳ , ಬ್ರಹ್ಮವನ್ನು ಉಪಾಸನೆಮಾಡುವದಕ್ಕೆ ಸ್ಥಾನವಾದ ಹೃದಯಕ್ಕೆ ಸಂಬಂಧಪಟ್ಟಿರುವ - ಎಲ್ಲಾ ಕಡೆಯಲ್ಲಿಯೂ ಸೂರ್ಯಮಂಡಲದಿಂದ ರಶ್ಮಿಗಳು ಹೊರಟಿರುವಂತೆ - ಹೃದಯವೆಂಬ ಮಾಂಸಪಿಂಡದಿಂದ ಹೊರಟಿರುವ ನಾಡಿಗಳಿವೆಯಲ್ಲ , ಅವುಗಳು ನಾನಾವರ್ಣಗಳಿಂದೊಡಗೂಡಿದ ರಸದಿಂದ ಪೂರ್ಣವಾಗಿರುತ್ತವೆ) - ಎಂಬ ಭಾಷ್ಯಾವಾಕ್ಯದಿಂದ ಸ್ಪಷ್ಟವಾಗಿರುತ್ತದೆ.

ಆದರೆ ಉಪಾಸನೆಯನ್ನು ಮಾಡುವ ಸ್ಥಾನವು ಈ ಹೃದಯವಲ್ಲವೆಂದು ಈಗಿನ ಕೆಲವರ ಮತವಿದೆ. ಶರೀರದ ಎಡಭಾಗದಲ್ಲಿ ಶ್ವಾಸಕೋಶಗಳ ನಡುವೆ ಈ ಪ್ರಸಿದ್ಧ ಹೃದಯವಿದೆ ; ಆದರೆ ಬಲಭಾಗದಲ್ಲಿ ಮತ್ತೊಂದು ಹೃದಯವಿದೆ ಎಂದು ಬ್ರಹ್ಮೀಭೂತ ಶ್ರೀರಮಣಮಹರ್ಷಿಗಳು ಹೇಳುತ್ತಿದ್ದರೆಂದು ಪ್ರವಾದವಿದೆ. ಆದರೆ ಈ ವಿಚಾರವು ನನಗೆ ತಿಳಿಯದು. ಶ್ರೀರಮಣಮಹರ್ಷಿಗಳ ಅಭಿಪ್ರಾಯವು ಏನಿತ್ತೆಂಬು

ದನ್ನು ನಾನು ಹೇಳಲಾರೆ. ಈಚೆಗೆ ಹಿಂದೀ 'ಕಲ್ಯಾಣ' ಪತ್ರಿಕೆಯ 1964ನೆಯ ವರ್ಷದ ಎಂಟನೆಯ ಸಂಚಿಕೆಯಲ್ಲಿ ಸ್ವಾಮಿ ಶ್ರೀಕೃಷ್ಣಾನಂದಜೀ ಮಹಾರಾಜ ಎಂಬುವರು (ಪು. ೧೧೦೦) ಬರೆದಿರುವ ಲೇಖನದಲ್ಲಿ ಈ ಅಭಿಪ್ರಾಯವನ್ನು ಪ್ರಕಟಿಸಿರುತ್ತಾರೆ. ''ಹೃದಯಗಳು ಎರಡು ; ಒಂದು ಬಾಹ್ಯಹೃದಯ ; ಇದು ಎದೆಯೊಳಗೆ ಇರುತ್ತದೆ. ಇದನ್ನು 'ಉರೋಹೃದಯ'ವೆಂದೂ ಕರೆಯುತ್ತಾರೆ. ರಕ್ತವಾಹಿನೀ ನಾಡಿಗಳು ಹೊರಡುವ ಸ್ಥಾನವಿದು. ಇದರಂತೆ ಪ್ರಾಣವಾಹಿನೀನಾಡಿಗಳ ಉದ್ಗಮಸ್ಥಾನವಾದ ಮಸ್ತಿಷ್ಕ - ಸುಷುಮ್ನೆಯಲ್ಲಿ ಹೃದಯಪ್ರದೇಶವಿದೆ. ಬೃಹದಾರಣ್ಯಕ (೨-೧-೧೯) ಯೋಗಶಿಖೋಪನಿಷತ್ತಿನ ಆರನೆಯ ಅಧ್ಯಾಯ ಇವುಗಳಲ್ಲಿ ಪ್ರಾಣವಾಹಿನೀನಾಡಿಗಳ ಸಂಖ್ಯೆಯಿದೆ. ಮಸ್ತಿಷ್ಕಸುಷುಮ್ನೆಯಲ್ಲಿ ಕೆಲವು ಚಕ್ರಗಳಿವೆ. ಅವು ಸಹಸ್ರಾರದಿಂದ ಆಧಾರಚಕ್ರದವರೆಗೆ ಇರುತ್ತವೆ. ಹೃದಯಪ್ರದೇಶದ ಶಿಖರಸ್ಥಾನವು ಶಿರೋಹೃದಯ ; ಅದರೊಳಗೆ ಈಶ್ವರ , ಆತ್ಮ , ಮನಸ್ಸು , ಬುದ್ಧಿ , ಪ್ರಾಣ , ಇಂದ್ರಿಯದೇವತೆಗಳು - ಇವರೂ ಕಾಮನೆಗಳೂ ಇರುತ್ತವೆ. ''

ಈ ಅಭಿಪ್ರಾಯಕ್ಕೆ ಸ್ವಾಮಿಜಿಯವರು ಈಗಿನ ಶರೀರವಿಜ್ಞಾನಶಾಸ್ತ್ರಜ್ಞರ ಅಭಿಪ್ರಾಯವನ್ನು ತಾಡಹಾಕಿರುತ್ತಾರೆ. ಆದರೆ ಆ ಸ್ವಾಮಿಗಳು ಉದಾಹರಿಸಿರುವ ಯಾವ ಉಪನಿಷದ್ವಾಕ್ಯದಲ್ಲಿಯೂ ಶಿರೋಹೃದಯದ ಉಲ್ಲೇಖವಿರುವದಿಲ್ಲ . ಯೋಗಶಿಖೋಪನಿಷತ್ತಿನಲ್ಲಿರುವ 'ಊರ್ಧ್ವಮೂಲಮಧಃಶಾಖಂ . ವಾಯು ಮಾರ್ಗೇಣ ಸರ್ವಗಮ್ ॥' ಎಂಬ ವಾಕ್ಯದಲ್ಲಿ 'ಊರ್ಧ್ವ' ಶಬ್ದಕ್ಕೆ ಮೆದುಳಿನಲ್ಲಿರುವ ಹೃದಯವೆಂಬರ್ಥವನ್ನು ಸ್ವಾಮಿಗಳು ಯಾವ ಆಧಾರದಿಂದ ತೆಗೆದಿರುತ್ತಾರೋ ಗೊತ್ತಾಗುವಂತಿಲ್ಲ . ಕಠೋಪನಿಷತ್ತು , ಭಗವದ್ಗೀತೆ - ಇವುಗಳಲ್ಲಿರುವ 'ಊರ್ಧ್ವಮೂಲ'ವೆಂಬ ಶಬ್ದಕ್ಕೆ 'ಪರಮಾತ್ಮನೇ ಮೂಲಕಾರಣ' ನೆಂಬರ್ಥವನ್ನೇ ಭಾಷ್ಯಕಾರರು ಬರೆದಿರುತ್ತಾರೆಯೇ ಹೊರತು ಶಿರೋಹೃದಯ ಸ್ಥಾನವೆಂಬರ್ಥವನ್ನು ಬರೆದಿಲ್ಲ. ಮಂಡಲಬ್ರಾಹ್ಮಣೋಪನಿಷತ್ತಿನಲ್ಲಿ -

> ಮಹರ್ಷಿವೇದ್ಯಮ್ ಅನ್ತರ್ಬಾಹ್ಯೇನ್ದ್ರಿಯೈರದೃಶ್ಯಂ ಸಹಸ್ರಾರೇ ಜಲಜ್ಜ್ಯೋತಿರನ್ತರ್ಲಕ್ಷ್ಯಮ್ । ಬುದ್ಧಿಗುಹಾಯಾಂ ಸರ್ವಾಂಗಸುಂದರಂ ಪುರುಷರೂಪಮಂತರ್ಲಕ್ಷ್ಯಮಿತ್ಯಪರೇ । ಶೀರ್ಷಾನ್ತರ್ಗತಕುಂಡಲ ಮಂಡಲಮಧ್ಯಗಂ ಪಂಚವಕ್ತ್ರಮುಮಾಸಹಾಯಂ ನೀಲಕಂಠಮಂತ ರ್ಲಕ್ಷ್ಯಮಿತಿ ಕೇಚಿತ್ । ಅಂಗುಷ್ಠಮಾತ್ರಃ ಪುರುಷೋಽನ್ತರ್ಲಕ್ಷ್ಯ ಇತ್ಯೇಕೇ । ಉಕ್ತವಿಕಲ್ಪಂ ಸರ್ವಮಾತ್ಮೈವ ॥

ಈ ವಾಕ್ಯದ ಅರ್ಥವು ನಿಷ್ಕೃಷ್ಟವಾಗಿ ಹೇಳುವದಕ್ಕೆ ಬರುವಂತಿಲ್ಲ . ಸಹಸ್ರಾರಾದಿ ಚಕ್ರಗಳ ವರ್ಣನೆಯಿರುವ ಈ ಉಪನಿಷತ್ತು ತಾಂತ್ರಿಕರಿಗೆ ಹೆಚ್ಚು ಮಾನ್ಯವಾಗಿರುವದೆಂಬುದು ಸ್ಪಷ್ಟವಾಗಿದೆ. ಶಂಕರಭಗವತ್ಪಾದರ ಭಾಷ್ಯವು ಇದಕ್ಕಿಲ್ಲ. ಹೇಗೇ ಇರಲಿ, ಇಲ್ಲಿಯೂ ಶಿರೋಹೃದಯದ ಉಲ್ಲೇಖವಿಲ್ಲ .[1] ಶ್ವೇತಾಶ್ವತರ (೩-೧೩), ಕಠ (೨-೩-೧೭) - ಇವುಗಳಲ್ಲಿ ಅಂತರಾತ್ಮಪುರುಷನು ಜನರ ಹೃದಯದಲ್ಲಿರುತ್ತಾನೆಂದಿದೆ ; ಇವುಗಳಲ್ಲಿ 'ಮಸ್ತಿಷ್ಕಹೃದಯ'ವೆಂಬ ವಿಶೇಷಣದ ಉಲ್ಲೇಖವಿಲ್ಲ. ಸ್ವಾಮಿಗಳೇನೋ ಹಾಗೆಂದು ಅರ್ಥವನ್ನು ಮಾಡಿರುತ್ತಾರೆ.

ಇನ್ನು ಸುಷುಮ್ನಾನಾಡಿಯ ವಿಚಾರ. ತೈತ್ತಿರೀಯದಲ್ಲಿ :

**ಸ ಯ ಏಷೋಽನ್ತರ್ಹೃದಯ ಆಕಾಶಃ । ತಸ್ಮಿನ್ನಯಂ ಪುರುಷೋ ಮನೋಮಯಃ । ಅಮೃತೋ ಹಿರಣ್ಮಯಃ । ಅಂತರೇಣ ತಾಲುಕೇ । ಯ ಏಷ ಸ್ತನ ಇವಾವಲಂಬತೇ । ಸೇನ್ದ್ರಯೋನಿಃ । ಯತ್ರಾಸೌ ಕೇಶಾನ್ತೋ ವಿವರ್ತತೇ । ವ್ಯಪೋಹ್ಯ ಶೀರ್ಷಕಪಾಲೇ ॥** ತೈ. ೧-೬.

ಎಂಬ ಅನುವಾಕವಿದೆ. ಇಲ್ಲಿಯೂ ಶಿರೋಹೃದಯದ ಉಲ್ಲೇಖವಿಲ ಭಾಷ್ಯಕಾರರು :

**(೩) ಹೃದಯಮ್ ಇತಿ ಪುಣ್ಡರೀಕಾಕಾರೋ ಮಾಂಸಪಿಣ್ಡಃ ಪ್ರಾಣಾಯತನೋ ಅನೇಕನಾಡೀಸುಷಿರಃ ಉರ್ಧ್ವನಾಲೋಽಧೋ-ಮುಖೋ ವಿಶಸ್ಯಮಾನೇ ಪಶೌ ಪ್ರಸಿದ್ಧ ಉಪಲಭ್ಯತೇ । ತಸ್ಯಾನ್ತರ್ಯ ಏಷ ಆಕಾಶಃ ಪ್ರಸಿದ್ಧ ಏವ ಕರಕಾಕಾಶವತ್ । ತಸ್ಮಿನ್ ಸೋಽಯಂ ಪುರುಷಃ ॥**

ಎಂದು ದಹರವಿದ್ಯೆಯಲ್ಲಿ ಬರೆದಿರುವಂತೆ ಹೃದಯವೆಂದರೆ ಪ್ರಸಿದ್ಧವಾದ ಮಾಂಸಪಿಂಡವೆಂದೂ ಅದರಲ್ಲಿರುವ ಆಕಾಶದಲ್ಲಿ ಮನೋಮಯಪುರುಷನನ್ನು ಉಪಾಸನೆ ಮಾಡಬೇಕೆಂದೂ ಬರೆದಿರುತ್ತಾರೆ.

**(೪) ತಸ್ಯೈವಂಲಕ್ಷಣಸ್ಯ ಹೃದಯಾಕಾಶೇ ಸಾಕ್ಷಾತ್ಕೃತಸ್ಯ ವಿದುಷ ಆತ್ಮಭೂತಸ್ಯ ಈಶ್ವರರೂಪಪ್ರತಿಪತ್ತಯೇ ಮಾರ್ಗೋಽಭಿಧೀಯತೇ । ಹೃದಯಾದೂರ್ಧ್ವಂ ಪ್ರವೃತ್ತಾ ಸುಷುಮ್ನಾ ನಾಮ ನಾಡೀ ಯೋಗಶಾಸ್ತ್ರೇಷು ಪ್ರಸಿದ್ಧಾ । ಸಾ ಚ ಅನ್ತರೇಣ ಮಧ್ಯೇ ತಾಲುಕೇ ತಾಲುಕಯೋರ್ಗತಾ ।**

1. ಶ್ರೀಗಳು ಉಪನ್ಯಾಸಕಾಲಕ್ಕೆ ಈ ವಾಕ್ಯಗಳನ್ನು ಸಂಕ್ಷೇಪವಾಗಿ ವಿವರಿಸಿದ್ದರು. ಇಲ್ಲಿ ಸ್ವಲ್ಪ ವಿವರವಾಗಿ ಬರೆದುಕೊಟ್ಟಿರುತ್ತಾರೆ.

**ಯಶ್ಚೈಷ ತಾಲುಕಯೋರ್ಮಧ್ಯೇ ಸ್ತನ ಇವಾವ ಲಮ್ಬತೇ ಮಾಂಸಖಣ್ಡಸ್ತಸ್ಯ ಚ ಅನರೇಣ ಇತ್ಯೇತದ್ ॥**

ಎಂದು ಸುಷುಮ್ನಾನಾಡಿಯು ಹೃದಯದಿಂದ ಹೊರಟು ದವಡೆಗಳ ನಡುವೆ ಇರುವ ಕಿರುನಾಲಗೆಯ ದ್ವಾರದಿಂದ ಹೋಗಿ ನೆತ್ತಿಯ ನಡುಭಾಗದಿಂದ ಹೋಗಿರುವದೆಂದೇ ಬರೆದಿರುತ್ತಾರೆ. ಇಲ್ಲಿ ಆರು ಚಕ್ರಗಳ ವಿವರವೇನೂ ಇಲ್ಲ. ಸ್ವಾಮಿಗಳು ಕೊಟ್ಟಿರುವ ವಾಸಿಷ್ಠವಾಕ್ಯದಲ್ಲಂತೂ (ಉಪ. ೭೮-೩೩ರಿಂದ ೩೮) ಅಂತರ್ಹೃದಯವೆಂದರೆ ಸಂವಿದ್ಧೃದಯ (ಚಿನ್ಮಯವಾದ ಹೃದಯ) ಎಂದು ಪರಮಾತ್ಮನನ್ನೇ ಹೇಳಿರುತ್ತದೆ. ಅಲ್ಲಿ ಹೃದಯವೆಂಬ ಶಬ್ದಕ್ಕೆ ವಾಚ್ಯಾರ್ಥವಿಲ್ಲವೇ ಇಲ್ಲ.[1]

ಇಷ್ಟು ವಿವರವನ್ನು ಭಾಷ್ಯದಲ್ಲಿ ಕೊಟ್ಟಿರುವದೇಕೆಂದರೆ ದಹರಾಕಾಶವೆಂದು ಉಪಾಸನೆಮಾಡಬೇಕಾಗಿರುವ ಪರಮಾತ್ಮನು ಪ್ರಸಿದ್ಧವಾದ ಹೃದಯದಲ್ಲಿಯೇ ಇರುತ್ತಾನೆಂದು ಭಾವಿಸಬೇಕು. ಅಲ್ಲಿ ಪರಮಾತ್ಮನು ಇರುತ್ತಾನೆಂಬುದು ಶ್ರುತಿ ಪ್ರಸಿದ್ಧ. ಹೃದಯವೆಂಬ ಶಬ್ದವನ್ನು ಮನಸ್ಸು ಎಂಬರ್ಥದಲ್ಲಿ ತೆಗೆದುಕೊಂಡರಂತೂ ಅದಕ್ಕೆ ಆತ್ಮನು ಸಾಕ್ಷಿರೂಪದಿಂದ ಇರುತ್ತಾನೆಂಬುದು ಅನುಭವಸಿದ್ಧ . ಸರ್ವಸಂಮತವಾದ ಪ್ರಾಮಾಣ್ಯವಿರುವ ಉಪನಿಷತ್ತುಗಳಲ್ಲಿ ತಂತ್ರಶಾಸ್ತ್ರಗಳ ಅಥವಾ ಶರೀರ ವಿಜ್ಞಾನಶಾಸ್ತ್ರದ ಸಂಬಧವು ಸ್ವಲ್ಪವೂ ಇರುವದಿಲ್ಲ . ಕರ್ಮಗಳನ್ನು ಹೇಗೆ ಶಾಸ್ತ್ರದಲ್ಲಿ ಹೇಳಿರುವಂತೆಯೇ ಮಾಡಬೇಕೋ, ಉಪಾಸನೆಗಳನ್ನೂ ಶಾಸ್ತ್ರದಲ್ಲಿ ಹೇಳಿರುವಂತೆಯೇ ಮಾಡಬೇಕು. 'ಸರ್ವತ್ರ ಹಿ ಶಾಸ್ತ್ರಪ್ರಾಪಿತಾ ಏವ ಧರ್ಮಾ ಉಪಾಸ್ಯಾಃ , ನ ವಿದ್ಯಮಾನಾ ಅಪಿ ಅಶಾಸ್ತ್ರೀಯಾಃ' (ಛಾಂ. ಭಾ. ೨-೨-೧, ಭಾ.ಭಾ. ೧೧೬.) ಎಂಬ ವಚನದಂತೆ , ಶಾಸ್ತ್ರದಲ್ಲಿ ವಿಧಿಸಿದಂತೆ ಧ್ಯಾನಮಾಡಬೇಕೇ ಹೊರತು , ಬೇರೊಂದು ವಿಧವಾಗಿ ಅದು ವಾಸ್ತವವಾಗಿದ್ದರೂ ಮಾಡತಕ್ಕದ್ದಲ್ಲ. ಈ ಕಾರಣದಿಂದ ಹೃದಯಶಬ್ದವಿಚಾರವನ್ನು ಇಷ್ಟುದೀರ್ಘವಾಗಿ ಮಾಡಬೇಕಾಯಿತು. ಪರಮಾತ್ಮನಿಗೂ 'ಹೃದಯ'ವೆಂದೇ ಹೆಸರು ; ಹೃದಯದಲ್ಲಿಯೇ ಬ್ರಹ್ಮವನ್ನು ಉಪಾಸನೆಮಾಡಬೇಕು.

**ಸ ಬ್ರೂಯಾನ್ನಾಸ್ಯ ಜರಯೈತಜ್ಜೀರ್ಯತಿ ನ ವಧೇನಾಸ್ಯ ಹನ್ಯತೇ ಏತತ್ ಸತ್ಯಂ ಬ್ರಹ್ಮಪುರಮಸ್ಮಿನ್ ಕಾಮಾಃ ಸಮಾಹಿತಾಃ ಏಷ ಆತ್ಮಾ**

1. ಇಲ್ಲಿಯವರೆಗಿನ ಭಾಗವನ್ನು ಉಪನ್ಯಾಸಕಾಲಕ್ಕೆ ಶ್ರೀಗಳು ಬಹಳ ಸಂಕ್ಷೇಪವಾಗಿ ಹೇಳಿ ತಮ್ಮ

**ಅಪಹತಪಾಪ್ಮಾ ವಿಜರೋ ವಿಮೃತ್ಯುರ್ವಿಶೋಕೋ ವಿಜಿಘತ್ಸೋಽಪಿಪಾಸಃ ಸತ್ಯಕಾಮಃ ಸತ್ಯಸಂಕಲ್ಪಃ ಯಥಾ ಹ್ಯೇವೇಹ ಪ್ರಜಾ ಅನ್ವಾವಿಶನ್ತಿ ಯಥಾನುಶಾಸನಂ ಯಂ ಯಮನ್ತಮಭಿಕಾಮಾ ಭವನ್ತಿ ಯಂ ಜನಪದಂ ಯಂ ಕ್ಷೇತ್ರಭಾಗಂ ತಂ ತಮೇವೋಪಜೀವನ್ತಿ॥** ಛಾಂ. ೮-೧-೫.

ಶರೀರದಲ್ಲಿ ಹೃದಯವಿದೆ , ಅದರೊಳಗೆ 'ದಹರಾಕಾಶ'ವೆಂಬ ಬ್ರಹ್ಮವಿದೆ ; ಆದರೆ ಶರೀರಕ್ಕೆ ಮುಪ್ಪು ಬಂದರೂ ಇದಕ್ಕೆ ಮುಪ್ಪಿಲ್ಲ . ಶರೀರಕ್ಕೆ ಸಾವು ಬಂದರೂ ಇದಕ್ಕೆ ಸಾವಿಲ್ಲ . ಶರೀರವನ್ನು ಬ್ರಹ್ಮಪುರವೆಂದು ಕರೆದಿರುವದು ಉಪಚಾರಕ್ಕೆ ; ನಿಜವಾಗಿ ಈ ದಹರಾಕಾಶವೇ ಸತ್ಯವಾದ ಬ್ರಹ್ಮಪುರ. ಈ ಬ್ರಹ್ಮಪುರದಲ್ಲಿ ಭೂಮ್ಯಂತರಿಕ್ಷಗಳು , ಅಗ್ನಿವಾಯುಗಳು , ಚಂದ್ರಸೂರ್ಯರು , ಮಿಂಚು , ನಕ್ಷತ್ರಗಳು - ಹೆಚ್ಚೇಕೆ ? ಈ ಜೀವಾತ್ಮನಿಗೆ ಈಗ ಸಂಬಂಧಿಸಿರುವದು , ಹಿಂದೆ ಇದ್ದದ್ದು , ಮುಂದೆ ಇರಬಹುದಾದದ್ದು - ಈ ಎಲ್ಲಾ ಕಾಮಗಳೂ ಈ ಬ್ರಹ್ಮಪುರದಲ್ಲಿಯೇ ಇರುತ್ತವೆ (ಛಾಂ. ೮-೧-೩) ಎಂದು ಉಪಾಸನೆಮಾಡಬೇಕು.

ಪರಮಾತ್ಮನನ್ನು ಅರಿತುಕೊಂಡರೆ ಸರ್ವಕಾಮಗಳೂ ಒಟ್ಟಿಗೇ ದೊರೆಯುವವು ಎಂದು ಶ್ರುತಿಯಲ್ಲಿ ಹೇಳಿದೆ. ಯಾವ ಕಾಮಿತವಸ್ತುವೇ ಆಗಲಿ, ಆತ್ಮನಿಗಿಂತ ವ್ಯತಿರಿಕ್ತವಾಗಿ ಇಲ್ಲವೇಇಲ್ಲವಾದ್ದರಿಂದ ಆತ್ಮಪ್ರಾಪ್ತಿಯಾದರೆ ಸರ್ವಕಾಮಗಳೂ ಪ್ರಾಪ್ತವಾಗುವವು - ಎಂಬುದು ಜ್ಞಾನಿಯ ಅನುಭವಕ್ಕೆ ಬರುತ್ತದೆ. ಪ್ರಕೃತ ದಹರವಿದ್ಯೆಯ ಉತ್ತರಭಾಗದಲ್ಲಿ ಇಂದ್ರವಿರೋಚನರಿಗೆ ಈ ವಿಷಯವನ್ನು ಪ್ರಜಾಪತಿಯು ಉಪದೇಶಮಾಡಿರುತ್ತಾನೆ. 'ಯಾವನು ಶಾಸ್ತ್ರಾಚಾರ್ಯರ ಉಪದೇಶವನ್ನನುಸರಿಸಿ ತಿಳಿದುಕೊಂಡು ತನ್ನ ಅನುಭವಕ್ಕೆ ತಂದುಕೊಳ್ಳುವನೋ ಆವನಿಗೆ ಸರ್ವಲೋಕಗಳೂ ಸರ್ವಕಾಮಗಳೂ ಪ್ರಾಪ್ತವಾಗುವವು ' (ಛಾಂ. ೮-೬-೭) ಎಂದು ಅಲ್ಲಿ ಹೇಳಿರುತ್ತಾನೆ. ಇಲ್ಲಿಯೋ ಅದೇ ಬ್ರಹ್ಮವು - ಅಪಹತಪಾಪ್ಮ, (ಧರ್ಮಾಧರ್ಮಗಳಿಲ್ಲದ ) ವಿಜರ, ವಿಮೃತ್ಯು , (ಮುಪ್ಪಿಲ್ಲದ , ಸಾವಿಲ್ಲದ ) ವಿಶೋಕ, ವಿಜಿಘತ್ಸ, (ಶೋಕವಿಲ್ಲದ , ಹಸಿವಿಲ್ಲದ ) ಅಪಿಪಾಸ (ನೀರಡಿಕೆಯಿಲ್ಲದ) ಸತ್ಯಕಾಮ , ಸತ್ಯಸಂಕಲ್ಪ - ಎಂಬೀ ಎಂಟು ಗುಣಗಳಿಂದೊಡಗೂಡಿದ ಆ ಬ್ರಹ್ಮವೇ - ಉಪಾಸ್ಯವಾಗಿರುತ್ತದೆ . ಇದನ್ನು ಉಪಾಸನೆಮಾಡಿಕೊಂಡು 'ಅದೇ ನಾನು' ಎಂಬ ಅಭಿಮಾನವು ಮೈದುಂಬಿಕೊಳ್ಳುವವರೆಗೂ ಸತತವಾಗಿ ಸಾಯುವವರೆಗೂ ಶ್ರದ್ಧೆಯಿಂದ ಉಪಾಸನೆಮಾಡಿಕೊಳ್ಳಬೇಕು. ಇದೇ ಸಾಕ್ಷಾತ್ಕಾರವು. ಆತ್ಮಸ್ವರೂಪವನ್ನು ಜ್ಞಾನದಿಂದ ಅನುಭವಕ್ಕೆ ತಂದುಕೊಳ್ಳುವದಕ್ಕೂ ಈ ಸಾಕ್ಷಾತ್ಕಾರಕ್ಕೂ ಮುಖ್ಯವಾದ ವೈಲಕ್ಷಣ್ಯವೇನೆಂದರೆ ಇಲ್ಲಿ ನೇರಾಗಿ ಆತ್ಮನ ಅನುಭವವಿಲ್ಲ, ಭೂತಾವಿಷ್ಟರಾದವರಿಗೆ

ಬರುವ ತಾದಾತ್ಮ್ಯದಂತೆ ಅವನೇ ನಾನೆಂಬುದರ ಭಾವನೆಯು ಗಟ್ಟಿಯಾಗಿ ಅಪರೋಕ್ಷವಾಗಿಬಿಡುತ್ತದೆ.

**ಯ ಇಹಾತ್ಮಾನಮನುವಿದ್ಯ ವ್ರಜನ್ತ್ಯೇತಾಂಶ್ಚ ಸತ್ಯಾನ್ ಕಾಮಾನ್ ತೇಷಾಂ ಸರ್ವೇಷು ಲೋಕೇಷು ಕಾಮಚಾರೋ ಭವತಿ ॥**

ಛಾಂ. ೮- ೧-೬.

ಯಾರು ಹೀಗೆ ಶಾಸ್ತ್ರಾಚಾರ್ಯರ ಉಪದೇಶವನ್ನು ಅನುಸರಿಸಿ ನಿಯಮದಿಂದಾದ ಉಪಾಸನೆಯನ್ನು ಮಾಡಿ ಸಾಕ್ಷಾತ್ಕಾರವನ್ನು ಮಾಡಿಕೊಂಡು ತೆರಳುವರೋ ಅವರಿಗೆ - ಸಾರ್ವಭೌಮರಾಜನಿಗೆ ತನ್ನ ರಾಜ್ಯದಲ್ಲೆಲ್ಲ ಸ್ವಾತಂತ್ರ್ಯದಿಂದ ಭೋಗವಿರುವಂತೆ ಅವರಿಗೆ ಏನೇನು ಇಷ್ಟವಾಗಿರುವದೋ 'ತಂದೆತಾಯಿಗಳು, ಅಣ್ಣತಮ್ಮಂದಿರು, ಅಕ್ಕತಂಗಿಯರು, ಗೆಳೆಯರು, ಗಂಧಪುಷ್ಪಾದಿಗಳು, ಅನ್ನಪಾನಗಳು, ಗೀತಾವಾದ್ಯ, ಪತ್ನಿಯರು, ಹೆಚ್ಚೇಕೆ ಏನೇನು ಬಯಸುವರೋ ಅದೆಲ್ಲವೂ - ಸಂಕಲ್ಪಮಾತ್ರದಿಂದಲೇ ಸಿದ್ಧವಾಗುವವು. ಇಂಥ ಸಿದ್ಧಿಗಳು ಯೋಗಿಗಳಿಗೆ ಸಿಕ್ಕುವವೆಂದು ಪಾತಂಜಲದರ್ಶನದಲ್ಲಿ ಹೇಳಿರುತ್ತದೆ ; ಅದರಲ್ಲಿ ಆಚಾರ್ಯರಿಗೂ ವಿಶ್ವಾಸವಿತ್ತೆಂಬುದು ಅವರ ಭಾಷ್ಯವಾಕ್ಯಗಳಿಂದ ತಿಳಿಯಬರುತ್ತದೆ. ಆದರೆ ವೇದೋಕ್ತವಾದ ಉಪಾಸನೆಯನ್ನೂ ಅವರು 'ಯೋಗ'ವೆಂಬ ಶಬ್ದದಿಂದಲೇ ಕರೆದಿರುತ್ತಾರೆ. ಅವುಗಳಿಗೆ ಆಗುವ ಸಿದ್ಧಿಗಳು ಸಾಕ್ಷಾತ್ಕಾರವಾದಾಗ ಇಲ್ಲಿಯೂ ಸೂಚಿತವಾಗಿರುತ್ತದೆ. ದಹರೋಪಾಸಕನು ಇಲ್ಲಿಯೇ ಪ್ರತಿದಿನವೂ ಬ್ರಹ್ಮವನ್ನು ಮುಟ್ಟುತ್ತಿರುವೆನೆಂಬ ದೃಢಭಾವನೆಯಿಂದೊಡಗೂಡಿರುತ್ತಾನೆ. ಸತ್ತಬಳಿಕ ಬ್ರಹ್ಮಸಾಯುಜ್ಯವನ್ನೇ ಹೊಂದಿ ಅಮೃತಾಭಯಬ್ರಹ್ಮವೇ ಆಗಿ ಸರ್ವಕಾಮಗಳನ್ನೂ ಪಡೆದುಕೊಳ್ಳುತ್ತಾನೆ.

ಮಿಕ್ಕವರಿಗೂ ಅವರವರ ಭಾವನೆಗೆ ತಕ್ಕಂತೆ ಕಾಮಪ್ರಾಪ್ತಿಯಾಗುತ್ತದೆ. ಆದರೆ ರಾಜನ ಅಪ್ಪಣೆಯಂತೆ ಅವನು ಹಾಕಿಕೊಟ್ಟ ಗ್ರಾಮದ ಅಥವಾ ಜಿಲ್ಲೆಯ ಭೋಗವು ದೊರಕುವಂತೆ ಅವರಿಗೆ ಪರಿಚ್ಛಿನ್ನಭೋಗಗಳು ಮಾತ್ರ ದೊರಕುವವು. ದಹರಬ್ರಹ್ಮೋಪಾಸಕರಿಗೆ ಮಾತ್ರ ಸರ್ವಕಾಮಗಳ ಪ್ರಾಪ್ತಿಯಾಗುವದು. ಮಿಕ್ಕವರಿಗೆ ಸಿಕ್ಕುವ ಕಾಮಗಳು ಅನಿತ್ಯವಾಗಿರುತ್ತವೆ, ಅವರ ಇಚ್ಛೆಗಳೆಲ್ಲ ಪರಿಪೂರ್ತಿಯಾಗುವವೆಂಬ ನಿಯಮವೂ ಇಲ್ಲ . ದಹರೋಪಾಸಕರಿಗೆ ಮಾತ್ರ ಸತ್ಯಕಾಮಬ್ರಹ್ಮಪ್ರಾಪ್ತಿಯಿಂದ ಅವಂಧ್ಯವಾದ ಕಾಮಾವಾಪ್ತಿಯಾಗುವದು.

ಲೌಕಿಕಪ್ರಯತ್ನಗಳಿಂದ ಪಡೆದುಕೊಂಡ ಭೋಗಗಳು ಅನಿತ್ಯ , ಅಸುಖ , ಮಿಶ್ರಿತ, ದುಃಖಕ್ಕೆ ಕಾರಣ ; ದೇವತೆಗಳನ್ನು ಉಪಾಸನೆಮಾಡಿ ಪಡೆದುಕೊಂಡ

ಫಲಗಳೂ ಪರಿಚ್ಛಿನ್ನ , ಅನಿತ್ಯ ; ಆದ್ದರಿಂದ ಸಕಲಕಾಮಗಳ ನಿಧಿಯಾಗಿರುವ ನಿತ್ಯಸತ್ಯನಾಗಿರುವ ಪರಮಾತ್ಮನನ್ನೇ ನಮ್ಮ ಹೃದಯದಲ್ಲಿಯೇ ಶಾಸ್ತ್ರದಲ್ಲಿ ಹೇಳಿರುವಂತೆ ಉಪಾಸನೆಮಾಡಿ ಸಾಕ್ಷಾತ್ಕಾರಮಾಡಿಕೊಂಡು ಇಹದಲ್ಲಿಯೂ ಪರದಲ್ಲಿಯೂ ದುಃಖಸಂಸ್ಪರ್ಶವಿಲ್ಲದ ನಿತ್ಯಸುಖವನ್ನು ಎಲ್ಲೆಲ್ಲಿಯೂ ಪಡೆಯಬಹುದು. ಪರಮಾರ್ಥಜ್ಞಾನವನ್ನು ಸಂಪಾದಿಸಿಕೊಂಡು ನಿತ್ಯಮುಕ್ತಿಯನ್ನು ಪಡೆದುಕೊಳ್ಳುವ ಅವಕಾಶವೂ ಇರುತ್ತದೆ. ವೇದದಲ್ಲಿ ಶ್ರದ್ಧೆಯಿರುವವರು ಇತ್ತ ಕಡೆಗೆ ಮನಸ್ಸನ್ನು ಹೊರಳಿಸಬೇಕು.

## ೨೩. ಪುರಾಣದ ಮೂಲಕ ಅಧ್ಯಾತ್ಮವಿದ್ಯೆ

(13-9-64)

ಭಗವತ್ಪಾದಾಚಾರ್ಯರವರ ಹಿಂದೆಯೇ ಅವರ ಸಂಪ್ರದಾಯದ ಕೆಲವರು ಆಚಾರ್ಯರು ಆಗಿಹೋಗಿದ್ದರು. '**ಯೈರಿಮೇ ಗುರುಭಿಃ ಪೂರ್ವಂ ಪದವಾಕ್ಯ ಪ್ರಮಾಣತಃ । ವ್ಯಾಖ್ಯಾತಾಃ ಸರ್ವವೇದಾನ್ತಾಸ್ತಾನ್ನಿತ್ಯಂ ಪ್ರಣತೋಽಸ್ಮ್ಯಹಮ್ ॥**' ಪೂರ್ವದಲ್ಲಿ ಯಾವ ಗುರುಗಳು ಪದ (ವ್ಯಾಕರಣ), ವಾಕ್ಯ (ಮೀಮಾಂಸಾ, ನ್ಯಾಯ), ಪ್ರಮಾಣ (ಶ್ರುತ್ಯಾದಿಪ್ರಮಾಣಗಳು) - ಇವುಗಳನ್ನನುಸರಿಸಿ ಉಪನಿಷತ್ತುಗಳೆಲ್ಲಕ್ಕೂ ವ್ಯಾಖ್ಯಾನವನ್ನು ಮಾಡಿದ್ದರೋ ಅವರನ್ನು ನಿತ್ಯವೂ ನಮಸ್ಕರಿಸುತ್ತೇನೆ - ಎಂದು ಆಚಾರ್ಯರು ತೈತ್ತಿರೀಯಭಾಷ್ಯದಲ್ಲಿ ಹಿಂದಿನ ಆಚಾರ್ಯರುಗಳನ್ನು ಸ್ಮರಿಸಿಕೊಂಡಿರುತ್ತಾರೆ. ಆದರೆ ಈಗ ಆಚಾರ್ಯರು ಮಾಡಿರುವ ಸ್ತುತ್ಯಕಾರ್ಯವನ್ನು ಒಂದು ಶ್ಲೋಕವು ನೆನಪಿಗೆ ಕೊಡುತ್ತಿದೆ ; '**ಶ್ರುತಿಸ್ಮೃತಿಪುರಾಣಾನಾಮಾಲಯಂ ಕರುಣಾಲಯಮ್। ನಮಾಮಿ ಭಗವತ್ಪಾದಶಙ್ಕರಂ ಲೋಕಶಙ್ಕರಮ್ ॥** ' ಶ್ರುತಿ, ಸ್ಮೃತಿ , ಪುರಾಣ - ಇವುಗಳಿಗೆ ಆಲಯರಾಗಿದ್ದುಕೊಂಡಿರುವ ಕರುಣಾಸ್ಥಾನರಾಗಿರುವ, ಲೋಕಕ್ಕೆಲ್ಲ ಮಂಗಲವನ್ನುಂಟುಮಾಡುವ ಶಂಕರಭಗವತ್ಪಾದರನ್ನು ನಮಸ್ಕರಿಸುತ್ತೇನೆ - ಎಂದು ಈ ಶ್ಲೋಕದ ಅರ್ಥ. ಕೇವಲ ಶ್ರುತಿಗಳಿಗೆ ವ್ಯಾಖ್ಯಾನಮಾಡಿದವರು ಹಿಂದಿನ ಆಚಾರ್ಯರುಗಳು . ವೈದಿಕಸಂಪ್ರದಾಯವನ್ನು ಬಿಡದೆ ಅದಕ್ಕನುಗುಣವಾಗಿ ಸ್ಮೃತಿಗಳನ್ನೂ ಪ್ರಮಾಣಗಳನ್ನೂ ಹೊಂದಿಸಿ ತೋರಿಸಿದ್ದು ಆಚಾರ್ಯರು ಮಾಡಿದ ಮಹಾಕಾರ್ಯ. ಯಾರಿಗೆ ವೇದಾಧಿಕಾರವಿಲ್ಲವೋ ಅವರಿಗೂ ಅಧ್ಯಾತ್ಮವಿದ್ಯೆಯಲ್ಲಿ

ಅಧಿಕಾರವಿದೆ ಎಂಬುದನ್ನು ತೋರಿಸಿಕೊಟ್ಟು ಲೋಕಕ್ಕೆಲ್ಲ ಕಲ್ಯಾಣವನ್ನುಂಟುಮಾಡಿದ ಮಹಾತ್ಮರು , ಈ ಆಚಾರ್ಯರು.

ಉಪನಿಷತ್ತುಗಳ ಅಭಿಪ್ರಾಯವನ್ನು ನ್ಯಾಯಗಳಿಂದ ನಿರ್ಣಯಮಾಡುವದಕ್ಕಾಗಿ ಬಾದರಾಯಣರು ಶಾರೀರಕಮೀಮಾಂಸಾಶಾಸ್ತ್ರವನ್ನು ಬರೆದಿರುತ್ತಾರಷ್ಟೆ ? ಅದರಲ್ಲಿ ಅಪಶೂದ್ರಾಧಿಕರಣವೆಂಬುದೊಂದು ಚರ್ಚಾಭಾಗವಿದೆ. ಶಾಸ್ತ್ರವು ಮನುಷ್ಯರಿಗಾಗಿ ಬಂದಿರುತ್ತದೆ - ಎಂಬುದು ನಿಯಮವಾದರೂ ದೇವತೆಗಳಿಗೂ ಅಧ್ಯಾತ್ಮವಿದ್ಯೆಗೆ ಅಧಿಕಾರವಿದೆ ಎಂಬುದು ಇಂದ್ರವಿರೋಚನರು ಪ್ರಜಾಪತಿಯಲ್ಲಿ ಬ್ರಹ್ಮಚರ್ಯೆಯನ್ನು ಮಾಡಿ ತತ್ತ್ವವಿಚಾರಮಾಡಿದರು - ಎಂಬ ಛಾಂದೋಗ್ಯದ ಪ್ರಮಾಣದಿಂದ ಗೊತ್ತಾಗುತ್ತದೆ ; ಋಷಿಗಳಿಗೂ ಈ ವಿದ್ಯೆಯಲ್ಲಿ ಅಧಿಕಾರ ವುಂಟೆಂಬುದು ಭೃಗುವು ತಂದೆಯಾದ ವರುಣನಿಂದ ಬ್ರಹ್ಮವಿದ್ಯೆಯನ್ನು ಕಲಿತುಕೊಂಡನು ಎಂಬ ತೈತ್ತೀರಿಯಶ್ರುತಿವಾಕ್ಯಪ್ರಮಾಣದಿಂದ ತಿಳಿದುಬರುತ್ತದೆ. ದೇವತೆಗಳೂ ಋಷಿಗಳೂ ಕೆಲಕೆಲವು ಸಿದ್ಧಿಗಳನ್ನು ಪಡೆದಿದ್ದರೂ ಅವರಿಗೆ ದೊರಕುವ ಫಲವು ಅಧ್ಯಾತ್ಮವಿದ್ಯೆಯ ಫಲವಾದ ಮೋಕ್ಷಕ್ಕಿಂತ ಕಡಿಮೆ ಎಂಬುದು ಈ ವಿಚಾರದಿಂದ ಏರ್ಪಡುತ್ತದೆ. ಇದರಂತೆ ಮನುಷ್ಯರಲ್ಲಿ ದ್ವಿಜರಿಗಾಗಿ ಬ್ರಹ್ಮವಿದ್ಯೆಯನ್ನು ಉಪದೇಶಿಸಿರುತ್ತದೆಯಾದರೂ ಶೂದ್ರರಿಗೂ ಏತಕ್ಕೆ ಅಧಿಕಾರವಿರಬಾರದು ? - ಎಂಬ ಶಂಕೆಯನ್ನು ಅಪಶೂದ್ರಾಧಿಕರಣದಲ್ಲಿ ಎಬ್ಬಿಸಿರುತ್ತದೆ. ಶೂದ್ರನು ಯಜ್ಞವನ್ನು ಮಾಡಕೂಡದು - ಎಂದು ನಿಷೇಧವಾಕ್ಯವಿದೆ ; ಆದರೆ ವಿದ್ಯೆಯನ್ನು ಸಂಪಾದಿಸಿಕೊಳ್ಳಬಾರದು - ಎಂದೇನೂ ವಾಕ್ಯವಿಲ್ಲ - ಎಂಬುದೇ ಶಂಕೆಗೆ ಕಾರಣ. ಈ ವಿಷಯಕ್ಕೆ ಈ ಅಧಿಕರಣದಲ್ಲಿ ಕೊಟ್ಟಿರುವ ತೀರ್ಪು ಏನೆಂದರೆ ಶೂದ್ರನಿಗೆ ಅಧ್ಯಯನಾಧಿಕಾರ ವಿಲ್ಲವಾದ್ದರಿಂದಲೂ ವಿದ್ಯೆಗೆ ಬೇಕಾದ ಉಪನಯನಾದಿಗಳಲ್ಲಿಯೂ ಅಧಿಕಾರ ವಿಲ್ಲವಾದ್ದರಿಂದಲೂ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿಲ್ಲ.

ಈ ಸಂದರ್ಭದಲ್ಲಿ ಶಂಕರಾಚಾರ್ಯರು ಅಧಿಕರಣಭಾಷ್ಯದ ಕೊನೆಯಲ್ಲಿ ಹೀಗೆಂದು ಬರೆದಿರುತ್ತಾರೆ : ''ವಿದುರ, ಧರ್ಮವ್ಯಾಧ , ಮೊದಲಾದವರಿಗೆ ಪೂರ್ವ ಜನ್ಮದಲ್ಲಿ ಮಾಡಿದ ಪುಣ್ಯಕರ್ಮದ ಸಂಸ್ಕಾರದಿಂದ ಈ ಜನ್ಮದಲ್ಲಿ ಜ್ಞಾನವು ಉತ್ಪತ್ತಿಯಾಗಿರುತ್ತದೆಯಷ್ಟೆ ? ಅವರಿಗೆ ಜ್ಞಾನದ ಫಲವಾದ ಮೋಕ್ಷವು ಬರಲಿಲ್ಲವೆನ್ನುವದಕ್ಕೆ ಆಗುವದಿಲ್ಲ. ಏಕೆಂದರೆ ಜ್ಞಾನಕ್ಕೆ ಫಲವು ಅವಶ್ಯವಾಗಿ ಆಗುತ್ತದೆ. ಇದಲ್ಲದೆ **'ಶ್ರಾವಯೇಚ್ಚತುರೋ ವರ್ಣಾನ್ ಕೃತ್ವಾ ಬ್ರಾಹ್ಮಣಮಗ್ರತಃ'** ಎಂಬ ಭಾರತವಚನದಲ್ಲಿ ನಾಲ್ಕುವರ್ಣದವರಿಗೂ ಇತಿಹಾಸಪುರಾಣಗಳನ್ನು ಕಲಿತುಕೊಳ್ಳಲು ಅಧಿಕಾರವಿರುತ್ತದೆಯಾದ್ದರಿಂದಲೂ ಶೂದ್ರರಿಗೂ ವಿದ್ಯೆಯಲ್ಲಿ ಅಧಿಕಾರವುಂಟು.''

ಭಾಷ್ಯಕಾರರ ಈ ಅಭಿಪ್ರಾಯವು ಈಗ್ಗೆ ಬಹಳ ಮುಖ್ಯವಾಗಿರುತ್ತದೆ. ಏಕೆಂದರೆ ಅಧ್ಯಯನಾದಿಗಳನ್ನು ಮಾಡದೆ ಇರುವ ದ್ವಿಜರೂ ಶೂದ್ರರೂ ಈ ಕಾಲಕ್ಕೆ ಹೆಚ್ಚಿನ ಸಂಖ್ಯೆಯಲ್ಲಿರುತ್ತಾರೆ. ಇವರಿಗೆಲ್ಲ ವೇದಪೂರ್ವಕವಾದ ಕರ್ಮಗಳಲ್ಲಿ ಹೇಗೆ ಅಧಿಕಾರವಿಲ್ಲವೋ ಹಾಗೆಯೇ ಬ್ರಹ್ಮವಿದ್ಯೆಯಲ್ಲಿಯೂ ಅಧಿಕಾರವಿಲ್ಲವೆಂದೇ ಅಪಶೂದ್ರಾಧಿಕರಣದ ನ್ಯಾಯದಿಂದ ಏರ್ಪಡುತ್ತದೆ. ಹೀಗಿದ್ದರೂ '**ಇತಿಹಾಸ ಪುರಾಣಾಭ್ಯಾಂ ವೇದಾರ್ಥಮುಪಬೃಂಹಯೇತ್**' ಇತಿಹಾಸಪುರಾಣಗಳಿಂದ ವೇದದ ಅರ್ಥವನ್ನು ಪುಷ್ಟಿಗೊಳಿಸಿಕೊಳ್ಳಬೇಕು ಎಂಬ ಉಕ್ತಿಯಂತೆ ಅವರಿಗೂ ವೇದಾರ್ಥವಾದ ಅಧ್ಯಾತ್ಮವಿದ್ಯೆಗೆ ಪ್ರವೇಶವಾಗಬಹುದು ಎಂಬ ಸಿದ್ಧಾಂತವು ಈ ಭಾಷ್ಯವಾಕ್ಯದಿಂದ ಸಿದ್ಧವಾಗುತ್ತದೆ.

ಕಲಿಯುಗದಲ್ಲಿ ಪಾಪಬಾಹುಲ್ಯದಿಂದ ಆಚಾರದ ಹ್ರಾಸವು ಆಗುವದು ಸ್ವಾಭಾವಿಕವಾಗಿದೆಯಾದರೂ ವೇದದಲ್ಲಿ ಒಂದಿಷ್ಟು ಅಧ್ಯಯನವನ್ನು ಮಾಡಿಕೊಂಡು ಕೃಷ್ಯಾದಿಗಳಿಂದ ಜೀವನವನ್ನು ಮಾಡಿಕೊಂಡರೂ ದ್ವಿಜರಿಗೆ ಆಚಾರಭ್ರಷ್ಟತೆ ಯುಂಟಾಗಲಾರದು ಎಂದು ತಿಳಿಯಿಸುವದಕ್ಕಾಗಿ '**ಯುಗೇ ಯುಗೇ ಚ ಯೇ ಧರ್ಮಾಸ್ತತ್ರ ತತ್ರ ಚ ಯೇ ದ್ವಿಜಾಃ । ತೇಷಾಂ ನಿನ್ದಾ ನ ಕರ್ತವ್ಯಾ ಯುಗರೂಪಾ ಹಿ ತೇ ದ್ವಿಜಾಃ ॥**' (ಪರಾ.ಸ್ಮೃ. ೧-೩೩೧/೨) ಆಯಾ ಯುಗದಲ್ಲಿರುವ ಧರ್ಮನ್ಯೂನತೆಯನ್ನೂ ಅವುಗಳನ್ನನುಸರಿಸುವ ದ್ವಿಜರನ್ನೂ ನಿಂದಿಸತಕ್ಕದ್ದಲ್ಲ - ಎಂಬ ವಚನದಂತೆ ಕಾಲಕ್ಕೆ ತಕ್ಕ ಕರ್ಮಗಳನ್ನು ಮಾಡಿಕೊಂಡು ಚಿತ್ತಶುದ್ಧಿಯನ್ನು ಹೊಂದಿ ಅಧ್ಯಾತ್ಮವಿದ್ಯೆಯನ್ನು ಸಂಪಾದಿಸಿಕೊಳ್ಳಬಹುದು - ಎಂಬ ಯುಕ್ತಿಯೂ ಈ ಭಾಷ್ಯವಚನದಿಂದಲೇ ದೊರಕುತ್ತದೆ.

ಇನ್ನೊಂದು ವಿಷಯ. ಪತ್ನೀದ್ರವ್ಯಾದಿಸಂಪತ್ತುಗಳಿಲ್ಲದ ಕಾರಣದಿಂದ ಗೊತ್ತಾದ ಯಾವದಾದರೊಂದು ಆಶ್ರಮದಲ್ಲಿರಲು ಆಗದೆ ಇರುವ ವಿಧುರಾದಿಗಳಿಗೂ '**ಪುರುಷಮಾತ್ರಸಂಬನ್ಧಿಭಿರ್ಜಪೋಪವಾಸದೇವತಾರಾಧನಾದಿಭಿರ್ಧರ್ಮ ವಿಶೇಷೈಃ ಅನುಗ್ರಹೋ ವಿದ್ಯಾಯಾಃ ಸಂಭವತಿ ॥**' (ಸೂ. ಭಾ. ೩-೪-೩೮) ಎಂಬ ಸೂತ್ರಭಾಷ್ಯವಾಕ್ಯಪ್ರಾಮಾಣ್ಯದಿಂದ ಮಿಕ್ಕ ಕರ್ಮಗಳನ್ನು ಮಾಡಲಾರದವ ನಿಗೂ ಜಪ, ಉಪವಾಸ, ದೇವತಾರಾಧನೆ - ಮುಂತಾದ ಧರ್ಮ ವಿಶೇಷಗಳಿಂದಲೇ ವಿದ್ಯೆಗೆ ತಕ್ಕ ಯೋಗ್ಯತೆ ಬರಬಹುದೆಂಬ ಸಿದ್ಧಾಂತವು ಏರ್ಪಡುತ್ತದೆ. ಇದೇ ನ್ಯಾಯವನ್ನನುಸರಿಸಿದರೆ, ಈಗಿನ ಕಾಲದ ಜನರುಗಳಿಗೆ ವರ್ಣಾಶ್ರಮದ ವ್ಯವಸ್ಥೆ ತಪ್ಪಿಹೋಗಿದೆಯಾದರೂ ಅವರಿಗೂ ಉಪಾಯಾಂತರದಿಂದ ಅಧ್ಯಾತ್ಮವಿದ್ಯೆಗೆ

ಅವಕಾಶವಿರಬಹುದೆಂದಾಗುತ್ತದೆ. ಈಗಿನ ಕಾಲಕ್ಕಿಂತ ಹಿಂದಿನವರು ಹೆಚ್ಚಾಗಿ ಕರ್ಮನಿಷ್ಠರೂ ಮೇಧಾವಂತರೂ ತತ್ತ್ವವಿಚಾರಪ್ರಿಯರೂ ಆಗಿದ್ದರೆಂಬುದು ಆಧುನಿಕವಿದ್ಯಾವಂತರಿಗೆ ಒಪ್ಪಾಗಲಾರದು. ಈಗ ವಿಜ್ಞಾನಶಾಸ್ತ್ರವೇ ಮುಂತಾದವುಗಳಿಂದ ಹೊಸಹೊಸ ಶೋಧಗಳನ್ನು ಮಾಡುತ್ತಿರುವ ಮೇಧಾವಂತ ರಿದಾರೆಂಬುದು ನಿಜ. ಆದರೆ ಹಿಂದಿನ ಕಾಲದವರು ನಮಗಿಂತ ಹೆಚ್ಚಿನ ಕರ್ಮನಿಷ್ಠೆ, ಯೋಗಾಭ್ಯಾಸ, ವೈರಾಗ್ಯ, ಅಧ್ಯಾತ್ಮಿಕಶಕ್ತಿ – ಮುಂತಾದವುಗಳಿಂದ ಕೂಡಿದ್ದ ರೆಂಬುದನ್ನು ಅಲ್ಲಗಳೆಯುವದು ಆಗಲಾರದು. ಆಚಾರ್ಯರು ಈ ವಿಷಯದಲ್ಲಿ ಹೀಗೆಂದಿದಾರೆ :

''ಈಗ ನಮಗೆ ದೇವತೆಗಳು ಪ್ರತ್ಯಕ್ಷವಾಗಿ ಕಾಣಿಸದೆ ಇದ್ದರೂ ಹಿಂದಿನವರು ಕಂಡಿರಬಹುದಾಗಿದೆ. ಆದ್ದರಿಂದಲೇ ವ್ಯಾಸಾದಿಗಳು ದೇವತೆಗಳೇ ಮೊದಲಾದವರೊಡನೆ ಪ್ರತ್ಯಕ್ಷವಾಗಿ ವ್ಯವಹರಿಸುತ್ತಿದ್ದರೆಂದು ಸ್ಮೃತಿಗಳಲ್ಲಿದೆ. ಈಗಿನವರಂತೆ ಹಿಂದಿನವರಿಗೂ ದೇವತಾದಿಗಳೊಡನೆ ವ್ಯವಹರಿಸುವ ಸಾಮರ್ಥ್ಯವಿರಲಿಲ್ಲವೆನ್ನಬೇಕು – ಎಂದು ಯಾವನು ಅಭಿಪ್ರಾಯಪಡುವನೋ ಅವನು ಜಗದ್ವೈಚಿತ್ರ್ಯವನ್ನೇ ಅಲ್ಲಗಳೆದವನಾಗುವನು. ಆಗ ಈಗಿನಂತೆ ಹಿಂದೆಯೂ ಸಾರ್ವಭೌಮರಾಜನಿರಲಿಲ್ಲವೆನ್ನಬಹುದಾಗುವದು ; ಆಗ ಶಾಸ್ತ್ರದಲ್ಲಿ 'ರಾಜಸೂಯ'ಯಾಗವೇ ಮುಂತಾದವುಗಳನ್ನು ವಿಧಿಸಿರುವದು ವ್ಯರ್ಥ ವಾಗುತ್ತದೆ. ಈಗಿನಂತೆ ಕಾಲಾಂತರದಲ್ಲಿಯೂ ವರ್ಣಾಶ್ರಮ ಧರ್ಮಗಳು ಬಲುಮಟ್ಟಿಗೆ ಅವ್ಯವಸ್ಥಿತವಾಗಿಯೇ ಇದ್ದವೆಂದೂ ಅಂಥವನು ಹೇಳಬಹುದಾಗುವದು. ಆಗ ವರ್ಣಾಶ್ರಮಧರ್ಮಗಳನ್ನು ವ್ಯವಸ್ಥೆಗೊಳಿಸಿ ಹೇಳಿರುವ ಶಾಸ್ತ್ರವು ಅನರ್ಥಕ ವೆಂದಾಗುವದು. ಆದ್ದರಿಂದ ಧರ್ಮವು ಹೆಚ್ಚಾಗಿದ್ದದ್ದರಿಂದ ಹಿಂದಿನವರು ದೇವಾದಿ ಗಳೊಡನೆ ಪ್ರತ್ಯಕ್ಷವಾಗಿ ವ್ಯವಹರಿಸುತ್ತಿದ್ದರು ಎಂಬುದೇ ಯುಕ್ತವಾಗಿರುತ್ತದೆ.''

ಈ ಉದಾಹೃತವಾಕ್ಯದಿಂದ ಆಚಾರ್ಯರ ಕಾಲಕ್ಕೇ ವರ್ಣಾಶ್ರಮಧರ್ಮಗಳು ಅವ್ಯವಸ್ಥಿತವಾಗುವದಕ್ಕೆ ಬಂದಿದ್ದವೆಂದೂ ಈಗ್ಗೆ ಇನ್ನಷ್ಟು ಕೆಟ್ಟು ಕಲೆಬೆರಕೆಯಾಗಿವೆ ಎಂದೂ ಎನ್ನಬೇಕಾಗುವದು. ವರ್ಣಾಶ್ರಮಧರ್ಮಗಳು ನಮ್ಮ ಬಾಲ್ಯದಲ್ಲಿದ್ದಷ್ಟು ಮಟ್ಟಿಗೂ ಈಗ್ಗೆ ವ್ಯವಸ್ಥಿತವಾಗಿರದೆ ಅನಾಚಾರದುರಾಚಾರಗಳು ಬಳಕೆಯಲ್ಲಿ ಬರುತ್ತಿರುವದು ವೃದ್ಧರಾಗಿರುವವರ ಅನುಭವದಲ್ಲಿ ಈಗಲೂ ಇದ್ದೂ ಇದೆ. ಆದ್ದರಿಂದ ಅವರಿಗೆಲ್ಲ ಅಧ್ಯಾತ್ಮವಿದ್ಯೆಯಲ್ಲಿ ಯಾವ ಅಧಿಕಾರವೂ ಇಲ್ಲವೆಂದು ಹೇಳುವದಕ್ಕಾಗುವದಿಲ್ಲ. 'ಇತಿಹಾಸಪುರಾಣಗಳಿಂದ ವೇದಾರ್ಥವನ್ನು ಬಲಪಡಿಸಿ ಕೊಳ್ಳಬೇಕು' –ಎಂಬ ವಚನವೂ ಇದಕ್ಕೆ ಬೆಂಬಲವನ್ನು ಕೊಡುತದೆ. ಭಗವದ್ಗೀತೆಯಲ್ಲಿ

ಅಪಿ ಚೇತ್ ಸುದುರಾಚಾರೋ ಭಜತೇ ಮಾಮನನ್ಯಭಾಕ್ ।
ಸಾಧುರೇವ ಸ ಮನ್ತವ್ಯಃ ಸಮ್ಯಗ್ವ್ಯವಸಿತೋ ಹಿ ಸಃ ॥
ಕ್ಷಿಪ್ರಂ ಭವತಿ ಧರ್ಮಾತ್ಮಾ ಶಶ್ವಚ್ಛಾನ್ತಿಂ ನಿಗಚ್ಛತಿ ।
ಕೌನ್ತೇಯ ಪ್ರತಿಜಾನೀಹಿ ನ ಮೇ ಭಕ್ತಃ ಪ್ರಣಶ್ಯತಿ ॥
ಮಾಂ ಹಿ ಪಾರ್ಥ ವ್ಯಪಾಶ್ರಿತ್ಯ ಯೇಽಪಿ ಸ್ಯುಃ ಪಾಪಯೋನಯಃ ।
ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾಸ್ತೇಽಪಿ ಯಾನ್ತಿ ಪರಾಂ ಗತಿಮ್ ॥
ಕಿಂ ಪುನರ್ಬ್ರಾಹ್ಮಣಾಃ ಪುಣ್ಯಾ ಭಕ್ತಾ ರಾಜರ್ಷಯಸ್ತಥಾ ।

ಗೀ. ೯–೩೦ ರಿಂದ ೩೩.

ಎಂದಿರುವದನ್ನು ನೋಡಿದರೆ ವೈದಿಕಕರ್ಮವನ್ನಾಗಲಿ, ಉಪಾಸನೆಯನ್ನಾಗಲಿ ಮಾಡುವ ಅಧಿಕಾರವಿಲ್ಲದವರು ಕೂಡ ಗಂಡಸರಾಗಲಿ, ಹೆಂಗಸರಾಗಲಿ, ಬ್ರಾಹ್ಮಣನಾಗಲಿ ಬ್ರಾಹ್ಮಣೇತರನಾಗಲಿ – ತನ್ನತನ್ನ ಧರ್ಮವನ್ನು ಈ ಕಾಲಕ್ಕೆ ಸಾಧ್ಯವಾದಷ್ಟುಮಟ್ಟಿಗೆ ಮಾಡಿಕೊಂಡು ಭಗವಂತನನ್ನು ಭಜಿಸಿದರೆ ಅವನಿಗೂ ಸದ್ಗತಿಯುಂಟೇ ಉಂಟು ಎಂದು ಧೈರ್ಯದಿಂದ ಹೇಳಬಹುದಾಗುತ್ತದೆ. ಭಗವದ್ಭಕ್ತರಿಗೆ ಎಂದಿಗೂ ಕೇಡಾಗಲಾರದು.

ಹೀಗಿರುವದರಿಂದ ಈಗಿನವರಾದ ನಾವುಗಳು ನಮಗೆ ವೇದೋಕ್ತವಾದ ಯಜ್ಞಾದಿಗಳನ್ನು ಮಾಡುವದಕ್ಕೆ ಅವಕಾಶವಿಲ್ಲವಲ್ಲ , ಅಲ್ಲಿ ಹೇಳಿರುವ ಮಹಾ ಮಹೋಪಾಸನೆಗಳನ್ನು ಮಾಡುವದಕ್ಕೂ ಅವಕಾಶವಿಲ್ಲವಲ್ಲ ! – ಎಂದು ಪರಿತಪಿಸುವದಕ್ಕೆ ಕಾರಣವಿಲ್ಲ ಅಧಿಕಾರವಿದ್ದವರು ಅವಶ್ಯವಾಗಿ ಅಧ್ಯಯನವನ್ನು ಮಾಡಲಿ, ವೇದಾರ್ಥವನ್ನು ತಿಳಿದುಕೊಳ್ಳುವದಕ್ಕೂ ಯತ್ನಿಸಲಿ, ವೇದಭಾಷೆಯು ತಿಳಿದುಕೊಳ್ಳುವದಕ್ಕೆ ಕಷ್ಟವಾಗಿರುತ್ತದೆಯಾದರೂ ಪುರಾಣಗಳನ್ನು ಅರ್ಥಮಾಡಿಕೊಳ್ಳುವಷ್ಟು ಸಂಸ್ಕೃತವನ್ನು ಎಲ್ಲರೂ ಅವಶ್ಯವಾಗಿ ಕಲಿಯಬಹುದಾಗಿದೆ. ಸಂಸ್ಕೃತವು ಅಮರಭಾಷೆ . ನರನೇ ಅಮರವಾದ ಬ್ರಹ್ಮವು ಎಂದು ತಿಳಿಯಹೇಳುವ ಉಪನಿಷತ್ತುಗಳು ಆ ಭಾಷೆಯಲ್ಲಿವೆ , ಅಧ್ಯಾತ್ಮವಿದ್ಯೆಯು ಉಪನಿಷತ್ತುಗಳಲ್ಲಿಯೇ ಅಲ್ಲದೆ, ಅದೇ ಅಭಿಪ್ರಾಯವನ್ನು ಲಲಿತವಾದ ಭಾಷೆಯಿಂದ ಕಲಿಯಿಸುವ ಪುರಾಣಗಳಲ್ಲೂ ಇರುತ್ತದೆ . ಅಧ್ಯಾತ್ಮವಿದ್ಯೆಯೂ ಅಮರವಾದದ್ದು ; ಎಲ್ಲಾ ಕಾಲದವರಿಗೂ ಅನ್ವಯಿಸುವಹಾಗಿದೆ. ಅದು ಸಂಸ್ಕೃತದಲ್ಲಿದೆ. ಸಂಸ್ಕೃತವು ಸ್ವಲ್ಪಮಟ್ಟಿಗೆ ಬಂದರೆ ಉಪನಿಷತ್ತುಗಳಲ್ಲಿರುವ ಅಧ್ಯಾತ್ಮವಿದ್ಯೆಯ ವಿವರವನ್ನೇ ಪುರಾಣದಿಂದಲೂ ತಿಳಿದುಕೊಳ್ಳಬಹುದೆಂಬುದನ್ನು ಉದಾಹರಿಸುವದಕ್ಕಾಗಿ

ಭಾಗವತಪುರಾಣದಿಂದ ಕೆಲವು ಶ್ಲೋಕಗಳನ್ನು ಆರಿಸಿಕೊಂಡು ಅರ್ಥವಿವರಣೆಯನ್ನು ಮಾಡುವೆನು. ಆ ಪುರಾಣ ಶ್ಲೋಕ ಹೀಗಿದೆ :

ಶ್ರೀಮದ್ಭಾಗವತಂ ಪುರಾಣಮಮಲಂ ಯದ್ವೈಷ್ಣವಾನಾಂ ಪ್ರಿಯಂ
ಯಸ್ಮಿನ್ ಪಾರಮಹಂಸ್ಯಮೇಕಮಮಲಂ ಜ್ಞಾನಂ ಪರಂ ಗೀಯತೇ ।
ತತ್ರ ಜ್ಞಾನವಿರಾಗಭಕ್ತಿಸಹಿತಂ ನೈಷ್ಕರ್ಮ್ಯಮಾವಿಷ್ಕೃತಮ್ ತಚ್ಛೃಣ್ವನ್
ವಿಪಠನ್ ವಿಚಾರಣಪರೋ ಭಕ್ತ್ಯಾ ವಿಮುಚ್ಯೇನ್ನರಃ ॥

ಭಾಗ. ೧೨-೧೩ - ೧೮.

ಶ್ರೀಮದ್ಭಾಗವತವೆಂಬ ಶ್ರೇಷ್ಠವಾದ ಪುರಾಣವು ವಿಷ್ಣುಭಕ್ತರಿಗೆ ಪ್ರಿಯವಾದದ್ದು. ಇದರಲ್ಲಿ ಪರಮಹಂಸರಿಗೆ ಬೇಕಾದ ಪರಮಜ್ಞಾನವನ್ನೂ ಜ್ಞಾನವಿರಾಗಭಕ್ತಿಗಳ ಸಹಿತವಾಗಿರುವ ನೈಷ್ಕರ್ಮ್ಯವನ್ನೂ ಇಲ್ಲಿ ಹೊರಪಡಿಸಿರುತ್ತದೆ. ಅದರ ಶ್ರವಣ , ಪಠನ, ವಿಚಾರ - ಇವುಗಳನ್ನು ಭಕ್ತಿಯಿಂದ ಮಾಡಿದರೆ ಮನುಷ್ಯರು ಮುಕ್ತರಾಗುತ್ತಾರೆ - ಎಂದು ಸ್ಪಷ್ಟವಾಗಿ ಹೇಳಿರುತ್ತದೆ. ಪ್ರಕೃತದಲ್ಲಿ ಈ ಶ್ಲೋಕಗಳನ್ನು ಕೇಳಿರಿ :

ಭಾವಾದ್ವೈತಂ ಕ್ರಿಯಾದ್ವೈತಂ ದ್ರವ್ಯಾದ್ವೈತಂ ತಥಾऽತ್ಮನಃ ।
ವರ್ತಯನ್ ಸ್ವಾನುಭೂತ್ಯೇಹ ತ್ರೀನ್ ಸ್ವಪ್ನಾನ್ ಧುನುತೇ ಮುನಿಃ ॥
ಕಾರ್ಯಕಾರಣವಸ್ತ್ವೈಕ್ಯಮರ್ಶನಂ ಪಟತನ್ತುವತ್ ।
ಅವಸ್ತುತ್ವಾದ್ ವಿಕಲ್ಪಸ್ಯ ಭಾವಾದ್ವೈತಂ ತದುಚ್ಯತೇ ॥
ಯದ್ ಬ್ರಹ್ಮಣಿ ಪರೇ ಸಾಕ್ಷಾತ್ ಸರ್ವಕರ್ಮಸಮರ್ಪಣಮ್ ।
ಮನೋವಾಕ್ತನುಭಿಃ ಪಾರ್ಥ ಕ್ರಿಯಾದ್ವೈತಂ ತದುಚ್ಯತೇ ॥
ಆತ್ಮಜಾಯಾಸುತಾದೀನಾಮನ್ಯೇಷಾಂ ಸರ್ವದೇಹಿನಾಮ್ ।
ಯತ್ ಸ್ವಾರ್ಥಕಾಮಯೋರೈಕ್ಯಂ ದ್ರವ್ಯಾದ್ವೈತಂ ತದುಚ್ಯತೇ ॥

ಭಾಗ. ೭-೧೫ -೬೨ ರಿಂದ ೬೫.

ಇಲ್ಲಿ "ಭಾವಾದ್ವೈತ, ಕ್ರಿಯಾದ್ವೈತ, ದ್ರವ್ಯಾದ್ವೈತ - ಇವುಗಳನ್ನು ಅನುಭವಕ್ಕೆ ಅನುಗುಣವಾಗಿ ಅರಿತುಕೊಂಡರೆ ಮೂರು ಸ್ವಪ್ನಗಳನ್ನೂ - 'ತ್ರಯಃ ಸ್ವಪ್ನಾಃ '- ಎಂದಿರುವ ಶ್ರುತಿಯಂತೆ ಸ್ವಪ್ನವೇ ಆಗಿರುವ ಮೂರು ಅವಸ್ಥೆಗಳನ್ನು - ಕೊಡವಿಕೊಳ್ಳಬಹುದು " ಎಂದು ಹೇಳಿರುತ್ತದೆ. ಪಟತನ್ತುನ್ಯಾಯದಿಂದ - ಬಟ್ಟೆಯು ಚೆನ್ನಾಗಿ ನೋಡಿದಾಗ ನೂಲುಗಳೇ ಆಗಿರುವಂತೆ - ಕಾರ್ಯವಾದ ಈ ಜಗತ್ತೆಲ್ಲವೂ ವಿಕಲ್ಪಮಾತ್ರವಾಗಿರುವದರಿಂದ ಅವಸ್ತುವಾಗಿದೆ, ಕಾರಣವಾದ ಆತ್ಮವಸ್ತುವೇ

ಪರಮಾರ್ಥವಾಗಿದೆ - ಎಂದು ಅನುಭವಕ್ಕೆ ತಂದುಕೊಳ್ಳುವದು ಭಾವಾದ್ವೈತವು. ಈ ಜಗತ್ತೇ ಸತ್ಯವೆಂದೂ ಆತ್ಮವೆಂಬುದು ಬೇರೆಯಿಲ್ಲವೆಂದೂ ಬಗೆಯುವ ಅಜ್ಞಾನಿಗಳ ಅಭಿಪ್ರಾಯವು ಜ್ಞಾನಿಗಳ ದೃಷ್ಟಿಯಲ್ಲಿ ಕೇವಲ ಕನವರಿಕೆಯವರ ತಿಳಿವಳಿಕೆ ಯಾಗಿರುತ್ತದೆ. ಅವರ ದೃಷ್ಟಿಯಲ್ಲಿ ಆತ್ಮನೊಂದು ಹೊರತು ಮಿಕ್ಕ ಅನಾತ್ಮವಾದ ಜಗತ್ತೆಂಬುದು ಇರುವದೇ ಇಲ್ಲ. 'ಯಾ ನಿಶಾ ಸರ್ವಭೂತಾನಾಂ ತಸ್ಯಾಂ ಜಾಗರ್ತಿ ಸಂಯಮೀ ॥' ಎಂಬ ಗೀತಾಶ್ಲೋಕದ ಅಭಿಪ್ರಾಯವೇ ಇದು. ಭಾವಾದ್ವೈತಾನುಭವದಿಂದ ಜಗದ್ಭ್ರಮೆಯು ನಾಶವಾಗುವದು.

ಇನ್ನು ಕ್ರಿಯಾದ್ವೈತ . ಮನಸ್ಸು , ಇಂದ್ರಿಯಗಳು , ಶರೀರಗಳು - ಇವು ಗಳಲ್ಲಿರುವ ಸರ್ವಕ್ರಿಯೆಗಳನ್ನೂ ಪರಬ್ರಹ್ಮದಲ್ಲಿ ಸಮರ್ಪಣೆಮಾಡುವದು - ಎಂದರೆ ನಾನು ಶರೀರ, ಇಂದ್ರಿಯಗಳು , ಮನಸ್ಸು - ಇವುಗಳಲ್ಲಿ ಕಾಣುಬರುತ್ತಿರುವ ಕ್ರಿಯೆಗಳೆಲ್ಲ ಆ ಪರಮಾತ್ಮನ ಪ್ರೇರಣೆಯಿಂದಲೇ ಆಗುತ್ತಿರುವವು. ನಿಜವಾಗಿ ಎಂದೆಂದಿಗೂ ಕೂಟಸ್ಥನಾಗಿರುವ ಪರಮಾತ್ಮನಲ್ಲಿ ಎಲ್ಲಾ ಕ್ರಿಯೆಯೂ ಅಧ್ಯಸ್ಥವಾಗಿದೆ. ಸೂಜಿಗಲ್ಲಿನ ಶಕ್ತಿಯಿಂದ ಸೂಜಿಯು ಅಲುಗಾಡುವಂತೆ ಆತ್ಮನ ಸಾಂನಿಧ್ಯದಿಂದಲೇ ಎಲ್ಲಾ ಕ್ರಿಯೆಗಳೂ ಕಾಣುತ್ತಿರುವವು. ನಮ್ಮ ಕಾರ್ಯಕರಣಸಂಘಾತದಲ್ಲಿ ಕಾಣುತ್ತಿರುವ ವ್ಯಾಪಾರಗಳೆಲ್ಲವೂ ಆತ್ಮನ ಅನುಗ್ರಹದಿಂದಲೇ ಆಗುತ್ತಿವೆ. ಪರಮಾತ್ಮನ ಅನುಗ್ರಹವಿಲ್ಲದೆ ಸಮಷ್ಟಿಪ್ರಾಣಾತ್ಮನುಕೂಡ ಯಾವ ಕೆಲಸವನ್ನೂ ಮಾಡಲಾರನು - ಎಂಬ ಅನುಭವವುಂಟಾದರೆ ಕ್ರಿಯಾದ್ವೈತವಾಯಿತು. ಈ ಅನುಭವದಿಂದ ಸ್ವಪ್ನಭ್ರಮೆಯನ್ನು ತೊಲಗಿಸಿಕೊಂಡಂತೆ ಆಗುವದು. ಏಕೆಂದರೆ ಸ್ವಪ್ನದಂತೆ ಇಲ್ಲಿರುವ ಕ್ರಿಯೆಗಳೆಲ್ಲವೂ ನಿಜವಾಗಿ ಒಬ್ಬನೇ ಆತ್ಮನಲ್ಲಿ ಕಲ್ಪಿತವಾಗಿವೆ ಎಂಬ ನಿಶ್ಚಯವು ಇದರಿಂದ ಸಿದ್ಧಿಸುವದು.

ನಾನು , ಹೆಂಡತಿ, ಮಕ್ಕಳು - ಮುಂತಾದವರಿಗೆ ಬೇಕಾಗಿರುವ ಅರ್ಥಕಾಮ ಗಳು ಬೇರೆ, ಮಿಕ್ಕವರ ಯೋಗಕ್ಷೇಮವೇ ಬೇರೆ - ಎಂಬ ಭ್ರಾಂತಿಯು ಜನರಿಗೆಲ್ಲ ರಿಗೂ ಸ್ವಾಭಾವಿಕವಾಗಿರುತ್ತದೆ. ಈ ಭೇದಭಾವನೆಯು ಇರುವವರೆಗೂ ಅವರು 'ನಾನು' , 'ನನ್ನದು' ಎಂಬ ಅಜ್ಞಾನನಿದ್ರೆಯಲ್ಲಿ ಗೊರಕೆಯಿಡುತ್ತಿರುವರು. ನಾನು, ನನ್ನದು - ಎಂಬ ಮೋಹವು ಅನ್ಯಥಾಜ್ಞಾನವಾದ್ದರಿಂದ ಸ್ವಪ್ನವೇ ಆದರೂ ಇದಕ್ಕೆ ಬೀಜವಾದದ್ದು ಪರಮಾತ್ಮನಲ್ಲಿ ನಾನುನನ್ನದೆಂಬುದಿಲ್ಲವೆಂಬ ತತ್ತ್ವವನ್ನರಿಯದ ಗಾಢನಿದ್ರೆಯೇ ಆಗಿರುತ್ತದೆ. ಈ ಜಗತ್ತೆಲ್ಲವೂ - ಇಂದ್ರಿಯಗಳು, ಲೋಕಗಳು, ದೇವತೆಗಳು, ಪ್ರಾಣಗಳು - ಮುಂತಾದ ಸಮಸ್ತಲೋಕವೂ - ನಮ್ಮ ಸುಷುಪ್ತಿಯಲ್ಲಿ

ಯಾವ ಭೇದವೂ ಇಲ್ಲದೆ ಏಕೀಭೂತವಾಗಿ ಪರಮಾತ್ಮಮಯವಾಗಿರುತ್ತವೆ ; ಅವನಿಂದಲೇ ಎಲ್ಲವೂ ಎಚ್ಚರವಾಗುತ್ತಲೂ ಹೊರಕ್ಕೆ ಹೊಮ್ಮುತ್ತದೆ - ಎಂದು ಶ್ರುತಿಗಳು ಸಾರುತ್ತಿರುವವು. ಈ ಗುಟ್ಟನ್ನು ಅರಿತವನಿಗೆ ನಾನು, ನನ್ನದು - ಎಂಬ ಅಭಿಮಾನವು ತೊಲಗುವದು. ಈ ಅರಿವೇ ದ್ರವ್ಯಾದ್ವೈತವು. ಇದರಿಂದ ಸುಷುಪ್ತಿಭ್ರಮೆಯು ತೊಲಗುವದು. ನಾನುನನ್ನದೆಂಬ ವಿಭಾಗವಿಲ್ಲದ ಪರವಸ್ತುವೇ ತಾನೆಂಬ ಅನುಭವವು ಕಾಣಿಸಿಕೊಳ್ಳುವದು.

ಈ ಮೂರು ಶ್ಲೋಕಗಳಲ್ಲಿ ನಾವು ಈವರೆಗೆ ವಿಚಾರಮಾಡಿರುವ ಅಧ್ಯಾತ್ಮವಿದ್ಯೆಯ ಸಾರವನ್ನೆಲ್ಲ ಹಿಂಡಿಟ್ಟಿದೆ ಎಂದು ನಿಮಗೆ ಮನದಟ್ಟಾಗಿರಬಹುದು. ಹೀಗೆ ಪುರಾಣಗಳಲ್ಲಿರುವ ಬೋಧೆಯನ್ನು ಮೆಲುಕುಹಾಕುವದರಿಂದ ಸಾಮಾನ್ಯರಾದ ಅಧಿಕಾರಿಗಳೂ ಕೃತಕೃತ್ಯರಾಗಬಹುದಾಗಿದೆ.

## ೨೪. ಅಧಿಕಾರತಾರತಮ್ಯದಿಂದ ಸಾಧನೋಪದೇಶ

(14-9-64)

ಅಧ್ಯಾತ್ಮವಿದ್ಯೆಯು ಅನುಭವಾನುಸಾರವಾಗಿ ತತ್ತ್ವಪರಿಶೀಲನವನ್ನು ಮಾಡುವವರಿಗೆ 'ಪ್ರತ್ಯಕ್ಷಾವಗಮಂ ಧರ್ಮ್ಯಂ ಸುಸುಖಂ ಕರ್ತುಮವ್ಯಯಮ್' (ಗೀ. ೯-೨) ಎಂದಂತೆ ಅವರವರ ಅನುಭವದಲ್ಲಿಯೇ ನೇರಾಗಿ ಕಾಣಿಸಿಕೊಳ್ಳುವದು, ಯಾವ ಧರ್ಮಕ್ಕೂ ಅದು ವಿರುದ್ಧವಾಗಿರುವದಿಲ್ಲ , ಅತ್ಯಂತಸುಲಭವೂ ಹೌದು , ಅದರ ಫಲವೂ ನಿತ್ಯವಾಗಿರುತ್ತದೆ.

ಆದರೆ ಯಾವ ಸಾಧನವನ್ನೂ ಎಂದೂ ಮಾಡಿಕೊಳ್ಳದವರಿಗೆ ಈ ವಿದ್ಯೆಯು ದಕ್ಕುವದಿಲ್ಲ . ಯಜ್ಞ , ದಾನ , ತಪಸ್ಸು - ಎಂಬ ಸಾಧನಗಳನ್ನು ಅತ್ಯವಶ್ಯವಾಗಿ ಮಾಡಬೇಕು. ಸಂಗವನ್ನೂ ಫಲಾಭಿಸಂಧಿಯನ್ನೂ ಬಿಟ್ಟು ಅವನ್ನು ಮಾಡುವವರಿಗೆ ಚಿತ್ತಶುದ್ಧಿಯಿಂದ ವಿವಿದಿಷೆ ಉಂಟಾಗುತ್ತದೆ - ಎಂದು ಶಾಸ್ತ್ರವು ಹೇಳಿರುತ್ತದೆ. ಗೀತೆಯಲ್ಲಿರುವಂತೆ ಸಾತ್ತ್ವಿಕಯಜ್ಞ , ಸಾತ್ತ್ವಿಕದಾನ , ಸಾತ್ತ್ವಿಕತಪಸ್ಸು - ಇವುಗಳ ಅನುಷ್ಠಾನವನ್ನು ಮಾಡುವವರಿಗೆ ಅವಶ್ಯವಾಗಿ ಜ್ಞಾನಯೋಗ್ಯತಾಪ್ರಾಪ್ತಿಯಾಗುವದು. ಆದರೆ ಈಗಿನ ಕಾಲಕ್ಕೆ ಈ ಯಾವ ಸಾಧನಗಳೂ ಸಾಮಾನ್ಯ ಜನರಿಗೆ ಸಾಧ್ಯವಲ್ಲ . 'ತಪಸ್ಸು' ಎಂಬುದು ಶರೀರವು ಗಟ್ಟಿಯಾಗಿರುವವರಿಗೆ ಮಾತ್ರ ದಕ್ಕುವದು. ಈಗ್ಗೆ ಅನೇಕ ಕಾರಣಗಳಿಂದ ಜನರು ದುರ್ಬಲರೂ, ಅನೇಕ ರೋಗಗಳಿಗೆ ತುತ್ತಾದವರೂ

ಆಗಿರುತ್ತಾರೆ. ಅಂಥವರಿಗೆ ಕೃಚ್ಛ್ರ, ಚಾಂದ್ರಾಯಣ – ಮುಂತಾದ ತಪಸ್ಸುಗಳು ಹೇಗೆ ಅಳವಟ್ಟಾವು ? ಕೃಚ್ಛ್ರಕ್ಕೆ ಪ್ರತ್ಯಾಮ್ನಾಯವಾಗಿ ಬ್ರಹ್ಮದಣ್ಣವನ್ನು ದಕ್ಷಿಣೆಯಾಗಿ ಕೊಡುವ ಪದ್ಧತಿ ಬಂದಿರುವದೇ ತಪಸ್ಸು ಈ ಕಾಲಕ್ಕೆ ಜನರಿಗೆ ಸಾಧ್ಯವಿಲ್ಲವೆಂಬುದನ್ನು ದೃಢಪಡಿಸುತ್ತಿದೆ. ಯಜ್ಞವೆಂಬುದು ಅಧ್ಯಯನವನ್ನು ಮಾಡಿ ವಿಧ್ಯುಕ್ತವಾಗಿ ಕರ್ಮಗಳನ್ನು ಆಚರಿಸುತ್ತಿದ್ದು ಧರ್ಮದಿಂದ ಹಣವನ್ನು ಗಳಿಸಿಕೊಂಡವರು ಮಾಡತಕ್ಕದ್ದು. ಆದರೆ ಅಧ್ಯಯನವು ಎಲ್ಲರಿಗೂ ಸಾಧ್ಯವಿಲ್ಲ; ಕರ್ಮಾಚರಣೆಗಳು ಶಿಥಿಲವಾಗಿವೆ, ಧರ್ಮದಿಂದ ಧನಸಂಪಾದನೆಯನ್ನು ಮಾಡುವದೂ ಈ ಕಾಲಕ್ಕೆ ಬಹಳ ಕಷ್ಟಸಾಧ್ಯವಾಗಿರುತ್ತದೆ. ಈ ಯಾವ ಉಪಕರಣವೂ ಇಲ್ಲದೆ ಮಾಡಿದ ಯಜ್ಞಗಳು **'ಯಜನ್ತೇ ನಾಮಯಜ್ಞೈಸ್ತೇ ದಮ್ಭೇನಾವಿಧಿಪೂರ್ವಕಮ್'** (ಗೀ. ೧೬-೧೭) ಎಂದಂತೆ ತೋರುಗಾಣಿಕೆಗಾಗಿ ವಿಧ್ಯುಕ್ತವಲ್ಲದೆ ಮಾಡುವವಾಗಿ ಅವು ಹೆಸರಿಗೆ ಮಾತ್ರ 'ಯಜ್ಞ'ವೆನಿಸಿರುತ್ತವೆ. ಅಂಥ ಯಜ್ಞಗಳನ್ನು ಮಾಡುವದು ಅಸುರೀಸಂಪತ್ತನ್ನು ಹೆಚ್ಚಿಸುತ್ತದೆ. ಇನ್ನು ದಾನವೊಂದೇ ಕಲಿಯುಗಕ್ಕೆ ಉಳಿದಿರುವ ಧರ್ಮವೆಂದು ಭಾರತಾದಿಗಳಲ್ಲಿ ಮತ್ತೆಮತ್ತೆ ಹೇಳಿರುತ್ತದೆ. ಆದರೆ ಹೊಟ್ಟೆಗಿಲ್ಲದೆ ಬಟ್ಟೆಗಿಲ್ಲದೆ ಹೊಯ್ದಾಡುತ್ತಿರುವ ಜನರಿಗೆ ತಮಗೇ ಜೀವನಕ್ಕಿಲ್ಲದಿರುವಾಗ, ಮತ್ತೊಬ್ಬರಿಗೆ ದಾನಮಾಡುವದೆಂದರೆ ಹೇಗೆ ಆಗಬೇಕು ? ಅವರು ದುಃಖದಾನವನ್ನು ಬೇಕಾದರೆ ಮಾಡಬಹುದು.

ಹೇಗೋ ಯಜ್ಞದಾನತಪಸ್ಸುಗಳನ್ನು ಆದಷ್ಟುಮಟ್ಟಿಗೆ ಮಾಡಿದರೂ ಅನುಷ್ಠಾನ ದಲ್ಲಿ ಆಗುವ ನ್ಯೂನಾತಿರಿಕ್ತದೋಷಗಳಿಗೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕಾಗು ವದು. ಸಾಧನಗಳನ್ನು ಸಾಂಗವಾಗಿ ಮಾಡುವದು ಯಾವ ಕಾಲದಲ್ಲಿಯೂ ಎಲ್ಲರಿಗೂ ಸಾಧ್ಯವಿಲ್ಲ. ಆದ್ದರಿಂದ ಕರ್ಮದ ಸಾದ್ಗುಣ್ಯಕ್ಕಾಗಿ ಪ್ರಾಯಶ್ಚಿತ್ತವನ್ನು ಹೇಳಿರುತ್ತಾರೆ. ಆದರೆ ಕರ್ಮವನ್ನು ಮಾಡಿದಮೇಲಲ್ಲವೇ ಅದರ ನ್ಯೂನಾತಿರಿಕ್ತತ್ವದ ವಿಚಾರ ? **'ಅನಭ್ಯಾಸಾಚ್ಚ ವೇದಾನಾಮಾಚಾರಸ್ಯ ಚ ಲಙ್ಘನಾತ್ ಆಲಸ್ಯಾದನ್ನ ದೋಷಾಚ್ಚ ಮೃತ್ಯುರ್ವಿಪ್ರಾನ್ ಜಿಘಾಂಸತಿ ॥'** (ಮನು. ೫-೪) ವೇದಗಳ ಅಭ್ಯಾಸವಿಲ್ಲದ್ದರಿಂದಲೂ ಆಚಾರವನ್ನು ಮೀರುವದರಿಂದಲೂ ಸೋಮಾರಿತನ ದಿಂದಲೂ ಅಭೋಜ್ಯಾನ್ನವನ್ನು ಉಂಡ ದೋಷದಿಂದಲೂ ವಿಪ್ರರನ್ನು ಮೃತ್ಯುವು ಕೊಲ್ಲಲೆಳಸುತ್ತದೆ – ಎಂದು ಸ್ಮೃತಿ. ಈ ಎಲ್ಲಾ ಬಗೆಯ ಮೃತ್ಯುದ್ವಾರಗಳೂ ಈಗ ಹಾರುಹೊಡೆದಿವೆ. ಅವಿದ್ಯೆ, ಕಾಮ, ವಿಕರ್ಮ – ಎಂಬಿವೇ ಮೃತ್ಯು. ಈ ಮೃತ್ಯುಸಂಸಾರಕ್ಕೆ ವಶರಾಗಿರುವ ಜನರಿಗೆ ಎಲ್ಲಿಯ ಚಿತ್ತಶುದ್ಧಿ, ಎಲ್ಲಿಯ

ಜ್ಞಾನಪ್ರಾಪ್ತಿಯ ಪ್ರತ್ಯಾಶೆ ? 'ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿನ್ದತಿ ಮಾನವಃ' (ಗೀ. ೧೮-೪೬) ಎಂದಂತೆ ತನ್ನತನ್ನ ಕರ್ಮವನ್ನು ಮಾಡಿ ಅದರಿಂದ ಪರಮೇಶ್ವರನ ಅಭ್ಯರ್ಚನೆಯನ್ನು ಮಾಡಿದವನಿಗೆ ಜ್ಞಾನಯೋಗ್ಯತೆ ಎಂಬ ಸಿದ್ಧಿಯು ದೊರಕುವದು. ಹಾಗಿಲ್ಲದೆ ಅದಕ್ಕೆ ಪ್ರತಿಕೂಲವಾದ ವರ್ತನೆಯೇ ಹೆಚ್ಚಾಗಿರುವಲ್ಲಿ ಬುದ್ಧಿಯು ಹೆಚ್ಚುಹೆಚ್ಚು ಸ್ಥೂಲವಾಗುತ್ತಾಬರುತ್ತದೆ , ತತ್ತ್ವವಿಚಾರಕ್ಕೆ ಅಡ್ಡಿಯೇ ಆಗುತ್ತದೆ ; ಜ್ಞಾನಪ್ರಾಪ್ತಿಯಂತೂ ದೂರವೇ ಉಳಿಯಿತು.

ಈ ಕಾರಣಗಳಿಂದ ತೀರ ಕೆಳಮಟ್ಟಕ್ಕೆ ಜನರ ಅಂತಃಕರಣವು ಇಳಿದಿದ್ದರೂ ಆಸ್ತಿಕರಾಗಿದ್ದುಕೊಂಡು , ಭಗವತ್ಪ್ರಾಪ್ತಿಯನ್ನು ಸಂಪಾದಿಸಿಕೊಳ್ಳಬೇಕೆಂಬವರು ಈಗಲೂ ಇರುತ್ತಾರೆ . ಅಂಥವರಿಗೇನು ಗತಿ ? - ಎಂದರೆ ಪುರಾಣಗಳಲ್ಲಿ ದೇವತಾರ್ಚನೆ , ಜಪ , ಉಪವಾಸ , ನಾಮಸ್ಮರಣೆ - ಮುಂತಾದ ಉಪಾಯಗಳಿಂದ ಅವರು ಕೃತಕೃತ್ಯರಾಗಬಹುದು ಎಂದು ಹೇಳಿದೆ. ವಿಷಯೋಪಭೋಗಲಾಲಸೆಯುಳ್ಳವರ ನಡುವೆ ಇರುವ ಮುಮುಕ್ಷುಗಳೂ ದೇವತಾರ್ಚನೆಯಿಂದ ಪವಿತ್ರರಾಗಿ ಭಗವಂತನಕಡೆಗೆ ತಿರುಗಬಹುದು. 'ತ್ವಯೋಪಭುಕ್ತಸ್ರಗ್ಗನ್ಧವಾಸೋಽಲಙ್ಕಾರಚರ್ಚಿತಾಃ । ಉಚ್ಛಿಷ್ಟಭಾಜಿನೋ ದಾಸಾಸ್ತವ ಮಾಯಾಂ ಜಯೇಮಹಿ ॥' (ಭಾಗ. ೧೧-೬-೪೬) ಎಂದಂತೆ ಪರಮೇಶ್ವರನಿಗೆ ಸಮರ್ಪಿಸಿದ ಮೇಲೆ ಆತನ ಪ್ರಸಾದವಾಗಿ ಗ್ರಹಿಸಿದ ಹೂ, ಗಂಧ, ಬಟ್ಟೆ, ಅಲಂಕಾರ , ನೈವೇದ್ಯ - ಇವುಗಳನ್ನು ಉಪಭೋಗಿಸುವ ಭಕ್ತರು ವೈಷ್ಣವೀಮಾಯೆಯನ್ನು ಗೆದ್ದುಕೊಳ್ಳಬಹುದು. ಜಪ ಎಂದರೆ ವೇದಾಧ್ಯಯನ , ಶಾಸ್ತ್ರಾಧ್ಯಯನ , ರಾಮಾಯಣ ಭಾರತಗಳ ಮುಖ್ಯಭಾಗಗಳ ನಿತ್ಯಪಾರಾಯಣ, ಪರಮೇಶ್ವರನ ಸ್ವರೂಪವನ್ನೂ ಮಹಿಮೆಯನ್ನೂ ಹೇಳುವ ಕೆಲವು ನಾಮಗಳನ್ನೊಳಗೊಂಡ ಗಾಯತ್ರ್ಯಾದಿಮಂತ್ರಗಳು - ಇವುಗಳನ್ನು ಬಿಡದೆ ವಾಚಿಕವಾಗಿಯೂ ಮಾನಸಿಕವಾಗಿಯೂ ಮತ್ತೆಮತ್ತೆ ಹೇಳಿಕೊಳ್ಳುವದು. ಇವುಗಳನ್ನು ಜಪಿಸುವದಕ್ಕೂ ಒಂದು ಕ್ರಮವಿದೆ. ತಾವು ಗುರೂಪದೇಶದಿಂದ ಪಡೆದುಕೊಂಡು , ಶ್ರದ್ಧೆಯಿಂದ ಅನುಗಾಲವೂ ಜಪಿಸಿ ಸಿದ್ಧಿಯನ್ನು ಹೊಂದಿರುವ ಬಲ್ಲವರಿಂದ ಮಂತ್ರಗಳ ರಹಸ್ಯವನ್ನು ಅರಿತುಕೊಂಡು ಜಪಿಸಬೇಕು. ಏಕಾದಶಿಯೇ ಮುಂತಾದ ದಿನಗಳಲ್ಲಿ ಭಗವಂತನ ಸ್ಮರಣೆಗೆ ಅಂಗವಾಗಿ ಮಾಡುವ ಉಪವಾಸಗಳೂ ಈ ಗುಂಪಿಗೆ ಸೇರಿರುತ್ತವೆ. ಅದರಿಂದಲೂ ಚಿತ್ತಶುದ್ಧಿರೂಪವಾದ ಸಿದ್ಧಿಯಾಗುವದು. ಇವುಗಳನ್ನು ಕಾಮಿತಾರ್ಥಗಳ ಪ್ರಾಪ್ತಿಗಾಗಿಯೂ ಮಾಡಬಹುದಾದರೂ ಪ್ರಕೃತವಾಗಿರುವ ಅಧ್ಯಾತ್ಮವಿದ್ಯೆಗೆ

ಸಾಧನವಾಗಿಯೇ ಅವುಗಳನ್ನು ವಿನಿಯೋಗಿಸಿಕೊಳ್ಳುವವರಿಗಾಗಿ ಇದನ್ನು ಇಲ್ಲಿ ಎತ್ತಿ ಹೇಳಿರುತ್ತೇನೆ. ದೇಶಕಾಲಸ್ಥಿತಿಗೆ ಅನುಗುಣವಾಗಿ ತಮತಮಗೆ ಲಭಿಸಿರುವ ಈ ಸಾಧನಗಳನ್ನು 'ಭಗವದಾರಾಧನೆ' ಎಂಬ ಬುದ್ಧಿಯಿಂದ ಮಾಡುವದು ಚಿತ್ತಶುದ್ಧಿಯನ್ನು ಕೊಟ್ಟು ಜ್ಞಾನಪ್ರಾಪ್ತಿಯೋಗ್ಯತೆಯನ್ನೂ ಕೊಡುವದು. 'ಯಜ್ಞಾನಾಂ ಜಪಯಜ್ಞೋಽಸ್ಮಿ' ಎಂದು ಜಪವನ್ನು ಭಗವಂತನೇ ಕೊಂಡಾಡಿರುತ್ತಾನೆ.

ಪುರಾಣಗಳಲ್ಲಿ ಹೇಳಿರುವ ನಾಮಸ್ಮರಣೆ ಎಂಬುದು ಈ ಕಾಲಕ್ಕೆ ಅತ್ಯಂತವಾಗಿ ಸುಲಭವಾಗಿಯೂ ಸಾರ್ವತ್ರಿಕವಾಗಿಯೂ ದಕ್ಕುವ ಸಾಧನೆ.

**ಅಹೋ ಬತ ಶ್ವಪಚೋಽತೋ ಗರೀಯಾನ್**
**ಯಜ್ಜಿಹ್ವಾಗ್ರೇ ವರ್ತತೇ ನಾಮ ತುಭ್ಯಮ್ ।**
**ತೇಪುಸ್ತಪಸ್ತೇ ಜುಹುವುಃ ಸಸ್ನುರಾರ್ಯಾ**
**ಬ್ರಹ್ಮಾನೂಚುರ್ನಾಮ ಗೃಹ್ಣನ್ತಿ ಯೇ ತೇ ॥** ಭಾಗ. ೩-೩-೭

ಯಾರು ಭಗವಂತನ ನಾಮವನ್ನು ಜಪಿಸುತ್ತಿರುವರೋ ಅಂಥವರು ಚಂಡಾಲರಾದರೂ ಶ್ರೇಷ್ಠರೇ. ಅವರು ಎಲ್ಲಾ ತಪಸ್ಸನ್ನು ಮಾಡಿದವರು, ಹೋಮಾದಿಗಳನ್ನು ಮಾಡಿದವರು , ವೇದಗಳ ಅಧ್ಯಯನವನ್ನು ಮಾಡಿದವರು ಎಂದು ತಿಳಿಯಬೇಕು -ಎಂದಿರುವದರಿಂದ ಸಾಧಕರಾದವರು ತಮಗೆ ಶಕ್ಯವಾದಷ್ಟುಮಟ್ಟಿಗೆ ಅಧ್ಯಯನ ಹೋಮಾದಿಗಳನ್ನು ಮಾಡುತ್ತಾ ಭಗವಂತನ ನಾಮವನ್ನು ಸತತವಾಗಿ ನಾಲಗೆಯಲ್ಲಿಟ್ಟುಕೊಂಡಿರಬೇಕು. ಯಜ್ಞಾದಿಗಳಲ್ಲಿ ಅಧಿಕಾರವಿಲ್ಲದವರೂ ಕೇವಲ ನಾಮಜಪದಿಂದಲೇ ಆ ಕರ್ಮಗಳನ್ನು ಮಾಡಿದ ಫಲವನ್ನು ಪಡೆಯುತ್ತಾರೆ. ನಾಮ ಜಪವೆಂದರೆ ಮಂತ್ರಜಪವಲ್ಲ . ತಮಗೆ ಇಷ್ಟವೆಂದು ತೋರಿದ ಭಗವನ್ನಾಮವನ್ನು ಬಿಡದೆ ಹೇಳಿಕೊಳ್ಳುವದೇ ಒಂದು ಉತ್ತಮಸಾಧನವೆಂದು ಹೇಳಿರುತ್ತದೆ.

ಕರ್ಮಗಳನ್ನು ಮಾಡುವವರಿಗೂ ಅವುಗಳಲ್ಲಿ ಆಗುವ ಸ್ವರವರ್ಣಾದಿ ಲೋಪಗಳೂ ಅನುಷ್ಠಾನದಲ್ಲಾಗುವ ನ್ಯೂನಾತಿರಿಕ್ತಗಳೂ ನೇರ್ಪಡುವದಕ್ಕೆ ನಾಮ ಕೀರ್ತನೆಗಿಂತ ಹೆಚ್ಚಿನ ಸಾಧನವಿಲ್ಲ. '**ಮನ್ತ್ರತಸ್ತನ್ತ್ರತಶ್ಛಿದ್ರಂ ದೇಶಕಾಲಾರ್ಹ ವಸ್ತುತಃ । ಸರ್ವಂ ಕರೋತಿ ನಿಶ್ಛಿದ್ರಂ ನಾಮಸಙ್ಕೀರ್ತನಂ ಹರೇಃ ॥** ' (ಭಾಗ. ೮-೨೩-೧೬) ಎಂಬಂತೆ ಮಂತ್ರಗಳಲ್ಲಿ, ತಂತ್ರದಲ್ಲಿ, ದೇಶಕಾಲಗಳಲ್ಲಿ ಪೂಜಾದ್ರವ್ಯ ದಲ್ಲಿ ಯಾವಯಾವ ಲೋಪವಾಗಿದ್ದರೂ ನಾಮಜಪದಿಂದ ಅಚ್ಛಿದ್ರವಾಗುವದು.

ಪ್ರಾಯಶ್ಚಿತ್ತಗಳಲ್ಲೆಲ್ಲ ನಾಮಜಪವು ಹೆಚ್ಚಿನ ಪ್ರಾಯಶ್ಚಿತ್ತವೆನಿಸುತ್ತದೆ :

ನ ನಿಷ್ಕೃತೈರುದಿತೈರ್ಬ್ರಹ್ಮವಾದಿಭಿ
ಸ್ತಥಾ ವಿಶುಧ್ಯತ್ಯಘವಾನ್ ವ್ರತಾದಿಭಿಃ।
ಯಥಾ ಹರೇರ್ನಾಮಪದೈರುದಾಹೃತೈ -
ಸ್ತದುತ್ತಮಶ್ಲೋಕಗುಣೋಪಲಮ್ಭಕಮ್ ॥ ಭಾಗ. ೬-೨-೧೧

ಸ್ಮೃತಿಗಳಲ್ಲಿ ಹೇಳಿರುವ ಪ್ರಾಯಶ್ಚಿತ್ತಗಳನ್ನು ಅನುಷ್ಠಾನಮಾಡುವದಾಗಲಿ, ಪುರಾಣಗಳಲ್ಲಿ ಹೇಳಿರುವ ವ್ರತಾದಿಗಳನ್ನು ಮಾಡುವದಾಗಲಿ ಕಷ್ಟ . ಅವುಗಳಿಂದ ಪಾಪನಿರ್ಹರಣವಾಗುವದಕ್ಕಿಂತಲೂ ನಾಮಕೀರ್ತನೆಯಿಂದಲೇ ಹೆಚ್ಚಿನ ಪರಿಶುದ್ಧಿಯಾಗುತ್ತದೆ. ಭಗವಂತನ ಗುಣಗಳ ಅರಿವೂ ಆಗುತ್ತದೆ.

ಹೆಚ್ಚು ಹೇಳಿದ್ದರಿಂದೇನು ? ಪರಮಾತ್ಮನ ಸ್ತೋತ್ರ , ಪರಮಾತ್ಮನ ನಾಮಗ್ರಹಣ - ಇವುಗಳು ಎಲ್ಲರಿಗೂ ಪರಮಧರ್ಮವನ್ನೇ ಮಾಡಿದ ಫಲವನ್ನುಂಟುಮಾಡಿ ಕೊಡುತ್ತದೆ. 'ಏಷ ಮೇ ಸರ್ವಧರ್ಮಣಾಂ ಧರ್ಮೋಽಧಿಕತಮೋ ಮತಃ । ಯದ್ಭಕ್ತ್ಯಾ ಪುಣ್ಡರೀಕಾಕ್ಷಂ ಸ್ತವೈರರ್ಚೇನ್ನರಃ ಸದಾ ॥' ಮನುಷ್ಯನು ಭಕ್ತಿಯಿಂದ ಭಗವಂತನನ್ನು ಸ್ತೋತ್ರಗಳಿಂದ ನಿತ್ಯವೂ ಅರ್ಚನೆಮಾಡುವುದಕ್ಕಿಂತ ಹೆಚ್ಚಿನ ಧರ್ಮವಿನ್ನಿಲ್ಲ - ಎಂದು ಶರತಲ್ಪಗತರಾಗಿದ್ದ ಭೀಷ್ಮಾಚಾರ್ಯರು ಯುಧಿಷ್ಠರನಿಗೆ ಹೇಳಿರುತ್ತಾರೆ. 'ಏತಾವಾನೇವಲೋಕೇಽಸ್ಮಿನ್ ಪುಂಸಾಂ ಧರ್ಮಃ ಪರಃ ಸ್ಮೃತಃ । ಭಕ್ತಿಯೋಗೋ ಭಗವತಿ ತನ್ನಾಮಗ್ರಹಣಾದಿಭಿಃ ॥ ' (ಭಾಗ. ೬-೩-೨೨) ನಾಮಗ್ರಹಣವೇ ಮುಂತಾದವುಗಳ ದ್ವಾರದಿಂದ ಭಗವಂತನಲ್ಲಿ ದೊರಕಿಸಿಕೊಳ್ಳುವ ಭಕ್ತಿಯೋಗವೇ ಪರಮಧರ್ಮವು - ಎಂದು ಭಾಗವತದಲ್ಲಿಯೂ ಇದೆ.

ಈ ಭಕ್ತಿಯೋಗವಾದರೂ ಹೇಗೆ ದೊರೆಯಬೇಕು ? ಲೋಕದಲ್ಲಿ ವಿಷಯಗಳ ಕಥಾಲಾಪವೇ ಎಲ್ಲೆಲ್ಲಿಯೂ ಬೆಳೆದಿರುವಾಗ ಕಾಮವಶರಾಗಿರುವವರೇ ತುಂಬಿ ತುಳುಕುತ್ತಿರುವ ಜನಸಮಾಜದಲ್ಲಿ ವ್ಯವಹರಿಸುತ್ತಿರುವವರಿಗೆ ಭಗವಂತನ ನಾಮಗ್ರಹಣವಾಗಲಿ ಭಗವಂತನಲ್ಲಿ ಭಕ್ತಿಯಾಗಲಿ ಹೇಗೆ ಲಭಿಸಬೇಕು ? ಈ ಪ್ರಶ್ನೆಗೂ ಉತ್ತರವನ್ನು ಪುರಾಣದಲ್ಲಿ ಸ್ಪಷ್ಟವಾಗಿ ಹೇಳಿರುತ್ತದೆ. ''ಸಾಧವೋ ನ್ಯಾಸಿನಃ ಶಾನ್ತಾ ಬ್ರಹ್ಮಿಷ್ಠಾ ಲೋಕಪಾವನಾಃ । ಹರನ್ತ್ಯಘಂ ತೇಽಙ್ಗಸಙ್ಗಾತ್ ತೇಷ್ವಾಸ್ತೇ ಹ್ಯಘಭಿದ್ಧರಿಃ ॥' (ಭಾಗ. ೯-೯-೬) ಸರ್ವಕರ್ಮಗಳನ್ನೂ ಕೈಬಿಟ್ಟು ಪರಮಾತ್ಮನಲ್ಲಿಯೇ ನೆಲೆನಿಂತಿರುವ ಲೋಕಪಾವನರಾದ ಸಾಧುಗಳು, ಜನರ ಪಾಪವನ್ನೆಲ್ಲ ಕಳೆಯುತ್ತಾರೆ, ಅವರ ಸಂಗದಿಂದ ಜನರು ಪರಿಶುದ್ಧರಾಗುತ್ತಾರೆ. ಏಕೆಂದರೆ

ಪಾಪಘ್ನನಾದ ಹರಿಯು ಅವರಲ್ಲಿಯೇ ನೆಲೆಸಿರುತ್ತಾನೆ. 'ತಸ್ಮಿಂಸ್ತಜ್ಜನೇ ಭೇದಾಭಾವಾತ್' ಅವರಿಗೂ ಭಗವಂತನಿಗೂ ಯಾವ ಭೇದವೂ ಇರುವದಿಲ್ಲ - ಎಂದು ನಾರದಭಕ್ತಿಸೂತ್ರದಲ್ಲಿದೆ. "ನ ಹ್ಯಮ್ಮಯಾನಿ ತೀರ್ಥಾನಿ ನ ದೇವಾ ಮೃಚ್ಛಿಲಾಮಯಾಃ । ತೇ ಪುನನ್ತ್ಯುರುಕಾಲೇನ ದರ್ಶನಾದೇವ ಸಾಧವಃ ॥ " ಎಂದಿರುವಂತೆ ನೀರಿನ ರೂಪದಲ್ಲಿರುವ ತೀರ್ಥಗಳಿಗಿಂತಲೂ ಸಾಧುಜನರು ಹೆಚ್ಚಿನ ತೀರ್ಥವಾಗಿರುತ್ತಾರೆ , ಮಣ್ಣು ಕಲ್ಲಿನಿಂದ ಮಾಡಿರುವ ಮೂರ್ತಿಗಳ ರೂಪದಲ್ಲಿರುವ ದೇವತೆಗಳಿಗಿಂತಲೂ ಹೆಚ್ಚಿನ ದೇವತಾಸ್ವರೂಪರಾಗಿರುತ್ತಾರೆ. ತೀರ್ಥಸೇವೆ , ದೇವತಾಸೇವೆ - ಇವುಗಳಿಂದ ಬಹುಕಾಲದಮೇಲೆ ಪಾವಿತ್ರ್ಯವು ಲಭಿಸಬಹುದು ; ಸಾಧುಗಳು ಮಾತ್ರ ದರ್ಶನಮಾತ್ರದಿಂದಲೇ ನಮ್ಮನ್ನು ಪವಿತ್ರಗೊಳಿಸುವರು. ಅವರ ಸಂನಿಧಿಗೆ ಹೋಗಿ ನಮಸ್ಕರಿಸಿ ಅವರ ಸೇವೆಯನ್ನು ಮಾಡಿದರೆ ಸರ್ವದೇವತೆಗಳನ್ನೂ ಪೂಜಿಸಿದ ಫಲವು ಬರುವದು. ಅವರು ಪ್ರಸಾದವಾಗಿ ಕೊಡುವ ಗಂಧಮಾಲ್ಯಾದಿಗಳಿಂದಲೂ ಅವರ ಭುಕ್ತಶೇಷದ ಭೋಜನದಿಂದಲೂ ಮಾಯಾಜಯವು ಕ್ಷಿಪ್ರವಾಗಿ ಆಗುವದು.

ಸ ವಾಗ್ವಿಸರ್ಗೋ ಜನತಾಘಸಂಪ್ಲವೋ
ಯಸ್ಮಿನ್ ಪ್ರತಿಶ್ಲೋಕಮಬದ್ಧವತ್ಯಪಿ ।
ನಾಮಾನ್ಯನನ್ತಸ್ಯ ಯಶೋಽಙ್ಕಿತಾನಿ
ಯಚ್ಛೃಣ್ವನ್ತಿ ಗಾಯನ್ತಿ ಗೃಣನ್ತಿ ಸಾಧವಃ ॥ ಭಾಗ. ೧೨-೧೨-೫೧

ಸಾಧುಗಳು ಭಗವಂತನ ಕೀರ್ತನೆಯನ್ನು ಕೊಂಡಾಡುವ ನಾಮಗಳನ್ನು ಕೇಳುವದು, ಗಾನಮಾಡುವದು , ನುಡಿಯುತ್ತಿರುವದು - ಈ ಕಾರ್ಯದಲ್ಲಿಯೇ ಮುಳುಗಿರುತ್ತಾರೆ. ಅವರು ಹೇಳುವ ಪ್ರತಿಶ್ಲೋಕದಲ್ಲಿ ಅಬದ್ಧವಾದ ಪದಗಳೇ ಇದ್ದರೂ ಅವರ ಮಾತೇ ಜನರ ಪಾಪವನ್ನು ಕಳೆಯಬಲ್ಲದು . ಆದ್ದರಿಂದ "ಸತ್ಸಙ್ಗಲಬ್ಧಯಾ ಭಕ್ತ್ಯಾ ಮಯಿ ಮಾಂ ಸ ಉಪಾಸಿತಾ । ಸ ವೈ ಮೇ ದರ್ಶಿತಂ ವಿದ್ಭಿರಞ್ಜಸಾ ವಿನ್ದತೇ ಪದಮ್ ॥ " (ಭಾಗ. ೧೧-೧೧-೨೫) ಎಂದು ಭಗವಂತನು ಅಪ್ಪಣೆಕೊಡಿಸಿರುವಂತೆ ಸತ್ಸಂಗದಿಂದಲೇ ನಮಗೆ ಭಕ್ತಿಯು ದೊರಕುವದು. ಆ ಭಕ್ತಿಯಿಂದ ನಾವು ಅವರು ತೋರಿಸಿಕೊಟ್ಟ ಮಾರ್ಗದಲ್ಲಿ ಭಗವಂತನನ್ನು ನಾಮಕೀರ್ತನಾದಿಗಳಿಂದ ಉಪಾಸನೆಮಾಡಿ ಸುಲಭವಾಗಿ ಆ ವಿಷ್ಣುಪದವನ್ನೇ ಪಡೆದುಕೊಳ್ಳಬಹುದು. ಈವರೆಗೆ ಹೇಳಿರುವ ಎಲ್ಲಾ ಸಾಧನಗಳೂ ಸಾಧುಸೇವೆಯಿಂದ ದೊರೆತ ಭಕ್ತಿಯಿಂದಲೇ ವಶವಾಗುವವು. ಆ ಭಕ್ತಿಯೋಗದಿಂದ ಅಧ್ಯಾತ್ಮವಿದ್ಯೆಯು ತನಗೆತಾನೇ ಲಭಿಸುವದು.

# ೨೫. ವಿದ್ಯಾ ಸಂಕ್ಷೇಪ

(19-9-64)

ಅಧ್ಯಾತ್ಮವಿದ್ಯೆ ಎರಡು ಬಗೆ ಎಂಬುದನ್ನು ತಿಳಿಸಿದ್ದೇನೆ. ಆತ್ಮತತ್ತ್ವವನ್ನು ಇದ್ದಂತೆ ತಿಳಿಯುವ ವಸ್ತುತಂತ್ರವಾಗಿರುವ ಅನುಭವಲಕ್ಷಣವಾದ ವಿದ್ಯೆಯೊಂದು, ಸಂತತಭಾವನೆಯಿಂದ ತದಾತ್ಮ್ಯಭಾವವನ್ನು ಗಟ್ಟಿಗೊಳಿಸಿಕೊಂಡು ಕಾಲಾಂತರದಲ್ಲಿ ಬ್ರಹ್ಮಪ್ರಾಪ್ತಿಯನ್ನು ಪಡೆದುಕೊಳ್ಳುವದು ಇನ್ನೊಂದು. ದಹರವಿದ್ಯೆಯ ಪರಾಮರ್ಶದ ಮೂಲಕ ಭಾವನಾಪ್ರಧಾನವಾದ ಅಧ್ಯಾತ್ಮವಿದ್ಯೆಯ ದಿಗ್ದರ್ಶನವನ್ನು ಮಾತ್ರ ಮಾಡಿರುತ್ತೇನೆ. ಉಪಾಸನೆಗಳನ್ನು ಮಾಡುವದಕ್ಕೆ ಶ್ರುತಿಗಳಲ್ಲಿ ಬೇರೆ ಬೇರೆ ಕಡೆಗಳಲ್ಲಿ ಹೇಳಿರುವ ಒಂದೇ ವಿದ್ಯೆಯನ್ನು ತಿಳಿದುಕೊಂಡು ಉಪಾಸ್ಯದ ಗುಣಗಳನ್ನು ಉಪಸಂಹಾರಮಾಡಿಕೊಂಡು ಪ್ರಾರಂಭಿಸಬೇಕಾಗುತ್ತದೆ. ಅಧ್ಯಯನದ ಬಲವಾಗಲಿ ತತ್ತ್ವಸಾಕ್ಷಾತ್ಕಾರವನ್ನು ಪಡೆದು ಉಪದೇಶಿಸಬಲ್ಲ ಗುರುಗಳ ಸಹಾಯವಾಗಲಿ ಸಿಕ್ಕುವದು ಕಡುಕಷ್ಟವಾಗಿರುವ ಈ ಕಾಲದಲ್ಲಿ ಈ ಉಪಾಸನೆಗಳು ವಿಚಿತ್ರ ವಸ್ತುಪ್ರದರ್ಶನಶಾಲೆಯ ದೃಶ್ಯಗಳಂತೆ ಆಗಿರುತ್ತವೆ. ಆದರೂ ವಸ್ತುಜ್ಞಾನಪ್ರಧಾನವಾದ ಅಧ್ಯಾತ್ಮವಿದ್ಯೆಯು ತಮ್ಮತಮ್ಮ ಅಧಿಕಾರಕ್ಕೆ ತಕ್ಕ ಸಾಧನಗಳಿಂದ ಚಿತ್ತಶುದ್ಧಿಯನ್ನು ಒದಗಿಸಿಕೊಂಡು ವಿಚಾರಿಸುವವರಿಗೆ ಈಗಲೂ ಲಭಿಸುವ ಸಂಭವವಿದೆ.

ಬೃಹದಾರಣ್ಯಕದಲ್ಲಿ ಹೇಳಿರುವ ಅಧ್ಯಾತ್ಮವಿದ್ಯೆಯ ಸಾರವನ್ನು ಒಂದು ಕಂಡಿಕೆಯಲ್ಲಿ ಸಂಗ್ರಹಿಸಿರುತ್ತದೆ : –

**ಸ ವಾ ಏಷ ಮಹಾನಜ ಆತ್ಮಾಽಜರೋಽಮರೋಽಮೃತೋಽಭಯೋ ಬ್ರಹ್ಮಾಭಯಂ ವೈ ಬ್ರಹ್ಮಾಭಯಂ ಹಿ ವೈ ಬ್ರಹ್ಮ ಭವತಿ ಯ ಏವಂ ವೇದ ॥**

ಈ ಕಂಡಿಕೆಯನ್ನು ಮತ್ತೆಮತ್ತೆ ಜಪಿಸಿ ನಾನು ಇದರ ಅಭಿಪ್ರಾಯವನ್ನು ಬೇರೆಬೇರೆ ರೀತಿಯಿಂದ ವಿಶದಪಡಿಸಲು ಪ್ರಯತ್ನಿಸಿರುತ್ತೇನೆ. ಸಂಸಾರಿಯಾಗಿ ಕಾಣುತ್ತಿರುವ ಈ ನಮ್ಮ ಆತ್ಮನೇ ಅಭಯವಾದ – ಅಜಾದ್ವಿತೀಯವಾದ – ಬ್ರಹ್ಮವು. ಹೀಗೆಂದು ಅರಿತುಕೊಳ್ಳುವದೇ ಅಧ್ಯಾತ್ಮವಿದ್ಯೆ . ಮೈತ್ರೇಯೀಬ್ರಾಹ್ಮಣದಲ್ಲಿ ಯಾಜ್ಞವಲ್ಕ್ಯರು ತಮ್ಮ ಪತ್ನಿಯಾದ ಮೈತ್ರೇಯಿಗೆ ತತ್ತ್ವವನ್ನು ತಿಳಿಯುವದಕ್ಕೆ ಇರುವ ಅಡ್ಡಿಯನ್ನು ಕಳೆಯಬೇಕೆಂದು ಹೀಗೆ ಬೋಧೆಗೆ ಪ್ರಾರಂಭಿಸಿರುತ್ತಾರೆ :

**ನ ವಾ ಅರೇ ಪತ್ಯುಃ ಕಾಮಾಯ ಪತಿಃ ಪ್ರಿಯೋ ಭವತ್ಯಾತ್ಮನಸ್ತು ಕಾಮಾಯ ಪತಿಃ ಪ್ರಿಯೋ ಭವತಿ । ನ ವಾ ಅರೇ ಜಾಯಾಯೈ ಕಾಮಾಯ ಜಾಯಾ**

**ಪ್ರಿಯಾ ಭವತಿ ಆತ್ಮನಸ್ತು ಕಾಮಾಯ ಜಾಯಾ ಪ್ರಿಯಾ ಭವತಿ । ನ ವಾ ಅರೇ ಪುತ್ರಾಣಾಂ ಕಾಮಾಯ ಪುತ್ರಾಃ ಪ್ರಿಯಾ ಭವನ್ತ್ಯಾತ್ಮನಸ್ತು ಕಾಮಾಯ ಪುತ್ರಾಃ ಪ್ರಿಯಾ ಭವನ್ತಿ । ನ ವಾ ಅರೇ ವಿತ್ತಸ್ಯ ಕಾಮಾಯ ವಿತ್ತಂ ಪ್ರಿಯಂ ಭವತ್ಯಾತ್ಮನಸ್ತು ಕಾಮಾಯ ವಿತ್ತಂ ಪ್ರಿಯಂ ಭವತಿ । ನ ವಾ ಅರೇ ಪಶೂನಾಂ ಕಾಮಾಯ ಪಶವಃ ಪ್ರಿಯಾ ಭವನ್ತ್ಯಾತ್ಮನಸ್ತು ಕಾಮಾಯ ಪಶವಃ ಪ್ರಿಯಾ ಭವನ್ತಿ......॥**
ಬೃ. ೪-೫-೬

ಇತ್ಯಾದಿ, ಲೋಕದಲ್ಲಿ ಹೆಂಗಸಿಗೆ ಗಂಡನು ಪ್ರಿಯನಾಗಿರುವದು ಗಂಡನಿಗಾಗಿ ಅಲ್ಲ, ತನ್ನ ಕಾಮಕ್ಕಾಗಿ ; ಹೀಗೆಯೇ ಹೆಂಡತಿ ಪ್ರಿಯಳಾಗಿರುವದಾಗಲಿ ಮಕ್ಕಳು, ಧನ, ಪಶುಗಳು - ಮುಂತಾದವುಗಳು ಪ್ರಿಯವಾಗಿರುವದು ಅವುಗಳ ಕಾಮವು ತೃಪ್ತಿಯಾಗಲೆಂದಲ್ಲ, ತನ್ನ ಕಾಮಕ್ಕಾಗಿ . ಆದ್ದರಿಂದ ಗಂಡ ಅಥವಾ ಹೆಂಡತಿ , ಮಕ್ಕಳು, ಧನ , ದನಕರುಗಳು - ಮುಂತಾದವೆಲ್ಲವೂ ತನಗಾಗಿಯೇ ಬೇಕಾಗಿರುತ್ತವೆ ಯಾದ್ದರಿಂದ ತನಗೆತಾನೇ ಅತ್ಯಂತಪ್ರಿಯನೆಂದಾಯಿತು. ಈ ವಿವರವನ್ನು ಉಪಸಂಹಾರಮಾಡಿ ಯಾಜ್ಞವಲ್ಕ್ಯರು ಮಾಡಿರುವ ಉಪದೇಶವೇನೆಂದರೆ :

**ನ ವಾ ಅರೇ ಸರ್ವಸ್ಯ ಕಾಮಾಯ ಸರ್ವಂ ಪ್ರಿಯಂ ಭವತ್ಯಾತ್ಮನಸ್ತು ಕಾಮಾಯ ಸರ್ವಂ ಪ್ರಿಯಂ ಭವತಿ । ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯೋ ಮೈತ್ರೇಯಿ ಆತ್ಮನಿ ಖಲ್ವರೇ ದೃಷ್ಟೇ ಶ್ರುತೇ ಮತೇ ವಿಜ್ಞಾತ ಇದಂ ಸರ್ವಂ ವಿದಿತಮ್ ॥** ಬೃ. ೪-೫-೬

ಯಾವದೊಂದೇ ಆಗಲಿ ಅದರ ಕಾಮವು ಪೂರ್ತಿಯಾಗಲೆಂದೇನೂ ನಮಗೆ ಪ್ರಿಯವಾಗಿರುವದಿಲ್ಲ , ನಮ್ಮ ನಮ್ಮ ಕಾಮಕ್ಕೆಂದೇ ಎಲ್ಲವೂ ನಮಗೆ ಪ್ರಿಯವಾಗಿರುತ್ತದೆ. ಆದ್ದರಿಂದ ನಮಗಿಂತ ಪ್ರಿಯವಾದದ್ದು ನಮಗೆ ಯಾವದೊಂದು ಇಲ್ಲವೆಂದಾಯಿತು. ಈಗಿನ ಕಾಲದಲ್ಲಿ ಮಾಡಬಾರದ್ದನ್ನಾದರೂ ಮಾಡಿ ಜನರು ಹಣದ ಸಂಪಾದನೆಯನು ಮಾಡುವದಕ್ಕೆ ಪ್ರಯತ್ನಿಸುತ್ತಾರೆ. ಅದು ಹಣಕ್ಕೆ ತೃಪ್ತಿಯಾಗಬೇಕೆಂದೇನೂ ಅಲ್ಲವಷ್ಟೆ. ಹಣವಿದ್ದರೆ ಎಂದಾದರೂ ಹೇಗಾದರೂ ತನಗೆ ಇಷ್ಟವಾದದ್ದನ್ನು ದೊರಕಿಸಿಕೊಂಡು ತನ್ನ ಕಾಮವನ್ನು ಪರಿಪೂರ್ತಿಮಾಡಿಕೊಳ್ಳಬಹುದೆಂದಲ್ಲವೆ , ಹಣಕ್ಕಾಗಿ ಇಷ್ಟೊಂದು ಹಗರಣಪಡುತ್ತಿರುವದು ? ಆದರೆ ಆ ಹಣವು ತನಗೆ ಅಪಾಯವನ್ನು ತರುತ್ತದೆ. ಆದರಿಂದ ಅನರ್ಥವೇ ಆದೀತು ! - ಎಂದು ಕಂಡುಬಂದರೆ ಅದನ್ನು ಯಾರುತಾನೆ ಹತ್ತಿರ ಇಟ್ಟುಕೊಂಡಾರು ? ಅಂತೂ ಯಾವ ತನಗಾಗಿ ಈ ಲೋಕದಲ್ಲಿ ನಮಗೆ ಎಲ್ಲವೂ ಬೇಕಾಗಿರುವದೋ ಆ ತನ್ನ ಸ್ವರೂಪವನ್ನು

ಅರಿತುಕೊಳ್ಳುವ ಅಧ್ಯಾತ್ಮವಿದ್ಯೆಯೇ ಎಲ್ಲಕ್ಕಿಂತಲೂ ಹೆಚ್ಚಿನದೆಂದಾಯಿತು. ಸ್ತ್ರೀಯ ವಿಚಾರವಾಗಿ , ಮಕ್ಕಳ ವಿಚಾರವಾಗಿ, ಸಾಕುವಪಶುಗಳ ವಿಚಾರವಾಗಿ, ಹಣದ ವಿಚಾರವಾಗಿ , ಇನ್ನೂ ಮಿಕ್ಕ ವಿಷಯಗಳ ವಿಚಾರವಾಗಿ ತಿಳಿವಳಿಕೆಯನ್ನು ಸಂಪಾದಿಸಿಕೊಳ್ಳಬೇಕೆಂದು ನಾವು ಹವಣಿಸುತ್ತಿರುವದು ಅವುಗಳಿಗಾಗಿ ಅಲ್ಲ, ಹೀಗೆ ಆತ್ಮನಿಗಿಂತ ಬೇರೆಯಾಗಿ ತೋರುತ್ತಿರುವ ಅನಾತ್ಮವಸ್ತುಗಳ ವಿದ್ಯೆಯೂ ತನಗಾಗಿಯೇ ಆಗಿರುವದರಿಂದ ತನ್ನ ಆತ್ಮನ ನಿಜವನ್ನು ಅರಿತುಕೊಳ್ಳುವ ಅಧ್ಯಾತ್ಮವಿದ್ಯೆಯೇ ಎಲ್ಲಕ್ಕಿಂತಲೂ ಹೆಚ್ಚಿನ ವಿದ್ಯೆಯೆಂದಾಯಿತು.

'ಆದ್ದರಿಂದ ಎಲ್ಲಕ್ಕಿಂತಲೂ ಮುಖ್ಯವಾಗಿ ಆತ್ಮನನ್ನೇ ಕಂಡುಕೊಳ್ಳಬೇಕು, ಅದಕ್ಕಾಗಿ ಆತ್ಮನ ವಿಷಯವಾಗಿ ಶ್ರವಣಮಾಡಬೇಕು, ಮನನಮಾಡಬೇಕು, ನಿದಿಧ್ಯಾಸನಮಾಡಬೇಕು' ಎಂದು ಯಾಜ್ಞವಲ್ಕ್ಯರು ಉಪದೇಶಿಸುತ್ತಾರೆ. 'ಆತ್ಮನ ದರ್ಶನವನ್ನೇ ಮಾಡಿಕೊಳ್ಳಬೇಕು' ಎಂಬ ವಾಕ್ಯಕ್ಕೆ ಈಗ್ಗೆ ವೇದಾಂತಿಗಳಲ್ಲಿ ತಪ್ಪುತಿಳಿವಳಿಕೆಗಳೇ ಪ್ರಚುರವಾಗಿರುತ್ತವೆ. 'ಆತ್ಮದರ್ಶನ'ವೆಂದರೆ ಸಾಕ್ಷಾತ್ಕಾರವೆಂದೂ ಬರಿಯ ಜ್ಞಾನವು ಏತಕ್ಕೂ ಬರುವದಿಲ್ಲವಾದ್ದರಿಂದ ಅಪರೋಕ್ಷಜ್ಞಾನವೇ ಇಲ್ಲಿ ಉಪದಿಷ್ಟವಾಗಿದೆಯೆಂದೂ ಹಲವರು ಹೇಳುತ್ತಿದ್ದಾರೆ. ಇದರಲ್ಲಿ ನಿಜದಂಶವೂ ಇದೆ. ಏಕೆಂದರೆ ಆತ್ಮನ ಸ್ವರೂಪದ ಅನುಭವವು ನಮಗೆ ಬರುವದೇ ಆತ್ಮದರ್ಶನವಾಗಿರುತ್ತದೆ. ಇಲ್ಲಿ ಆತ್ಮನನ್ನು ಸಾಕ್ಷಾತ್ಕಾರಮಾಡಿಕೊಳ್ಳುವದು ಎಂದೇನೂ ಅಭಿಪ್ರಾಯವಿಲ್ಲ ; ಏಕೆಂದರೆ ಆತ್ಮನು ''ಯಾತ್ಸಾಕ್ಷಾದಪರೋಕ್ಷಾದ್ ಬ್ರಹ್ಮ'' ಎಂದಂತೆ ಯಾವಾಗಲೂ ನೇರಾಗಿ ಅಪರೋಕ್ಷವಾಗಿಯೇ ಇರುತ್ತಾನೆ. ಮೇರುಪರ್ವತ, ಸ್ವರ್ಗ - ಮುಂತಾದವುಗಳಂತೆ ನಮ್ಮ ಆತ್ಮನು ಪರೋಕ್ಷನಾಗಿರುವದಿಲ್ಲ; ಆ ಆತ್ಮನೇ ಬ್ರಹ್ಮವು ಎಂದು ಶ್ರುತಿಗಳು ಘಂಟಾಘೋಷವಾಗಿ ಸಾರುತ್ತಿವೆ. ಆದ್ದರಿಂದ ದೇಶದಲ್ಲಾಗಲಿ ಕಾಲದಲ್ಲಾಗಲಿ ದೂರವಿದ್ದು ಕಾಣಿಸದೆ ಇರುವದನ್ನು ಎದುರಿಗೆ ಕಾಣಬರುವಂತೆ ಮಾಡಿಕೊಳ್ಳುವದು - ಎಂಬರ್ಥದಲ್ಲಿ ಆತ್ಮನ ದರ್ಶನವನ್ನು ಶಾಸ್ತ್ರದಲ್ಲಿ ಉಪದೇಶಿಸಿರುವದಿಲ್ಲ. ನಮ್ಮ ಸ್ವರೂಪವೇ ನಮಗೆ ದೂರವಾಗಿದೆ, ವ್ಯವಹಿತವಾಗಿದೆ – ಎಂಬ ಮಾತಿಗೆ ಎಂದಿಗಾದರೂ ಅರ್ಥವಿದ್ದೀತೆ . ಈಗ ನಮಗೆ ತೋರುತ್ತಿರುವ ಆತ್ಮರೂಪವು ಸಂಸಾರಿರೂಪ, ಅದರ ನಿಜವಾದ ಸ್ವರೂಪವು ಬ್ರಹ್ಮರೂಪ ; ಆದ್ದರಿಂದ ಅಸಂಸಾರಿಯಾಗಿರುವ ನಿತ್ಯಶುದ್ಧಬುದ್ಧಮುಕ್ತಸ್ವಭಾವದ ಬ್ರಹ್ಮವೇ ನಾನು ಎಂಬ ಅನುಭವವೇ ಆತ್ಮದರ್ಶನ. ಅಷ್ಟೆ.

ಭಾವನಾಪ್ರಧಾನವಾದ ಉಪಾಸನೆಯಲ್ಲಿ ಮಾತ್ರ ಧ್ಯೇಯವಾದ ಬ್ರಹ್ಮದ ಸಾಕ್ಷಾತ್ಕಾರವು ಅವಶ್ಯವಾಗಿರುತ್ತದೆ. ಏಕೆಂದರೆ ಬ್ರಹ್ಮವನ್ನು ಶಾಸ್ತ್ರದಲ್ಲಿ

ಉಪದೇಶಿಸಿರುವಂತೆ ಇಂಥಿಂಥ ಗುಣಗಳುಳ್ಳದ್ದು ಎಂದು ಭಾವನೆಮಾಡಿಕೊಂಡು ಅದೇ ನಾನೆಂಬ ಭಾವನೆಯು ಬಲಿಷ್ಠವಾಗಿ ಪ್ರತ್ಯಕ್ಷವಾಗಿ ಅನುಭವಕ್ಕೆ ಬರುವವರೆಗೂ ಅದನ್ನು ಮಾಡಬೇಕಾಗಿರುತ್ತದೆ. ಆದ್ದರಿಂದಲೇ ಆಚಾರ್ಯರು ಉಪಾಸನೆಯ ವಿಷಯಕ್ಕೆ ಹೀಗೆಂದು ಹೇಳಿರುತ್ತಾರೆ :

**ಸಾಕ್ಷಾತ್ಕರಣಸಾಧ್ಯಂ ಚ ವಿದ್ಯಾಫಲಂ ದರ್ಶಯನ್ತಿ ಶ್ರುತಯಃ 'ಯಸ್ಯ ಸ್ಯಾದದ್ಧಾ ನ ವಿಚಿಕಿತ್ಸಾಸ್ತಿ' ಇತಿ 'ದೇವೋ ಭೂತ್ವಾ ದೇವಾನಪ್ಯೇತಿ ' ಇತಿ ಚೈವಮಾದ್ಯಾಃ । ಸ್ಮೃತಯಶ್ಚ 'ಸದಾ ತದ್ಭಾವಭಾವಿತಃ' ಇತ್ಯೇವಮಾದ್ಯಾಃ । ತಸ್ಮಾತ್, ಅವಿಶಿಷ್ಟಫಲಾನಾಂ ವಿದ್ಯಾನಾಮ್ ಅನ್ಯತಮಮ್ ಆದಾಯ ತತ್ಪರಃ ಸ್ಯಾತ್ ಯಾವದುಪಾಸ್ಯವಿಷಯಸಾಕ್ಷಾತ್ಕರಣೇನ ತತ್ಫಲಂ ಪ್ರಾಪ್ತಮ್ ಇತಿ ॥**
ಸೂ. ಭಾ. ೩-೩-೫೯.

ಭಾವನಾಪ್ರಧಾನವಾದ ವಿದ್ಯೆಯ ಫಲವು ಸಾಕ್ಷಾತ್ಕಾರದಿಂದಲೇ ಉಂಟಾಗ ತಕ್ಕದ್ದು ಎಂಬುದನ್ನು 'ಯಾವನಿಗೆ ಸ್ಪಷ್ಟವಾಗಿ ಅರಿವಾಗುವದೋ ಸಂಶಯವೇ ಉಳಿಯುವದಿಲ್ಲವೋ' (ಛಾಂ. ೩-೧೪-೪), 'ದೇವತೆಯೇ ತಾನಾಗಿ ದೇವತೆಗಳನ್ನು ಸೇರುವನು' (ಬೃ. ೪-೧-೨) ಎಂದು ಮುಂತಾದ ಶ್ರುತಿಗಳು ಹೇಳುತ್ತಿವೆ. 'ಯಾವಾಗಲೂ ಅದೇ ಭಾವದಿಂದ ಭಾವಿತನಾದವನು ಆಯಾ ಧ್ಯೇಯವನ್ನು ಸೇರುವನು' (ಗೀ. ೮-೬) ಎಂದುಮುಂತಾಗಿರುವ ಸ್ಮೃತಿಗಳೂ ಹಾಗೆಂದೇ ಹೇಳುತ್ತಿವೆ. ಆದ್ದರಿಂದ ಒಂದೇ ಫಲವುಳ್ಳ ಉಪಾಸನೆಗಳಲ್ಲಿ ಯಾವದಾದರೊಂದನ್ನು ಆರಿಸಿಕೊಂಡು ಉಪಾಸ್ಯವಿಷಯದ ಸಾಕ್ಷಾತ್ಕಾರದಿಂದ ಆ ಫಲವು ದೊರಕುವವರೆಗೂ ತತ್ಪರನಾಗಿ ಸಾಧನೆ ಮಾಡಬೇಕು - ಎಂಬುದು ಭಾಷ್ಯದ ಅಭಿಪ್ರಾಯ.

ಭಾವನೆಗಳು ಬಲವಾದಹಾಗೆಲ್ಲ ಸಾಕ್ಷಾತ್ಕಾರವು ಹತ್ತಿರವಾಗುತ್ತದೆ. ಆದರೆ ಜ್ಞಾನರೂಪದಿಂದ ಪಡೆದುಕೊಳ್ಳಬೇಕಾಗಿರುವ ಆತ್ಮಾನುಭವವು ಹಾಗೆ ಭಾವನೆಯ ಬಲದಿಂದ ಸಮಾಧ್ಯಾದಿಗಳಲ್ಲಿ ಕಂಡುಹಿಡಿದುಕೊಳ್ಳಬೇಕಾಗಿರುವದಿಲ್ಲ. ನಮ್ಮದೇ ಆಗಿರುವ ಆತ್ಮಸ್ವರೂಪದ ಬಗ್ಗೆ ಮಡಬೇಕಾದದ್ದು ಏನೂ ಇರುವದಿಲ್ಲ. "**ತಸ್ಮಾತ್ ಅವಿದ್ಯಾಧ್ಯಾರೋಪಣನಿರಾಕರಣಮಾತ್ರಂ ಬ್ರಹ್ಮಣಿ ಕರ್ತವ್ಯಮ್ , ನ ತು ಬ್ರಹ್ಮ ವಿಜ್ಞಾನೇ ಯತ್ನಃ , ಅತ್ಯನ್ತಪ್ರಸಿದ್ಧತ್ವಾತ್**" (ಗೀ.ಭಾ. ೧೮-೫೦) ಅವಿದ್ಯೆಯಿಂದ - ತಪ್ಪುತಿಳಿವಳಿಕೆಯಿಂದ ಕಲ್ಪಿಸಿಕೊಂಡಿರುವದನ್ನು ಮಾತ್ರ ನಿರಾಕರಣಮಾಡಿಕೊಳ್ಳಬೇಕೇ ಹೊರತು ಬ್ರಹ್ಮವನ್ನು ಅರಿತುಕೊಳ್ಳುವದಕ್ಕೆ ಮಾಡಬೇಕಾದ ಪ್ರಯತ್ನವು ಯಾವದೂ ಇರುವದಿಲ್ಲ - ಎಂದು ಆಚಾರ್ಯರು ಹೇಳಿರುತ್ತಾರೆ.

ಆತ್ಮಾನುಭವಕ್ಕೆ ಇರುವ ಅಡ್ಡಿಗಳನ್ನು ಶ್ರವಣ, ಮನನ, ನಿದಿಧ್ಯಾಸನಗಳಿಂದ ಕಳೆದುಕೊಳ್ಳಬೇಕಾಗಿರುತ್ತದೆ. ಶ್ರವಣವೆಂದರೆ ಅನಾತ್ಮದಿಂದ ಹಿಂತಿರುಗುವದಕ್ಕೆ ಅನುಕೂಲವಾಗುವಂತೆ ಆತ್ಮಸ್ವರೂಪದ ವಿಷಯದ ವಾಕ್ಯಗಳನ್ನು ಕೇಳಿ ತಿಳಿದು ಕೊಳ್ಳುವದು ; ಮನನವೆಂದರೆ ತತ್ತ್ವವನ್ನು ಅನುಭವಕ್ಕೆ ತಂದುಕೊಳ್ಳುವದಕ್ಕೆ ತಕ್ಕ ಯುಕ್ತಿಗಳನ್ನು ಅನುಸಂಧಾನಮಾಡುವದು ; ನಿದಿಧ್ಯಾಸನವೆಂದರೆ ವಸ್ತುವನ್ನೇ ಏಕಾಗ್ರತೆಯಿಂದ ಸೂಕ್ಷ್ಮದೃಷ್ಟಿಯಿಂದ ನೋಡಿ ಅರಿತುಕೊಳ್ಳುವದು. ಹೀಗೆ ಆತ್ಮನನ್ನು ಅರಿತುಕೊಂಡರೆ ಈಗ ನಾವು ಕಾಣುತ್ತಿರುವದೆಲ್ಲದರ ತತ್ತ್ವವನ್ನೂ ಅರಿತು ಕೊಂಡಂತೆಯೇ ಆಗುವದು.

ಒಂದನ್ನು ಅರಿತರೆ ಎಲ್ಲವನ್ನೂ ಅರಿತಂತೆ ಹೇಗೆ ಆದೀತು ? - ಎಂದು ಶಂಕಿಸಬಾರದು. ಏಕೆಂದರೆ ಆತ್ಮನನ್ನು ಬಿಟ್ಟು ಮತ್ತೇನೂ ಇರುವದೇ ಇಲ್ಲ ; ಆತ್ಮನೇ ಎಲ್ಲವೂ ಆಗಿದ್ದಾನೆ - ಎಂದು ಶ್ರುತಿವಚನವಿದೆ.

**ಸರ್ವಂ ತಂ ಪರಾದಾತ್ ಯೋಽನ್ಯತ್ರಾತ್ಮನಃ ಸರ್ವಂ ವೇದ ಇದಂ ಬ್ರಹ್ಮೇದಂ ಕ್ಷತ್ರಂ ಇಮೇ ಲೋಕಾ ಇಮೇ ದೇವಾ ಇಮೇ ವೇದಾ ಇಮಾನಿ ಭೂತಾನೀದಂ ಸರ್ವಂ ಯದಯಮಾತ್ಮಾ ॥** ಬೃ. ೪-೫-೭.

ಬ್ರಾಹ್ಮಣ್ಯ , ಕ್ಷತ್ರಧರ್ಮ, ಧರ್ಮಕ್ಕೆ ಫಲವಾದ ಲೋಕಗಳು, ಕ್ರಿಯೆಗೆ ಸಂಪ್ರದಾನ ಕಾರಕವಾಗಿರುವ ದೇವತೆಗಳು , ಕರ್ಮಕ್ಕೆ ಬೇಕಾಗಿರುವ ವೇದಗಳು , ಬ್ರಹ್ಮಾದಿ ಸ್ತಂಬಪರ್ಯಂತವಾಗಿರುವ ಪ್ರಾಣಿಗಳು - ಹೆಚ್ಚೇಕೆ , ನಮಗಿಂತ ಬೇರೆಯೆಂದು ನಾವು ಈಗ ಭಾವಿಸಿಕೊಂಡಿರುವದೆಲ್ಲವೂ 'ನನ್ನನ್ನು ಇವನು ಅನಾತ್ಮವೆಂದು ಕಾಣುತ್ತಾನಲ್ಲ!' - ಎಂದು ತಿರಸ್ಕರಿಸಿಬಿಡುತ್ತವೆ. ಇದೆಲ್ಲವೂ ನಿಜವಾಗಿ ಆತ್ಮನೇ , ಹಾಗೆಂದು ಅರಿತುಕೊಂಡರೆ ಪರಮಪುರುಷಾರ್ಥಕ್ಕೆ ಕಾರಣವಾಗಿದ್ದರೂ ' ಈ ಬ್ರಾಹ್ಮಣ್ಯಾದಿಗಳು ನನ್ನ ಸ್ವರೂಪವಲ್ಲ ' - ಎಂದುಕೊಂಡಿರುವವನಿಗೆ ಮಾತ್ರ ಬೇರೆಬೇರೆಯ ಫಲಕ್ಕೆ ಕಾರಣವಾಗಿರುತ್ತದೆ. ಏಕೆಂದರೆ ನಿಜವಾಗಿ ಆತ್ಮನನ್ನು ಬಿಟ್ಟು ಇವುಗಳಲ್ಲಿ ಯಾವದೊಂದೂ ಅರೆಘಳಿಗೆಯೂ ಇರಲಾರದು.

ಇದೆಲ್ಲವೂ ಆತ್ಮನೇ ಎಂದು ಮನಗಾಣುವದಕ್ಕಾಗಿ ಸೃಷ್ಟಿಸ್ಥಿತಿಪ್ರಲಯಗಳಲ್ಲಿ ಆತ್ಮಸ್ವರೂಪದಲ್ಲಿಯೇ ಎಲ್ಲವೂ ಇರುತ್ತದೆ ಎಂಬುದನ್ನು ಅರಿತುಕೊಳ್ಳಬೇಕು. ಸ್ಥಿತಿಕಾಲದಲ್ಲಿ ಎಲ್ಲವೂ ಆತ್ಮನೇ ಎಂಬುದನ್ನು ಯಾಜ್ಞವಲ್ಕ್ಯರು ಹೀಗೆ ಹೇಳಿರುತ್ತಾರೆ :

**ಸ ಯಥಾ ದುಂದುಭೇರ್ಹನ್ಯಮಾನಸ್ಯ ನ ಬಾಹ್ಯಾನ್ ಶಬ್ದಾನ್ ಶಕ್ನುಯಾತ್ ಗ್ರಹಣಾಯ ದುಂದುಭೇಸ್ತು ಗ್ರಹಣೇನ ದುಂದುಭ್ಯಾಘಾತಸ್ಯ ವಾ ಶಬ್ದೋ ಗೃಹೀತಃ ॥** ಬೃ. ೪-೫-೮.

ಯಾವದರ ಸ್ವರೂಪವನ್ನು ಬಿಟ್ಟು ಯಾವದು ಇರುವದಿಲ್ಲವೋ ಅದು ಆ ಸ್ವರೂಪವೇ ಆಗಿರುತ್ತದೆ ; ಉದಾಹರಣೆಗೆ ನಗಾರಿಯನ್ನು ಹೊಡೆಯುತ್ತಿರುವಾಗ ಆಗುವ ಶಬ್ದಗಳನ್ನು 'ಬರಿಯ ಶಬ್ದಗಳು' ಎಂದು ಗ್ರಹಿಸುವದಕ್ಕೆ ಆಗುವದೇ ಇಲ್ಲ . ಇವೆಲ್ಲ ನಗಾರಿಯ ಶಬ್ದದ ವಿಶೇಷರೂಪಗಳೇ ಎಂದುಮಾತ್ರ ಗ್ರಹಿಸುವದಕ್ಕೆ ಆಗುತ್ತದೆ. ಆ ಶಬ್ದಗಳು ತಗ್ಗಾಗಿರಬಹುದು , ಎತ್ತರವಾಗಿರಬಹುದು ; ಒಂದಕ್ಕೊಂದು ಸ್ವಲ್ಪಕಾಲ ವ್ಯವಹಿತವಾಗಿರಬಹುದು, ದೀರ್ಘಕಾಲ ವ್ಯವಹಿತವಾಗಿಯೂ ಇರಬಹುದು ; ಜಯಭೇರಿಶಬ್ದವಾಗಿರಲಿ, ಶೋಕಸೂಚಕವಾಗಿರಲಿ - ಹೇಗೇ ಇದ್ದರೂ ಎಲ್ಲವೂ ನಗಾರಿಯ ಶಬ್ದಗಳೇ. 'ಈಗ ನಗಾರಿಯನ್ನು ಹೊಡೆಯುತ್ತಿರುವದರಿಂದಾದ ಶಬ್ದಗಳೇ ಇವು' ಎಂದು ಎಲ್ಲವುಗಳನ್ನೂ ತಿಳಿಯುವದು ಹೇಗೋ ಹಾಗೆಯೇ ಆತ್ಮನ ಸಂಬಂಧದಿಂದಲೇ ಇವು ಕಾಣುತ್ತವೆ ಎಂದು ಅರಿಯಬಹುದೇ ಹೊರತು ಆತ್ಮನನ್ನು ಬಿಟ್ಟು ಅರಿಯುವದಕ್ಕೆ ಆಗುವದಿಲ್ಲ . ಶಂಖ, ವೀಣೆ - ಮುಂತಾದ ಏತರ ಶಬ್ದಗಳೇ ಆಗಲಿ, ಬಿಡಿಬಿಡಿಯ ಶಬ್ದಗಳೆಲ್ಲ ಶಬ್ದಸಾಮಾನ್ಯದಲ್ಲಿ , ಸ್ಪರ್ಶಗಳೆಲ್ಲ ಸ್ಪರ್ಶಸಾಮಾನ್ಯ ದಲ್ಲಿ , ರೂಪಗಳೆಲ್ಲ ರೂಪಸಾಮಾನ್ಯದಲ್ಲಿ , ರಸಗಳೆಲ್ಲ ರಸಸಾಮಾನ್ಯದಲ್ಲಿ , ಗಂಧಗಳೆಲ್ಲ ಗಂಧಸಾಮಾನ್ಯದಲ್ಲಿ ವಿಶೇಷಗಳೆಂದು ಅರಿಯಬರುವವೇ ಹೊರತು ವಿಶೇಷಗಳೇ ಸ್ವತಂತ್ರವಾಗಿ ತಮ್ಮತಮ್ಮ ರೂಪದಿಂದಲೇ ತಿಳಿಯಬರುವದಿಲ್ಲ. ಶಬ್ದಸ್ಪರ್ಶಾದಿಗಳೆಲ್ಲವೂ ವಿಷಯಗಳಲ್ಲಿ , ವಿಷಯಗಳೆಲ್ಲ ಇಂದ್ರಿಯಾನುಗತವೆಂಬ ರೂಪದಿಂದ , ಇಂದ್ರಿಯಗಳೆಲ್ಲವೂ ಮನಸ್ಸೆಂಬ ರೂಪದಿಂದ ಮನಸ್ಸು ಆತ್ಮರೂಪ ದಿಂದ - ಹೀಗೆ ಅನುಗತವಾಗಿಯೇ ಅರಿಯುವದಕ್ಕೆ ಆಗುತ್ತವೆ. ಆಚಾರ್ಯರು ಹೇಳಿರುವಂತೆ :

**ಪ್ರಜ್ಞಾನವ್ಯತಿರೇಕೇಣ ಸ್ವಪ್ನಜಾಗರಿತಯೋರ್ನ ಕಶ್ಚಿದ್ವಸ್ತು ವಿಶೇಷೋ ಗೃಹ್ಯತೇ । ತಸ್ಮಾತ್ , ಪ್ರಜ್ಞಾನವ್ಯತಿರೇಕೇಣ ಅಭಾವೋ ಯುಕ್ತಸ್ತೇಷಾಮ್॥**

'ಎಚ್ಚರದಲ್ಲಿಯಾಗಲಿ, ಕನಸಿನಲ್ಲಾಗಲಿ ಯಾವದಾದರೊಂದು ವಸ್ತುವೂ ಪ್ರಜ್ಞಾನವನ್ನು ಬಿಟ್ಟು - ಎಂದರೆ ಆತ್ಮಚೈತನ್ಯವನ್ನು ಬಿಟ್ಟು - ಅರಿಯಲಾಗುವದಿಲ್ಲವಾದ್ದ ರಿಂದ ಆ ಚೈತನ್ಯವೇ ಅವುಗಳ ಸ್ವರೂಪವೆಂಬುದು ಯುಕ್ತವಾಗಿರುತ್ತದೆ. ಇಲ್ಲಿ ಪ್ರಜ್ಞಾನವೆಂದರೆ 'ಇದು ಮನೆ ' , 'ಇದು ಬಾಗಿಲು ' - ಎಂದು ಮುಂತಾಗಿ ಆಗುವ

ಬರಿಯರಿವಲ್ಲ; ಈ ಬಗೆಯ ಅರಿವುಗಳು ಹುಟ್ಟಿ ತೋರಿಹಾರಿದಮೇಲೂ ಅವುಗಳ ಹುಟ್ಟುಹೊಂದುಗಳಿಂದ ಯಾವ ಮಾರ್ಪಾಡನ್ನೂ ಹೊಂದದೆ ತಾನು ಇದ್ದಂತೆಯೇ ಎಚ್ಚರದಲ್ಲಿಯೂ ಕನಸಿನಲ್ಲಿಯೂ ಇರುವ , ಎಚ್ಚರಕನಸುಗಳ ಬರವುಹೋಗುಗಳನ್ನು ಕೂಡ ನೋಡುತ್ತಾ ಯಾವ ಮಾರ್ಪಾಡೂ ಇಲ್ಲದೆಇರುವ 'ಕೂಟಸ್ಥಚೈತನ್ಯವು' . ಈ ಚೈತನ್ಯಸ್ವರೂಪವೇ ಆಗಿದ್ದುಕೊಂಡೇ ಸ್ಥಿತಿಕಾಲದಲ್ಲಿ ಯಾವ ವಸ್ತುವಿಶೇಷವಾದರೂ ತೋರಿಕೊಳ್ಳಬೇಕಾಗಿರುತ್ತದೆ.

ಇನ್ನು ಈ ಜಗತ್ತು ಹುಟ್ಟುವಾಗಲೂ ಆತ್ಮನಿಗಿಂತ ಬೇರೆಯಾಗಿ - ಕುದುರೆ ಯಿಂದ ಹುಟ್ಟಿದ ಕುದುರೆಯ ಮರಿಯು ತಾನೇ ಒಕ್ಕಡೆಯಲ್ಲಿ ಹಾರಾಡುತ್ತಿರುವಂತೆ - ಸ್ವತಂತ್ರವಾಗಿರುವದಿಲ್ಲ; ಅಥವಾ ಮತ್ತೊಂದು ಕಾರಣದಿಂದಲೂ ಹುಟ್ಟುವದಿಲ್ಲ.

> **ಸ ಯಥಾ ಆರ್ದ್ರೈಧಾಗ್ನೇರಭ್ಯಾಹಿತಸ್ಯ ಪೃಥಕ್ ಧೂಮಾ ವಿನಿಶ್ಚರನ್ತ್ಯೇವಂ ವಾ ಅರೇ ಅಸ್ಯ ಮಹತೋ ಭೂತಸ್ಯ ನಿಃಶ್ವಸಿತಮೇತದ್ಯದೃಗ್ವೇದೋ ಯಜುರ್ವೇದಃ ಸಾಮವೇದೋ ಅಥರ್ವಾಂಗಿರಸ ಇತಿಹಾಸಃ ಪುರಾಣಂ ವಿದ್ಯಾ ಉಪನಿಷದಃ ಶ್ಲೋಕಾಃ ಸೂತ್ರಾಣ್ಯನುವ್ಯಾಖ್ಯಾನಾನಿ ವ್ಯಾಖ್ಯಾನಾನೀಷ್ಟಂ ಹುತಮಾಶಿತಂ ಪಾಯಿತಮಯಂ ಚ ಲೋಕಃ ಪರಶ್ಚ ಲೋಕಃ ಸರ್ವಾಣಿ ಚ ಭೂತಾನ್ಯಸ್ಯೈವೈತಾನಿ ನಿಃಶ್ವಸಿತಾನಿ ॥**

ಬೃ. ೪-೫-೧೧.

ಹಸಿಯ ಕಟ್ಟಿಗೆಯಿಂದ ಬುಸ್‌ಬುಸ್ಸೆಂದು ಹೊಗೆಯು ಬಗೆಬಗೆಯಾಗಿ ಎದ್ದುಬರುವಂತೆ ಈ ಸ್ವತಃಸಿದ್ಧನಾದ ಆತ್ಮನಿಂದ ಋಗ್ವೇದ , ಯಜುರ್ವೇದ , ಸಾಮವೇದ , ಅಥರ್ವಾಂಗಿರಸ್ಸುಗಳು - ಎಂಬ ನಾಲ್ಕುಬಗೆಯ ಮಂತ್ರಗಳು , ಇತಿಹಾಸ, ಪುರಾಣ , ದೇವಜನವಿದ್ಯೆಯೇ ಮುಂತಾದ ವಿದ್ಯೆಗಳು, ಉಪಾಸನಾ ರೂಪವಾದ ಉಪನಿಷತ್ತುಗಳು , ಶ್ಲೋಕಗಳು - ಎಂಬ ಹೆಸರಿನ ಬ್ರಾಹ್ಮಣಸ್ಥಮಂತ್ರ ಗಳು, ವಸ್ತುಸಂಗ್ರಹವಾಕ್ಯರೂಪವಾದ ಸೂತ್ರಗಳು, ಮಂತ್ರವಿವರಣರೂಪವಾದ ಅನುವ್ಯಾಖ್ಯಾನಗಳು, ಅರ್ಥವಾದಗಳು - ಎಲ್ಲವೂ ಈ ಬ್ರಹ್ಮದ ನಿಃಶ್ವಾಸವೇ ; ಇಷ್ಟಿ ಹೋಮಾದಿಗಳು, ಇಹಲೋಕಪರಲೋಕಗಳು , ಎಲ್ಲಾ ಪ್ರಾಣಿಗಳು - ಇವೆಲ್ಲವೂ ಪರಮಾರ್ಥತತ್ತ್ವವಾದ ಬ್ರಹ್ಮವು ಬಿಟ್ಟ ಉಸಿರೇ. ಪರಮಾತ್ಮನಿಂದ ವೇದಗಳೂ ಲೋಕಗಳೂ ಭೂತಗಳು ಪ್ರಾಣಿಗಳು ಉಸಿರುಬಿಡುವಂತೆ , ಯಾವ ಪ್ರಯತ್ನವೂ ಇಲ್ಲದೆ , ಲೀಲಾನ್ಯಾಯದಿಂದ ಉತ್ಪನ್ನವಾಗಿರುತ್ತವೆ. ವೇದಗಳು ಸರ್ವವಿದ್ಯಾಸ್ಥಾನಗಳ ಮೂಲಗಳು ; ಅವುಗಳುಕೂಡ ಯಾವದೊಂದು ಪ್ರಯತ್ನವೂ ಇಲ್ಲದೆ ಪರಮಾತ್ಮನಿಂದ

ಹುಟ್ಟಿರಬೇಕಾದರೆ ಆ ಪರಮಾತ್ಮನ ಸ್ವರೂಪವು ಹೇಗಿರಬೇಕಾಯಿತು ! ಪ್ರಜ್ಞಾನಘನರೂಪನೇ ಅವನು, ಅವನಿಗಿಂತ ಬೇರೊಂದರಿಂದ ಯಾವ ನಾಮ ರೂಪಗಳೂ ಹುಟ್ಟಿಲ್ಲ; ಮಡಕೆಯು ಮಣ್ಣಿಗಿಂತ ಅವ್ಯತಿರಿಕ್ತವಾಗಿಯೇ ಹುಟ್ಟುವಂತೆ , ಚೈತನ್ಯಾವ್ಯತಿರಿಕ್ತವಾಗಿಯೇ ಜಗತ್ತೆಲ್ಲವೂ ಹುಟ್ಟುತ್ತದೆ. ಸುಷುಪ್ತಿಯಿಂದ ನಾವು ಎಚ್ಚತ್ತಮಾತ್ರದಿಂದ ಇಡಿಯ ನಾಮರೂಪಪ್ರಪಂಚವೇ ತೋರಿಕೊಳ್ಳುವದನ್ನೂ ಸೃಷ್ಟಿಯಿಂದ ನಮ್ಮ ಆತ್ಮಸ್ವರೂಪದಲ್ಲಿ ಯಾವ ವಿಶೇಷವೂ ಆಗಿರುವದಿಲ್ಲ ವೆಂಬುದನ್ನೂ ಇಲ್ಲಿ ಮನದಂದುಕೊಂಡರೆ ಆತ್ಮನಿಂದ ಎಲ್ಲವೂ ಹೇಗೆ ಅನಾಯಾಸವಾಗಿ ಹುಟ್ಟುವದೆಂಬುದರ ಅರ್ಥವು ಸ್ವಲ್ಪಮಟ್ಟಿಗೆ ನಮಗೆ ಮನದಟ್ಟಾದೀತು.

'ವ್ಯಾಕರಣವೇ ಮುಂತಾದ ಶಾಸ್ತ್ರಗಳನ್ನು ರಚಿಸಿರುವ ಪಾಣಿನಿ ಮೊದಲಾದವ ರಂತೆ , ಯಾರಿಂದ ಯಾವ ಶಾಸ್ತ್ರವು ಬಂದಿರುತ್ತದೆಯೋ , ಆ ಗ್ರಂಥಕರ್ತನು ಆ ಶಾಸ್ತ್ರಕ್ಕಿಂತಲೂ ಹೆಚ್ಚು ಜ್ಞಾನವುಳ್ಳವನಾಗಿರುವನು' ಎಂಬ ದೃಷ್ಟಾಂತವನ್ನು ಸೂತ್ರ ಭಾಷ್ಯದಲ್ಲಿ ಕೊಟ್ಟಿದೆ. ಅದನ್ನು ನೋಡಿದರೆ ಪರಮಾತ್ಮನು ಅಲ್ಪಾಯಾಸದಿಂದ ವೇದವನ್ನು ಸೃಷ್ಟಿಸಿರುನೆಂದೂ ಆದ್ದರಿಂದ ಸರ್ವಜ್ಞನೆಂದೂ ಕೆಲವರು ಅರ್ಥವನ್ನು ಮಾಡಿಕೊಳ್ಳುವ ಸಂಭವವಿದೆ. ಆದರೆ ಇಲ್ಲಿ ಪರಮಾತ್ಮನು ವೇದವನ್ನು ರಚಿಸಿದವನು ಎಂಬ ಭಾವವಾಗಲಿ ಆದ್ದರಿಂದ ಅವನು ಎಲ್ಲವನ್ನೂ ಬಲ್ಲವನು ಎಂಬ ಭಾವವಾಗಲಿ ಇರುವದಿಲ್ಲ. ಇಂಥ ಸರ್ವಜ್ಞಕಲ್ಪವಾದ ವೇದವು ಯಾವ ಆತ್ಮತತ್ತ್ವದ ವಿಭೂತಿಯೋ ಆ ತತ್ತ್ವವು ಪ್ರಜ್ಞಾನಘನವೇ ಆಗಿದೆ ಎಂಬುದನ್ನು ಹೇಳುವದೇನಿದೆ ? - ಎಂಬ ಭಾವವನ್ನೇ ಇಲ್ಲಿ ಗ್ರಹಿಸಬೇಕು. ಹೀಗೆಯೇ ಇಹಪರಲೋಕಗಳನ್ನೆಲ್ಲ - ಇಡಿಯ ಜಗತ್ತನ್ನೇ - ಸೃಷ್ಟಿಸಿರುವ ಪರಮಾತ್ಮತತ್ತ್ವವು ಜಗತ್ತಿಗೆಲ್ಲ ಇರವನ್ನು ಕೊಟ್ಟಿರುವ ಸದ್ಘನವಾಗಿದೆ ಎಂಬ ಅಭಿಪ್ರಾಯವನ್ನೂ ಗ್ರಹಿಸಬೇಕು ; ಕುಂಬಾರ, ಬಡಗಿ - ಮುಂತಾದವರಂತೆ ಪರಮಾತ್ಮನು ವ್ಯಾಪಾರ ಪೂರ್ವಕವಾಗಿ ಜಗತ್ತನ್ನು ಸೃಷ್ಟಿಸಿರುನೆಂದೇನೂ ಇಲ್ಲಿ ವಿವಕ್ಷಿತವಲ್ಲ. ಆತ್ಮವಸ್ತುವು ಸಚ್ಚಿನ್ಮಾತ್ರವಾಗಿರುತ್ತದೆಯೇ ಹೊರತು ಅದು ಯಾವದಾದರೊಂದರ ಇರವು , ಯಾವದಾದರೊಂದು ವಿಷಯವನ್ನು ಬೆಳಗುವ ಅರಿವು - ಎಂಬ ಭಾವದ ಸುಳಿವನ್ನೂ ಇಲ್ಲಿ ಬರಗೊಡಕೂಡದು.

ಇನ್ನು ಈ ಜಗತ್ತೆಲ್ಲವೂ ಪ್ರಲಯವಾಗುವಾಗಲೂ - ಗುಳ್ಳೆ , ನೊರೆ - ಮುಂತಾದವುಗಳು ನೀರಿಗಿಂತ ವ್ಯತಿರಿಕ್ತವಾಗಿಲ್ಲದೆ ಎಲ್ಲವೂ ನೀರೇ ಆಗಿಬಿಡುವಂತೆ -

ನಾಮರೂಪಕರ್ಮಾತ್ಮಕವಾಗಿರುವ ಈ ಜಗತ್ತೆಲ್ಲವೂ ಪ್ರಜ್ಞಾನಘನವಾಗಿಯೇ ಆಗಿಬಿಡುತ್ತದೆ. ಇದನ್ನು ದೃಷ್ಟಾಂತಪೂರ್ವಕವಾಗಿ ಯಾಜ್ಞವಲ್ಕ್ಯರು ವಿವರಿಸಿರುವದು ಹೇಗೆಂದರೆ :

**ಸ ಯಥಾ ಸರ್ವಾಸಾಮಪಾಂ ಸಮುದ್ರ ಏಕಾಯನಮೇವಂ ಸರ್ವೇಷಾಂ ಸ್ಪರ್ಶಾನಾಂ ತ್ವಗೇಕಾಯನಮೇವಂ ಸರ್ವೇಷಾಂ ಗಂಧಾನಾಂ ನಾಸಿಕೇ ಏಕಾಯನಮೇವಂ ಸರ್ವೇಷಾಂ ರಸಾನಾಂ ಜಿಹ್ವೈಕಾಯನಮೇವಂ ಸರ್ವೇಷಾಂ ರೂಪಾಣಾಂ ಚಕ್ಷುರೇಕಾಯನಮೇವಂ ಸರ್ವೇಷಾಂ ಶಬ್ದಾನಾಂ ಶ್ರೋತ್ರಮೇಕಾಯನಮೇವಂ ಸರ್ವೇಷಾಂ ಸಂಕಲ್ಪಾನಾಂ ಮನ ಏಕಾಯನಮೇವಂ ಸರ್ವಾಸಾಂ ವಿದ್ಯಾನಾಂ ಹೃದಯಮೇಕಾಯನಮೇವಂ ಸರ್ವೇಷಾಂ ಕರ್ಮಣಾಂ ಹಸ್ತವೇಕಾಯನಮೇವಂ ಸರ್ವೇಷಾಮಾನ ನ್ದಾನಾಮುಪಸ್ಥ ಏಕಾಯನಮೇವಂ ಸರ್ವೇಷಾಂ ವಿಸರ್ಗಾಣಾಂ ಪಾಯುರೇಕಾಯನಮೇವಂ ಸರ್ವೇಷಾಮಧ್ವನಾಂ ಪಾದಾವೇಕಾಯನ ಮೇವಂ ಸರ್ವೇಷಾಂ ವೇದಾನಾಂ ವಾಗೇಕಾಯನಮ್ ॥** ಬೃ. ೪-೫-೧೨.

ನದಿ, ಭಾವಿ, ಕೆರೆ, ಕಟ್ಟೆ - ಮುಂತಾದವುಗಳ ನೀರೆಲ್ಲ ಸಮುದ್ರದಲ್ಲಿ ಒಂದಾಗಿರುವಂತೆ , ಸ್ಪರ್ಶಗಳೆಲ್ಲ ಸ್ಪರ್ಶಸಾಮಾನ್ಯದಲ್ಲಿ , ಆ ಸ್ಪರ್ಶಸಾಮಾನ್ಯವು ಮನಃಸಂಕಲ್ಪದಲ್ಲಿ , ಮನಸ್ಸು ಬುದ್ಧಿಯಲ್ಲಿ , ಬುದ್ಧಿಯು ಪ್ರಜ್ಞಾನಘನವಾದ ಚೈತನ್ಯದಲ್ಲಿ ಅಡಗಿಹೋಗುತ್ತದೆ. ಹೀಗೆಯೇ ಗಂಧಗಳು , ರಸಗಳು, ರೂಪಗಳು, ಶಬ್ದಗಳು, ಸಂಕಲ್ಪಗಳು , ವಿದ್ಯೆಗಳು , ಕರ್ಮಗಳು, ಆನಂದಗಳು, ವಿಸರ್ಗಗಳು, ಹಾದಿಗಳು , ವೇದಗಳು - ಎಲ್ಲಾ ವಿಷಯಗಳೂ ಪರಂಪರೆಯಿಂದ ಚೈತನ್ಯದಲ್ಲಿ ಸೇರಿಹೋಗುವವು.

ಹೀಗೆ ಸೃಷ್ಟಿ, ಸ್ಥಿತಿ , ಪ್ರಲಯ - ಈ ಮೂರು ಕಾಲಗಳಲ್ಲಿಯೂ ಜಗತ್ತು ಚೈತನ್ಯತಾದಾತ್ಮ್ಯದಿಂದಲೇ ಇರುವದರಿಂದ ಇದು ಚೈತನ್ಯೈಕರಸಸ್ವರೂಪ ವಾದ ಆತ್ಮನೇ ಹೊರತು ಅವನಿಗಿಂತ ಬೇರೆಯಲ್ಲ - ಎಂಬುದು ಈವರೆಗಿನ ಮನನದಿಂದ ಗೊತ್ತಾಗುತ್ತದೆ. ಹೀಗೆ ಜಗತ್ತೆಲ್ಲ ಚಿನ್ಮಾತ್ರನಾಗಿರುವ ಪರಮಾತ್ಮನೇ ಎಂದಾಗುವದರಿಂದ ಜೀವಸ್ವರೂಪವೂ ನಿಜವಾಗಿ ಬೇರೆಯಾಗಿರುವದಿಲ್ಲ ; ಹೇಗೆಂದರೆ :

**ಸ ಯಥಾ ಸೈನ್ಧವಘನೋऽನನ್ತರೋऽಬಾಹ್ಯಃ ಕೃತ್ಸ್ನೋ ರಸಘನ ಏವೈವಂ ವಾ ಅರೇऽಯಮಾತ್ಮಾऽನನ್ತರೋऽಬಾಹ್ಯಃ ಕೃತ್ಸ್ನಃ ಪ್ರಜ್ಞಾನಘನ ಏವೈತೇಭ್ಯೋ ಭೂತೇಭ್ಯಃ ಸಮುತ್ಥಾಯ ತಾನ್ಯೇವಾನುವಿನಶ್ಯತಿ ನ ಪ್ರೇತ್ಯ ಸಂಜ್ಞಾಸ್ತೀತ್ಯರೇ ಬ್ರವೀಮೀತಿ ಹೋವಾಚ ಯಾಜ್ಞವಲ್ಕ್ಯಃ ॥**

ಬೃ. ೪-೫-೧೩.

ಒಂದು ಉಪ್ಪಿನಹರಳು ಒಳಗೆ, ಹೊರಗೆ - ಎಂಬ ಭೇದವಿಲ್ಲದೆ ಎಲ್ಲೆಲ್ಲಿಯೂ ಹೇಗೆ ಉಪ್ಪುಪ್ಪಾಗಿಯೇ ಇರುವದೋ ಅದರಂತೆಯೇ ಈ ಆತ್ಮನು , ಒಳಗುಹೊರಗೆಂಬ ಭೇದವಿಲ್ಲದೆ ಪೂರ್ಣವಾಗಿಯೂ ಪ್ರಜ್ಞಾನಘನನೇ ಆಗಿರುತ್ತಾನೆ. ತಪ್ಪುತಿಳಿವಳಿಕೆಯಿಂದ ಮಾತ್ರವೇ ನಾಮರೂಪಗಳು ಕಲ್ಪಿತವಾಗಿದ್ದರೂ ನಿಜವಾಗಿರುವಂತೆ ತೋರುತ್ತಿರುವವು. ಆ ನಾಮರೂಪಗಳಿಂದಾಗಿರುವ ಕಾರ್ಯಕರಣಸಂಘಾತವೆಂಬ ಉಪಾಧಿಯಿಂದ ಅದೇ ಆತ್ಮನೇ ಅನೇಕ ಜೀವರುಗಳ ರೂಪದಲ್ಲಿ ಕಾಣುತ್ತಿರುವನು ; ಈ ಜೀವನ ದೃಷ್ಟಿಯಿಂದ ಈ ಜಗತ್ತು ಕ್ರಿಯಾಕಾರಕಫಲಗಳ ರಾಶಿಯಾಗಿ ಕಾಣುತ್ತಿರುವದು . ಕಾಲದೇಶ ನಿಮಿತ್ತಗಳಿಗೆ ಹೊಂದಿಕೊಂಡು ಆಯಾ ಕರ್ಮಗಳನ್ನು ಮಾಡಿ ಜೀವರುಗಳು ಆಯಾ ಫಲವನ್ನು ಅನುಭವಿಸುತ್ತಿರುವಂತೆ ಕಾಣುತ್ತಿರುವರು. ದೃಷ್ಟಾಂತದ ಉಪ್ಪಿನ ಹರಳು ನೀರಿನಲ್ಲಿ ಕರಗಿದಾಗ ಅದರ ರೂಪವು ಹೋಗಿ ಹೇಗೆ ಎಲ್ಲವೂ ನೀರೇ ಆಗಿಬಿಡುವದೋ, ಹಾಗೆಯೇ ತತ್ತ್ವಜ್ಞಾನ ದೃಷ್ಟಿಯಿಂದ ನೋಡಿದಾಗ ಶರೀರ, ಇಂದ್ರಿಯ, ಮನಸ್ಸು - ಎಂಬ ಭೇದವೂ ಇರುವದಿಲ್ಲ. ಎಲ್ಲವೂ ವಿದ್ಯೆಯಿಂದ ಕರಗಿ ಪ್ರಜ್ಞಾನಘನವೇ ಆಗಿಬಿಟ್ಟಿರುತ್ತದೆ. ಅವಿದ್ಯೆಯಿಂದಾಗಿರುವ ಆಧ್ಯಾತ್ಮಿಕಜಗದ್ಭಾಗವಾಗಲಿ ಆಧಿಭೌತಿಕ, ಆಧಿದೈವಿಕ - ಎಂಬ ವಿಭಾಗದ ಜಗತ್ತಾಗಲಿ ಇರುವದೇಇಲ್ಲ. ಎಲ್ಲೆಲ್ಲಿಯೂ ಪ್ರಜ್ಞಾನಘನವಾದ ಪರಮಾತ್ಮವಸ್ತುವೊಂದೇ ಇರುವದೆಂಬುದು ಅನುಭವಕ್ಕೆ ಬರುವದು.

ಈ ಶರೀರೇಂದ್ರಿಯಗಳ ಸಂಘಾತವು ಇರುವವರೆಗೆ ವಿಶೇಷಜ್ಞಾನವಿರುವದು. ಈ ಜ್ಞಾನಕ್ಕೆ ವಿಷಯವಾಗಿ ಶಬ್ದಸ್ಪರ್ಶರೂಪರಸಗಂಧಗಳೆಂಬ ವಿಷಯಗಳು ಗೋಚರಿಸುತ್ತಿರುವವು . ತನ್ನಂತೆಯೇ ಶರೀರೇಂದ್ರಿಯಸಂಘಾತದಿಂದ ಪರಿಚ್ಛಿನ್ನರಾದ ಅನಂತಜೀವರುಗಳಿರುವರು. ಅವರಿಗೂ ತನಗೂ ಸಂಬಂಧವಿರುವಂತೆಯೂ ಅವರಲ್ಲಿ ಮಿತ್ರ , ಶತ್ರು , ಉದಾಸೀನ - ಮಧ್ಯಸ್ಥ, ದ್ವೇಷ್ಯ , ಬಂಧು -ಎಂಬ ವಿಭಾಗವಿರುವಂತೆಯೂ ಅವರಲ್ಲಿ ತಾನು ರಾಗದ್ವೇಷಮೋಹಗಳಿಂದ ಬಗೆಬಗೆಯ ರೀತಿಯಲ್ಲಿ

ನಡೆದುಕೊಳ್ಳುತ್ತಲೂ ಪುಣ್ಯಪಾಪಗಳನ್ನು ಮಾಡಿ ಇಹಾಮುತ್ರಫಲಗಳನ್ನು ಅನುಭವಿಸುತ್ತಿರುವಂತೆಯೂ ಬಗೆಬಗೆಯ ಜನ್ಮಗಳನ್ನು ಅನುಭವಿಸುತ್ತಿರುವಂತೆಯೂ ಕಾಣುತ್ತಿರುವದು.

**ಯತ್ರ ಹಿ ದ್ವೈತಮಿವ ಭವತಿ ತದಿತರ ಇತರಂ ಪಶ್ಯತಿ ತದಿತರ ಇತರಂ ಜಿಘ್ರತಿ ತದಿತರ ಇತರಂ ರಸಯತೇ ತದಿತರ ಇತರಮಭಿವದತಿ ತದಿತರ ಇತರಂ ಶೃಣೋತಿ ತದಿತರ ಇತರಂ ಮನುತೇ ತದಿತರ ಇತರಂ ಸ್ಪೃಶತಿ ತದಿತರ ಇತರಂ ವಿಜಾನಾತಿ ಯತ್ರ ತ್ವಸ್ಯ ಸರ್ವಮಾತ್ಮೈವಾಭೂತ್ ತತ್ ಕೇನ ಕಂ ಪಶ್ಯೇತ್ ತತ್ ಕೇನಂ ಕಂ ಜಿಘ್ರೇತ್ ತತ್ಕೇನ ಕಂ ರಸಯೇತ್ ತತ್ಕೇನ ಕಮಭಿವದೇತ್ ತತ್ಕೇನ ಕಂ ಶೃಣುಯಾತ್ ತತ್ಕೇನ ಕಂ ಮನ್ವೀತ ತತ್ಕೇನ ಕಂ ಸ್ಪೃಶೇತ್ ತತ್ಕೇನ ಕಂ ವಿಜಾನೀಯಾತ್ ಯೇನೇದಂ ಸರ್ವಂ ವಿಜಾನಾತಿ ಕಂ ಕೇನ ವಿಜಾನೀಯಾತ್ ॥** ಬೃ. ೪-೫-೧೫.

ಸ್ವಪ್ನದಲ್ಲಿ ಕಾಣುವ ಕಲ್ಪಿತಪ್ರಪಂಚದಲ್ಲಿ ಒಬ್ಬನು ಮತ್ತೊಬ್ಬನನ್ನು ನೋಡುವದು, ಕೇಳುವದು, ಮೂಸುವದು, ಮುಟ್ಟುವದು, ಯೋಚಿಸುವದು, ಅರಿಯುವದು – ಹೀಗೆಲ್ಲ ಮಾಡುತ್ತಿರುವಂತೆ ಕಾಣಬಹುದು. ಆದರೆ ಎಚ್ಚೆತ್ತ ಕೂಡಲೇ ಅದೆಲ್ಲ ಹೇಗೆ ಬರಿಯ ಹುಸಿತೋರಿಕೆಯಾಗಿಬಿಡುವದೋ ಹಾಗೆಯೇ ಅಜ್ಞಾನದಿಂದಾಗಿರುವ ಜೀವಭಾವಕ್ಕೆ ಕಾರಣವಾದ ಕಾರ್ಯಕರಣಸಂಘಾತವೆಂಬ ಉಪಾಧಿಯು ವಿದ್ಯೆಯಿಂದ ಕರಗಿ ಎಲ್ಲವೂ ಚಿನ್ಮಾತ್ರಸಾಗರವೇ ಆಗಿಬಿಟ್ಟಾಗ ಯಾರನ್ನು ಕಾಣುವದು , ಏನನ್ನು ಕೇಳುವದು, ಯಾವ ಪಾಪವನ್ನು ಅಥವಾ ಪುಣ್ಯವನ್ನು ಮಾಡುವದು, ಅಥವಾ ಎಲ್ಲಿ ಯಾವ ಕರ್ಮಫಲವನ್ನು ಅನುಭವಿಸುವದು ? ಆ ದೃಷ್ಟಿಯಿಂದ ನೋಡಿದಾಗ ಆತ್ಮನನ್ನು ಅರಿಯುತ್ತೇವೆಂಬುದುಕೂಡ ಸುಳ್ಳಾಗಿಬಿಡುವದು. ಏಕೆಂದರೆ ಎಲ್ಲವನ್ನೂ ಚೈತನ್ಯದ ಬೆಳಕಿನಿಂದ ಬೆಳಗುತ್ತಾ ವಿಶೇಷ ಜ್ಞಾನಕ್ಕೆ ಕಾರಣನಾಗಿದ್ದ ಆತ್ಮನನ್ನು ಯಾರು ಏತರಿಂದ ಅರಿಯಬೇಕು ?

ಸ ಏಷ ನೇತಿ ನೇತ್ಯಾತ್ಮಾಽಗೃಹ್ಯೋ ನ ಹಿ ಗೃಹ್ಯತೇಽಶೀರ್ಯೋ ನ ಹಿ ಶೀರ್ಯತೇ ಅಸಂಗೋ ನ ಹಿ ಸಜ್ಜತೇಽಸಿತೋ ನ ವ್ಯಥತೇ ನ ರಿಷ್ಯತಿ ವಿಜ್ಞಾತಾರಮರೇ ಕೇನ ವಿಜಾನೀಯಾದಿತ್ಯುಕ್ತಾನುಶಾಸನಾಸಿ ಮೈತ್ರೇಯಿ ಏತಾವದರೇ ಖಲ್ವಮೃತತ್ವಂ ಇತಿ ಹೋಕ್ತ್ವಾ ಯಾಜ್ಞವಲ್ಕ್ಯೋ ವಿಜಹಾರ ॥

ಬೃ. ೪-೫-೧೫.

ಈ ಆತ್ಮನನ್ನು 'ನೇತಿ ನೇತಿ' ಹೀಗಲ್ಲ, ಹೀಗಲ್ಲ - ಎಂದೇ ತಿಳಿಯಬೇಕು. ಯಾವ ರೀತಿಯಿಂದಲೂ ತಿಳಿಯುವದಕ್ಕೆ ಆಗುವವನಲ್ಲ ಇವನು, ಇವನನ್ನು ಹಿಡಿಯುವದಕ್ಕಾಗದು, ನಾಶಪಡಿಸುವದಕ್ಕಾಗದು, ಏತರ ಸೋಂಕೂ ಇಲ್ಲದವನು, ಯಾವ ವ್ಯಥೆಯೂ ಇಲ್ಲದವನು, ಎಲ್ಲವನ್ನೂ ಅರಿಯುವಾತನಾಗಿದ್ದವನು ಇವನೇ, ಆಗಲೂ ಅವನನ್ನು ಅರಿಯುವದಕ್ಕಾಗುತ್ತಿರಲಿಲ್ಲ , ಇನ್ನು ಈ ಜ್ಞಾತೃಜ್ಞಾನಜ್ಞೇಯಗಳೆಂಬ ವಿಭಾಗವೇ ಇಲ್ಲದವನೆಂದು ಅಧ್ಯಾತ್ಮವಿದ್ಯೆಯಿಂದ ನಿಶ್ಚಿತವಾದಬಳಿಕ ಅವನನ್ನು ಏತರಿಂದ ಅರಿಯಬೇಕು ? ಇಂಥ ನಿರ್ವಿಶೇಷಸ್ವರೂಪನು, ಅಸಂಸಾರಿಯು, ನಿತ್ಯಶುದ್ಧಬುದ್ಧಮುಕ್ತಸ್ವಭಾವನು , ಇವನು.

ಇಷ್ಟೇ ಅಮೃತತ್ವಕ್ಕೆ ಸಾಧನವಾದ ಅಧ್ಯಾತ್ಮವಿದ್ಯೆ ಎಂದು ತಿಳಿಸಿಕೊಟ್ಟು ಮೈತ್ರೇಯಿಯನ್ನು ಕೃತಾರ್ಥಳನ್ನಾಗಿ ಮಾಡಿ ಯಾಜ್ಞವಲ್ಕ್ಯರು ತಾವೂ ಪರಮಾತ್ಮನ ಚಿಂತೆಗೆಂದು ಹೊರಟುಹೋದರು. ಇದೇ ಅಧ್ಯಾತ್ಮವಿದ್ಯೆಯ ಸಾರ :

**ಬ್ರಹ್ಮೈವೇದಮಮೃತಂ ಪುರಸ್ತಾದ್ಬ್ರಹ್ಮ ಪಶ್ಚಾದ್ ಬ್ರಹ್ಮ ದಕ್ಷಿಣ-ತಶ್ಚೋತ್ತರೇಣ । ಅಧಶ್ಚೋರ್ಧ್ವಂ ಚ ಪ್ರಸೃತಂ ಬ್ರಹ್ಮೈವೇದಂ ವಿಶ್ವಮಿದಂ ವರಿಷ್ಠಮ್ ॥**

ಅಬ್ರಹ್ಮಪ್ರತ್ಯಯವೆಲ್ಲವೂ ಅವಿದ್ಯಾಮಾತ್ರವೇ, ಪರಮಾರ್ಥವಾಗಿ ನೋಡಿದರೆ ಮುಂದೆ ಹರಡಿರುವದು ಬ್ರಹ್ಮವೇ, ಹಿಂದೆ ಬ್ರಹ್ಮವೇ, ಬಲಕ್ಕೂ ಎಡಕ್ಕೂ ಬ್ರಹ್ಮವೇ, ಕೆಳಗೆ, ಮೇಲಕ್ಕೆ - ಎಲ್ಲೆಲ್ಲಿಯೂ ಬ್ರಹ್ಮವೇ. ಈ ವಿಶ್ವವೆಲ್ಲವೂ ಅತ್ಯಂತವರಣೀಯವಾದ ಬ್ರಹ್ಮವೇ . ಈ ಬ್ರಹ್ಮವನ್ನು ಅರಿತವನು ಅಜರಾಮರಾಮೃತವಾದ ಅಭಯಬ್ರಹ್ಮವೇ ಆಗಿರತ್ತಾನೆ.

ಶ್ರುತಿಗಳಲ್ಲಿ ಈ ಬ್ರಹ್ಮವನ್ನು ತಿಳಿಯಿಸುವದಕ್ಕೆ ಬಗೆಬಗೆಯ ಪ್ರಕ್ರಿಯೆಗಳನ್ನು ಉಪಯೋಗಿಸಿದೆ. ಈಗ ನಾವು ಹೇಳಿರುವದು ಅವಸ್ಥಾತ್ರಯಪ್ರಕ್ರಿಯೆ ಮತ್ತು ಸೃಷಿಪ್ರಕ್ರಿಯೆ . ಯಾವ ಪ್ರಕ್ರಿಯೆಯೇ ಆಗಲಿ, ಬೋಧನೆಗೆ ಉಪಾಯಮಾತ್ರವೇ; ಶ್ರುತಿಗೆ ಅದರಲ್ಲಿ ತಾತ್ಪರ್ಯವಿಲ್ಲ ಬೃಹದಾರಣ್ಯಕಭಾಷ್ಯದಲ್ಲಿ ಈ ವಿಷಯಕ್ಕೆ ಹೀಗೆಂದು ಬರೆದಿದೆ.

**"ಏತಸ್ಯೈವಾರ್ಥಸ್ಯ ಸಮ್ಯಕ್ಪ್ರಬೋಧಾಯ ಉತ್ಪತ್ತಿಸ್ಥಿತಿಪ್ರಲಯಾದಿಕಲ್ಪನಾ ಕ್ರಿಯಾಕಾರಕಫಲಾಧ್ಯಾರೋಪಣಾ ಚ ಆತ್ಮನಿ ಕೃತಾ । ತದಪೋಹೇನ 'ನೇತಿನೇತಿ' ಇತ್ಯಧ್ಯಾರೋಪಿತವಿಶೇಷಾಪನಯನೇನ ಪುನಃ ಪುನಸ್ತತ್ತ್ವ**

ಮಾವೇದಿತಮ್ । ಯಥಾ ಏಕಪ್ರಭೃತ್ಯಾಪರಾರ್ಧಸಙ್ಖ್ಯಾಸ್ವರೂಪಪರಿಜ್ಞಾನಾಯ ರೇಖಾಧ್ಯಾರೋಪಣಂ ಕೃತ್ವಾ 'ಏಕೇಯಂ ರೇಖಾ', 'ದಶೇಯಂ', 'ಶತೇಯಂ', 'ಸಹಸ್ರೇಯಮ್' ಇತಿ ಗ್ರಾಹಯತಿ, ಅವಗಮಯತಿ ಸಙ್ಖ್ಯಾಸ್ವರೂಪಂ ಕೇವಲಮ್, ನ ತು ಸಙ್ಖ್ಯಾಯಾ ರೇಖಾತ್ಮತ್ವಮೇವ ; ಯಥಾ ಚ ಅಕಾರಾದೀನಿ ಅಕ್ಷರಾಣಿ ವಿಜಿಗ್ರಾಹಯಿಷುಃ ಪತ್ರಮಷೀರೇಖಾದಿಸಂಯೋಗೋಪಾಯಮಾಸ್ಥಾಯ ವರ್ಣಾನಾಂ ಸತತ್ತ್ವಮಾವೇದಯತಿ, ನ ಪತ್ರಮಷ್ಯಾದ್ಯಾತ್ಮತಾಮ್ ಅಕ್ಷರಾಣಾಂ ಗ್ರಾಹಯತಿ, ತಥಾ ಚ ಇಹ ಉತ್ಪತ್ತ್ಯಾದ್ಯನೇಕೋಪಾಯಮಾಸ್ಥಾಯ ಏಕಂ ಬ್ರಹ್ಮತತ್ತ್ವಮ್ ಆವೇದಿತಮ್ । ಪುನಃ ತತ್ಕಲ್ಪಿತೋಪಾಯಜನಿತವಿಶೇಷ ಪರಿಶೋಧನಾರ್ಥಂ 'ನೇತಿ ನೇತಿ' ಇತಿ ತತ್ತ್ವೋಪಸಂಹಾರಃ ಕೃತಃ ॥

ಬೃ. ಭಾ. ೪-೪-೨೫.

ಬ್ರಹ್ಮಾತ್ಮೈಕತ್ವವನ್ನು ತಿಳಿಸಿಕೊಡುವದಕ್ಕಾಗಿಯೇ ಉತ್ಪತ್ತ್ಯಾದಿಪ್ರಕ್ರಿಯೆಯನ್ನು ಬಳಸಿರುತ್ತದೆ. ಮತ್ತೆ ಆ ಆರೋಪವನ್ನು ಅಲ್ಲಗಳೆದು 'ಇದಲ್ಲ', 'ಇದಲ್ಲ' - ಎಂದು ತತ್ತ್ವವನ್ನು ತಿಳಿಸಿಕೊಟ್ಟಿರುತ್ತದೆ. ಹೇಗೆ ಒಂದರಿಂದ ಹಿಡಿದು ಪರಾರ್ಧದವರೆಗಿನ ಸಂಖ್ಯೆಗಳ ಸ್ವರೂಪವನ್ನು ತಿಳಿಸಿಕೊಡುವದಕ್ಕಾಗಿ ರೇಖೆಗಳನ್ನು ಅಧ್ಯಾರೋಪಣ ಮಾಡಿ, ಕೊನೆಗೆ ಸಂಖ್ಯಾಸ್ವರೂಪವನ್ನೇ ತಿಳಿಸುತ್ತಾರೋ, ಸಂಖ್ಯೆಯೆಂದರೆ ಗೆರೆ ಎಂದೇನೂ ಹೇಗೆ ಹೇಳಿ ನಿಲ್ಲಿಸುವದಿಲ್ಲವೋ, ಮತ್ತು ಹೇಗೆ ಅಕಾರಾದ್ಯಕ್ಷರಗಳನ್ನು ಬೋಧಿಸುವದಕ್ಕಾಗಿ ಕಾಗದ, ಮಷೀರೇಖೆ - ಮುಂತಾದ ಉಪಾಯಗಳನ್ನು ಬಳಸಿಕೊಂಡು ಅಕ್ಷರಗಳ ತತ್ತ್ವವನ್ನು ಹೇಳಿಕೊಡುತ್ತಾರೋ ಅಕ್ಷರವೆಂದರೆ ಕಾಗದ, ಮಷಿ -ಮುಂತಾದವೇ ಎಂದೇನೂ ಹೇಳಿ ನಿಲ್ಲಿಸುವದಿಲ್ಲವೋ - ಹಾಗೆಯೇ ಇಲ್ಲಿ ಅನೇಕವಾಗಿ ಉತ್ಪತ್ತ್ಯಾದ್ಯುಪಾಯಗಳನ್ನು ಇಟ್ಟುಕೊಂಡು ಬ್ರಹ್ಮತತ್ತ್ವವನ್ನು ಹೇಳಿಕೊಟ್ಟು, ಮತ್ತೆ ಆ ಕಲ್ಪಿತವಾದ ಉಪಾಯಗಳನ್ನು ತೊಡೆದುಹಾಕುವದಕ್ಕಾಗಿ 'ನೇತಿ ನೇತಿ' ಎಂದು ತತ್ತ್ವೋಪಸಂಹಾರವನ್ನು ಮಾಡಿರುತ್ತದೆ.

# ೨೬. ಅಧ್ಯಾತ್ಮವಿದ್ಯೆಯ ಪ್ರಯೋಜನ

(20-9-64)

ಈವರೆಗೆ ಜ್ಞಾನಪ್ರಧಾನವಾಗಿ ಅಧ್ಯಾತ್ಮವಿದ್ಯೆಯನ್ನು ತಿಳಿಸಿದ್ದಾಗಿರುತ್ತದೆ. ಆ ದೃಷ್ಟಿಯಿಂದ ಈ ಜಗತ್ತೆಲ್ಲವೂ ಬ್ರಹ್ಮವೇ, ಬ್ರಹ್ಮಕ್ಕಿಂತ ವ್ಯತಿರಿಕ್ತವಾಗಿ ಏನೇನೂ ಇರುವದೇ ಇಲ್ಲ. ಮನುಷ್ಯನಿಗೆ ಸ್ವಾಭಾವಿಕವಾಗಿ ಇಂದ್ರಿಯದೃಷ್ಟಿಯಿಂದ ದ್ವೈತವೇ ಕಾಣುತ್ತಿರುತ್ತದೆ ಎಂಬುದು ನಿಜ ; ಆದರೆ ನಮಗೆ ಇಂದ್ರಿಯವ್ಯವಹಾರದ ದೃಷ್ಟಿಯೊಂದೇ ಇರುವದಿಲ್ಲ ; ಮನಸ್ಸೂ ಇದೆ , ಅದನ್ನು ಮೀರಿದ ಎಲ್ಲವನ್ನೂ ಅರಿಯುವ ಅನುಭವವೂ ಇದೆ. ಆ ಪೂರ್ಣದೃಷ್ಟಿಯಿಂದಲೇ ತತ್ತ್ವವನ್ನು ನಿರ್ಣಯಿಸಿಕೊಳ್ಳುವದು ಯುಕ್ತವಾಗಿರುತ್ತದೆ. ಈ ಜಗತ್ತಿನ ವಿಷಯಕ್ಕೆ ನಮ್ಮ ವಿಚಾರಶಕ್ತಿಯು ಹೆಚ್ಚಿದಂತೆಲ್ಲ ನಮ್ಮ ತಿಳಿವಳಿಕೆಯೂ ಬದಲಾಯಿಸುತ್ತಾ ಹೋಗಬಹುದು. ಆದರೆ ಈ ಎಲ್ಲಾ ಮಾರ್ಪಾಡೂ ಜಾಗ್ರದವಸ್ಥೆಗೆ ಮಾತ್ರವೇ ಸೇರಿರುತ್ತದೆಯಾದ್ದರಿಂದ ವಿಜ್ಞಾನವು ಇನ್ನು ಎಷ್ಟೇ ಬೆಳೆಯಲಿ , ಜಗತ್ತು ಎಷ್ಟೇ ವಿಕಾರವನ್ನು ತಳೆಯಲಿ , ಆ ವಿಕಾರಗಳೆಲ್ಲವೂ ಜಾಗ್ರದವಸ್ಥೆಯನ್ನು ಬಿಟ್ಟು ಸ್ವಲ್ಪವೂ ಆಚೆಗೆ ಹೋಗಲಾರದು. ಆದ್ದರಿಂದ ಅವಸ್ಥಾತ್ರಯವನ್ನು ಪೂರ ವಿಚಾರಮಾಡಿ ನಿರ್ಣಯಿಸುವದೇ ಕೊನೆಯ ಸಿದ್ಧಾಂತವಾಗುವದು. ಐತದಾತ್ಮ್ಯಮಿದಂ ಸರ್ವಂ ತತ್ಸತ್ಯಂ ಸ ಆತ್ಮಾ ತತ್ತ್ವಮಸಿ ॥ ( ಈ ಜಗತ್ತೆಲ್ಲಕ್ಕೂ ಅದೇ ತಿರುಳು ; ಅದೇ ಸತ್ಯವು . ಅದೇ ನಿಜವಾಗಿ ಆತ್ಮನು, ಅದೇ ನೀನು); ಎಂಬ ವೇದಾಂತದ ತೀರ್ಮಾನವೇ ಕಟ್ಟಕಡೆಯ ತೀರ್ಪಾಗಿ ನಿಲ್ಲಬೇಕು.

ಈ ವೇದಾಂತಜ್ಞಾನದಿಂದ ಆಗುವ ಪ್ರಯೋಜನವೇನು ? - ಎಂದು ಕೆಲವರು ಕೇಳುತ್ತಾರೆ. 'ಪ್ರಯೋಜನವೆಂದರೇನು ? ' ಎಂಬ ಪ್ರಶ್ನೆಗೆ ಅವರು ಕೊಡುವ ಅರ್ಥವನ್ನವಲಂಬಿಸಿಯೇ ಅವರು ಕೇಳುವ ಪ್ರಶ್ನೆಗೆ ಉತ್ತರವನ್ನು ಹೇಳಬೇಕಾಗಿದೆ. ಈಗಿನ ಜನರು ವ್ಯವಹಾರಕ್ಕೇ ಹೆಚ್ಚಿನ ಬೆಲೆಯನ್ನು ಕೊಡುವವರಾದ್ದರಿಂದ ಈ ಜ್ಞಾನಕ್ಕೆ ವ್ಯವಹಾರದಲ್ಲಿ ಏನು ಬೆಲೆ ? - ಎಂದೇ ಅವರ ಪ್ರಶ್ನೆಯಲ್ಲಿ ಅಡಗಿರುವ ಅಭಿಪ್ರಾಯವಿರಬೇಕು. ಅಧ್ಯಾತ್ಮವಿದ್ಯೆಯನ್ನು ಭಗವಂತನು ಅರ್ಜುನನಿಗೆ ಒಂದು ಮಹಾಯುದ್ಧದ ಸಂದರ್ಭದಲ್ಲಿ ಉಪದೇಶಿಸಿದನು. ಅರ್ಜುನನು ಈ ಉಪದೇಶವನ್ನು ಕೇಳಿ '**ನಷ್ಟೋ ಮೋಹಃ ಸ್ಮೃತಿರ್ಲಬ್ಧಾ ತ್ವತ್ಪ್ರಸಾದಾನ್ಮಯಾಽಚ್ಯುತ । ಸ್ಥಿತೋಽಸ್ಮಿ ಗತಸಂದೇಹಃ ಕರಿಷ್ಯೇ ವಚನಂ ತವ ॥** ' (ನಿನ್ನ ಪ್ರಸಾದದಿಂದ ಮೋಹವು ಹೋಯಿತು, ತತ್ತ್ವದ ನೆನಪಾಯಿತು. ಸಂದೇಹವನ್ನೆಲ್ಲ ಕಳೆದುಕೊಂಡಿರುತ್ತೇನೆ, ನೀನು ಹೇಳಿದಂತೆ

ಮಾಡುವೆನು) ಎಂದು ಅರ್ಜುನನು ಯುದ್ಧಕ್ಕೆ ಸೊಂಟವನ್ನು ಕಟ್ಟಿನಿಂತನು. ಇದರಿಂದ ತತ್ತ್ವಜ್ಞಾನವು ಕರ್ತವ್ಯದ ವಿಷಯಕ್ಕಿರುವ ಅಜ್ಞಾನಮೋಹವನ್ನು ನೀಗಿ ವ್ಯವಹಾರದಲ್ಲಿ ಮುನ್ನುಗ್ಗಿಸುವಷ್ಟು ಬಲಾಧಾಯಕವಾಗಿರುವದೆಂದು ಹೇಳಬಹುದಷ್ಟೆ ; ಭಗವದ್ಗೀತೆಯಲ್ಲಿ :

**ಯಸ್ತ್ವಾತ್ಮರತೀರೇವ ಸ್ಯಾದಾತ್ಮತೃಪ್ತಶ್ಚ ಮಾನವಃ।**
**ಆತ್ಮನ್ಯೇವ ಚ ಸಂತುಷ್ಟಸ್ತಸ್ಯ ಕಾರ್ಯಂ ನ ವಿದ್ಯತೇ ॥**
**ನೈವ ತಸ್ಯ ಕೃತೇನಾರ್ಥೋ ನಾಕೃತೇನೇಹ ಕಶ್ಚನ।**
**ನ ಚಾಸ್ಯ ಸರ್ವಭೂತೇಷು ಕಶ್ಚಿದರ್ಥವ್ಯಪಾಶ್ರಯಃ ॥** ಗೀ.೧೩-೧೭, ೧೮.

''ಯಾವನು ಆತ್ಮರತನಾಗಿಯೇ ಇರುವನೋ ಆತ್ಮತೃಪ್ತನಾಗಿಯೇ ಇರುವನೋ ಆತ್ಮನಲ್ಲಿಯೇ ಸಂತುಷ್ಟಿಯನ್ನು ಹೊಂದಿರುವನೋ ಅವನಿಗೆ ಮಾಡಬೇಕಾದ ಕರ್ತವ್ಯ ವಿರುವದಿಲ್ಲ. ಅವನಿಗೆ ಮಾಡಿದ್ದರಿಂದಾಗಲಿ, ಬಿಟ್ಟಿದ್ದರಿಂದಾಗಲಿ - ಆಗುವ ಲಾಭನಷ್ಟ ಗಳಿರುವದಿಲ್ಲ, ಅವನು ಬ್ರಹ್ಮಾದಿಸ್ತಂಬಾಂತವಾಗಿರುವ ಯಾವದೊಂದು ಪ್ರಾಣಿಯನ್ನೂ ಅವಲಂಬಿಸಿ ಸಾಧಿಸಿಕೊಳ್ಳಬೇಕಾಗಿರುವ ಪ್ರಯೋಜನವೂ ಯಾವದೊಂದೂ ಇರುವದಿಲ್ಲ'' ಎಂದಿರುವದನ್ನು ನೋಡಿ ವೇದಾಂತವು ಸೋಮಾರಿತನಕ್ಕೆ ಅಡಿಗಲ್ಲಾಗಿರುತ್ತದೆ ಎಂದು ಕೆಲವರು ಅವಿವೇಕಿಗಳು ಭಾವಿಸಿರುತ್ತಾರೆ. 'ಎಲೈ ರಾಜನೆ, ಯಾವ ಪ್ರಯತ್ನವನ್ನೂ ಮಾಡದೆ ಸುಮ್ಮನೆ ನಿಂತಲ್ಲಿ ನಿಂತಿರುವವು ಮರಗಿಡಗಳ ಜನ್ಮದಲ್ಲಿರುವ ಸ್ಥಾವರಗಳೇ ಹೊರತು ಮಿಕ್ಕ ಜೀವರಲ್ಲ' ಎಂದು ದ್ರೌಪದಿಯು ಧರ್ಮರಾಯನಿಗೆ ಹೇಳಿದಳೆಂದು ಮಹಾಭಾರತದಲ್ಲಿದೆ. **'ಮಾ ತೇ ಸಂಗೋಽಸ್ತ್ವ ಕರ್ಮಣಿ '** ಎಂದು ಗೀತೆಯಲ್ಲಿಯೇ ಕರ್ಮಯೋಗದ ಉಪದೇಶವಿದೆ. 'ಜ್ಞಾನಿಭಕ್ತರು ಸರ್ವಭೂತಗಳ ಹಿತದಲ್ಲಿಯೂ ನಿರತರಾಗಿರುತ್ತಾರೆ' ಎಂದು ಭಗವಂತನು ಸಾರಿರುತ್ತಾನೆ. ಹೀಗಿರುವಲ್ಲಿ ತತ್ತ್ವಜ್ಞಾನಿಗಳು ಅಕರ್ಮಣ್ಯತೆಯನ್ನು ಎತ್ತಿಹಿಡಿಯುವವರೆಂದು ಹೇಳುವದು ಹೇಗೆತಾನೆ ಯುಕ್ತವೆನಿಸೀತು ? ಮೇಲಿನ ಎರಡು ಶ್ಲೋಕಗಳಲ್ಲಿ ಆತ್ಮರತನಾದವನು ತನಗಾಗಿ ಮಾಡಿಕೊಳ್ಳತಕ್ಕ ಕರ್ಮವೇನೂ ಇರುವದಿಲ್ಲ. ಅವನಿಗೆ ಯಾವ ಬೇಕುಬೇಡಗಳೂ ಇರುವದಿಲ್ಲವೆಂದಿಷ್ಟೇ ಹೇಳಿದೆಯೇ ಹೊರತು, ಜ್ಞಾನಿಗಳಿಗೆ ಸೋಮಾರಿತನವೇ ಲಕ್ಷಣವೆಂದು ಎಲ್ಲಿಯೂ ಹೇಳಿರುವದಿಲ್ಲ ವೆಂಬುದನ್ನು ಲಕ್ಷಿಸಬೇಕು.

ಅಧ್ಯಾತ್ಮವಿದ್ಯಾನಿಷ್ಣಾತರಿಂದ ಜನರಿಗೆ ಉಪಕಾರವಾದೀತೇ ಹೊರತು ಸ್ವಾರ್ಥಪರರಿಂದ ಎಂದಿಗಾದರೂ ಆದೀತೆ ? **'ಕರ್ಮಣೈವ ಹಿ ಸಂಸಿದ್ಧಿ ಮಾಸ್ಥಿತಾ**

ಜನಕಾದಯಃ ' (ಗೀ. ೩-೨೦) ಎಂದು ಬೋಧಿಸಿರುವ ಶ್ರೀಕೃಷ್ಣನ ಅಭಿಪ್ರಾಯವನ್ನು ಶಂಕರಾಚಾರ್ಯರು ಎರಡು ಬಗೆಯಲ್ಲಿ ವಿವರಿಸಿರುತ್ತಾರೆ :

> **'ಯದಿ ತೇ ಪ್ರಾಪ್ತಸಮ್ಯಗ್ದರ್ಶನಾಃ, ತತೋ ಲೋಕಸಂಗ್ರಹಾರ್ಥಂ ಪ್ರಾರಬ್ಧಕರ್ಮತ್ವಾತ್, ಕರ್ಮಣಾ ಸಹೈವ ಅಸಂನ್ಯಸ್ಯೈವ ಕರ್ಮ ಸಂಸಿದ್ಧಿಮಾಸ್ಥಿತಾಃ ಇತ್ಯರ್ಥಃ। ಅಥ ಅಪ್ರಾಪ್ತಸಮ್ಯಗ್ದರ್ಶನಾ ಜನಕಾದಯಃ, ತದಾ ಕರ್ಮಣಾ ಸತ್ತ್ವಶುದ್ಧಿಸಾಧನ ಭೂತೇನ ಕ್ರಮೇಣ ಸಂಸಿದ್ಧಿಮ್ ಆಸ್ಥಿತಾ ಇತಿ ವ್ಯಾಖ್ಯೇಯಃ ಶ್ಲೋಕಃ ॥** ಗೀ.ಭಾ. ಭಾ. ೧೮೫

'ಜನಕಾದಿಗಳು ಸಮ್ಯಗ್ಜ್ಞಾನವನ್ನು ಪಡೆದವರಾಗಿದ್ದರೆಂದು ಇಟ್ಟುಕೊಂಡರೆ ಲೋಕಸಂಗ್ರಹಕ್ಕಾಗಿ ಕರ್ಮವನ್ನು ಮಾಡುತ್ತಲೇ ಇದ್ದು ಆತ್ಯಂತಿಕಮುಕ್ತಿಯನ್ನು ಪಡೆದರು, ಕರ್ಮವನ್ನು ಸಂನ್ಯಾಸಮಾಡಲೇಇಲ್ಲ - ಎಂದರ್ಥ. ಹಾಗಿಲ್ಲದೆ ಅವರಿಗೆ ಸಮ್ಯಗ್ಜ್ಞಾನವು ಇನ್ನೂ ಬಂದಿರಲಿಲ್ಲವೆಂದಾದರೆ ಸತ್ತ್ವಶುದ್ಧಿಗೆ ಸಾಧನವಾಗಿರುವ ಕರ್ಮವನ್ನು ಮಾಡುತ್ತಲೇ ಇದ್ದು ಆ ಚಿತ್ತಶುದ್ಧಿಯನ್ನು ಪಡೆದು ಕೃತಕೃತ್ಯರಾದರು - ಎಂದು ಶ್ಲೋಕಕ್ಕೆ ವ್ಯಾಖ್ಯಾನವನ್ನು ಮಾಡಬೇಕು' - ಎಂದು ಆಚಾರ್ಯರು ಬರೆದಿರುತ್ತಾರೆ. 'ಜನಕಾದಿಗಳು ಜ್ಞಾನವನ್ನು ಪಡೆದುಕೊಂಡಿದ್ದರೆಂದು ಇಟ್ಟುಕೊಂಡರೆ' ಎಂದು ವಿಕಲ್ಪವನ್ನು ಹೇಳಿದ್ದಕ್ಕೆ ಕಾರಣವೂ ಇದೆ. ಅದೇನೆಂದರೆ : ಜನಕಮಹಾರಾಜನು ಒಮ್ಮೆ ಜ್ಞಾನಪ್ರಾಪ್ತಿಯಾಗುವ ಮುಂಚೆಯೇ ರಾಜ್ಯದಲ್ಲಿ ವಿರಕ್ತಿಯಿಂದ ಸಂನ್ಯಾಸಿಯಾಗಬೇಕೆಂದು ಬಯಸಿದನಂತೆ. ಆಗ ಅವನ ಹೆಂಡತಿಯು ''ಎಲೈ ರಾಜನೆ, ನೀನು ಈಗ ಹೊರಟಿರುವದು ಸರಿಯಾದ ಹಾದಿಯಲ್ಲ . **'ಅನಿಷ್ಕಷಾಯೇ ಕಾಷಾಯಂ ಈಹಾರ್ಥಮಿತಿ ವಿದ್ಧಿ ತತ್ '** ಮನಸ್ಸಿನ ಕಷಾಯವು ಪಕ್ವವಾಗದೆ ಕಾಷಾಯವನ್ನು ಧರಿಸುವದು ಕೇವಲ ಜೀವನಕ್ಕಾಗಿ ಎಂದು ತಿಳಿಯಬೇಕು. ನಿನ್ನ ರಾಜ್ಯವನ್ನು ಚೆನ್ನಾಗಿ ಆಳುವದಕ್ಕೆ ದಂಡಧರನಾಗಿರುವದೇ ಕ್ಷತ್ರಿಯನಾದ ನಿನಗೆ ಯೋಗ್ಯವಾದದ್ದೇ ಹೊರತು ಮುಂಡನವಲ್ಲ'' ಎಂದು ಬಿನ್ನವಿಸಿಕೊಂಡಳು. ಆಕೆಯ ಅರ್ಥಗರ್ಭಿತವಾದ ಮಾತನ್ನು ಮನ್ನಿಸಿ ಜನಕನು ರಾಜ್ಯದಲ್ಲಿಯೇ ಉಳಿದನು. ಮುಂದೆ ಅವನು ಜ್ಞಾನಿಯಾದಮೇಲೂ ರಾಜ್ಯವನ್ನು ಆಳುತ್ತಲೇ ಇದ್ದನು. ಆತನ ಜೀವನದಲ್ಲಿನ ಈ ಎರಡು ಘಟನೆಗಳನ್ನು ಮನದಂದು ಆಚಾರ್ಯರು ಮೊದಲು ಅವನು ಮಾಡುತ್ತಿದ್ದ ಕ್ಷತ್ರಕರ್ಮವು ಚಿತ್ತಶುದ್ಧಿಗಾಗಿ ; ಆಮೇಲೆ ಮಾಡುತ್ತಿದ್ದದ್ದು ಲೋಕಸಂಗ್ರಹಕ್ಕಾಗಿ - ಎಂದು ವಿಭಾಗವನ್ನು ಮಾಡಿ ಶ್ಲೋಕಕ್ಕೆ ವ್ಯಾಖ್ಯಾನವನ್ನು ಮಾಡಿರುತ್ತಾರೆ. ಜ್ಞಾನಿಯಾದಮೇಲೆ ಒಮ್ಮೆ ಅವನು ಹೇಳಿರುವದನ್ನು ವ್ಯಾಸರು ಗಾಥಾರೂಪವಾಗಿ

ಬರೆದಿರುತ್ತಾರೆ : 'ಅನನ್ತಂ ಬತ ಮೇ ವಿತ್ತಂ ಯಸ್ಯ ಮೇ ನಾಸ್ತಿ ಕಿಞ್ಚನ । ಮಿಥಿಲಾಯಾಂ ಪ್ರದೀಪ್ತಾಯಾಂ ನ ಮೇ ದಹ್ಯತಿ ಕಿಞ್ಚನ ॥' ನನ್ನ ವಿತ್ತವು ಅನಂತವಾಗಿದೆ ; ಏಕೆಂದರೆ ರಾಜಧಾನಿಯಾದ ಮಿಥಿಲಾನಗರಿಯೇ ಹೊತ್ತಿಕೊಂಡು ಉರಿದರೂ ನನ್ನದು ಒಂದಿಷ್ಟೂ ಸುಟ್ಟುಹೋಗದೆ ಇರುತ್ತದೆ - ಎಂದು ಹೇಳಿರುತ್ತಾನೆ. ಈ ಶ್ಲೋಕದಲ್ಲಿ ಲೋಕಸಂಗ್ರಹಕ್ಕಾಗಿ ಕರ್ಮವನ್ನು ಮಾಡುತ್ತಿರುವವರ ಭಾವವನ್ನು ಸ್ಫೂರ್ತಿದಾಯಕವಾಗುವಂತೆ ವರ್ಣಿಸಿದೆ. ಅವರು ಕರ್ಮವನ್ನು ಮಾಡುತ್ತಲೇ ಇದ್ದರೂ ಅವರ ಕರ್ಮವು ಕರ್ಮವಾಗುವದಿಲ್ಲ; ಅವರು ಸುಮ್ಮನಿದ್ದಾಗಲೂ ಅದು ಅಕರ್ಮವಾಗುವದಿಲ್ಲ . ಆದ್ದರಿಂದ 'ಸಕ್ತಾಃ ಕರ್ಮಣ್ಯವಿದ್ವಾಂಸೋ ಯಥಾ ಕುರ್ವನ್ತಿ ಭಾರತ । ಕುರ್ಯಾದ್ ವಿದ್ವಾಂಸ್ತಥಾಽಸಕ್ತಶ್ಚಿಕೀರ್ಷುರ್ಲೋಕ ಸಂಗ್ರಹಮ್ ॥' ಅಜ್ಞರು ಹೇಗೆ ಆಸಕ್ತಿಯಿಂದ ಕರ್ಮವನ್ನು ಮಾಡುತ್ತಾರೋ ಹಾಗೆಯೇ ವಿದ್ವಾಂಸರೂ ಆಸಕ್ತಿರಹಿತರಾಗಿ ಕರ್ಮವನ್ನು ಮಾಡುತ್ತಿರುವರು.

ಇದೂ ಅಲ್ಲದೆ ಜ್ಞಾನಿಗಳು ವ್ಯವಹಾರದೃಷ್ಟಿಯಿಂದ ನಿವೃತ್ತಿನಿಷ್ಠರಾಗಿಯೂ ಇರಬಹುದು. ಪ್ರವೃತ್ತಿನಿಷ್ಠರಾಗಿಯೂ ಇರಬಹುದು. ಅವರು ಹೇಗೇ ಇರಲಿ , ಅವರನ್ನು ಕರ್ಮರಹಿತರೆನ್ನಬಹುದು ; ಅಥವಾ ಸರ್ವಕರ್ಮವನ್ನೂ ಮಾಡುತ್ತಿರುವವರು ಎನ್ನಲೂಬಹುದು. ಹೇಗೆಂದರೆ ಪ್ರವೃತ್ತಿ ಧರ್ಮದಲ್ಲಿರುವಂತೆ ತೋರುವಾಗ :

**ಗತಸಙ್ಗಸ್ಯ ಮುಕ್ತಸ್ಯ ಜ್ಞಾನಾವಸ್ಥಿತಚೇತಸಃ ।**
**ಯಜ್ಞಾಯಾಚರತಃ ಕರ್ಮ ಸಮಗ್ರಂ ಪ್ರವಿಲೀಯತೇ ॥** ಗೀ. ೪-೨೩

**ಬ್ರಹ್ಮಾರ್ಪಣಂ ಬ್ರಹ್ಮಹವಿರ್ಬ್ರಹ್ಮಾಗ್ನೌ ಬ್ರಹ್ಮಣಾ ಹುತಮ್**
**ಬ್ರಹ್ಮೈವ ತೇನ ಗನ್ತವ್ಯಂ ಬ್ರಹ್ಮಕರ್ಮಸಮಾಧಿನಾ ॥** ಗೀ. ೪-೨೪

ಏತರ ಸಂಗವೂ ಇಲ್ಲದೆ , ಧರ್ಮಾಧರ್ಮಗಳಿಂದ ಮುಕ್ತನಾಗಿರುವ ಜ್ಞಾನಿಗೆ ಜ್ಞಾನಯಜ್ಞರೂಪವಾಗಿ ಮಾಡುತ್ತಿರುವ ಕರ್ಮವು ಯಾವ ಕ್ರಿಯಾಕಾರಕಫಲಗಳ ಸಂಪರ್ಕವೂ ಇಲ್ಲದೆ ಅಕರ್ಮವಾಗಿಬಿಟ್ಟಿರುತ್ತದೆ. ಅವನ ದೃಷ್ಟಿಯಲ್ಲಿ ತಾನು ಕರ್ಮದಲ್ಲಿ ಉಪಯೋಗಿಸುವ ಹವಿಸ್ಸೂ ಬ್ರಹ್ಮವೇ , ಸ್ರುಕ್ಸ್ರುವಾದಿಕರಣವೂ ಅಧಿಕರಣವಾದ ಅಗ್ನಿಯೂ ಬ್ರಹ್ಮವೇ , ತಾನೂ ಬ್ರಹ್ಮವೇ, ಕರ್ಮವೂ ಬ್ರಹ್ಮವೇ, ಪಡೆಯುವ ಫಲವೆಂಬುದೂ ಬ್ರಹ್ಮವೇ. ಕಪ್ಪೆಯಚಿಪ್ಪಿನ ನಿಜವನ್ನು ಬಲ್ಲವನಿಗೆ ಬೆಳ್ಳಿಯಂತೆ ತೋರುತ್ತಿರುವಾಗಲೂ ಅದು ಕಪ್ಪೆಯಚಿಪ್ಪೇ ಆಗಿರುವಂತೆಯೇ ಇದನ್ನು ತಿಳಿಯಬೇಕು. ಇನ್ನು ಸರ್ವಕರ್ಮಗಳನ್ನೂ ಸಂನ್ಯಾಸಮಾಡಿ ಯಾವಾಗಲೂ ಬ್ರಹ್ಮಾನುಸಂಧಾನದಲ್ಲಿಯೇ ಇದ್ದುಕೊಂಡಿರುವ ನಿವೃತ್ತಿನಿಷ್ಠನಾದ ಜ್ಞಾನಿಯೋ ಎಂದರೆ

ಅವನು ಹೊರಗಿನವರ ದೃಷ್ಟಿಯಿಂದ ಯಾವ ಕರ್ಮವನ್ನೂ ಮಾಡದೆ ಇದ್ದರೂ ಅವನನ್ನು ಅಕರ್ಮಿ ಎನ್ನಬಾರದು. ಅವನು ಯಾವ ಬ್ರಹ್ಮದಲ್ಲಿ ಆತ್ಮಭಾವದಿಂದ ನಿಷ್ಠನಾಗಿರುವನೋ ಆ ಬ್ರಹ್ಮವೇ ಅವನಿಗೆ ಕರ್ಮ, ಅದೇ ಕರಣ, ಅದೇ ಹವಿಸ್ಸು, ಅದೇ ಕರ್ಮಕರ್ತೃ, ಅದೇ ಫಲ ; ಹೀಗೆ ಅವನು ಸರ್ವಕರ್ಮಕರ್ತೃವೆನಿಸಿರುತ್ತಾನೆ. ಅಂತೂ ಜ್ಞಾನಿಯು ಬಾಹ್ಯದೃಷ್ಟಿಯಿಂದ ಗೃಹಸ್ಥನಾಗಿರಲಿ, ಸಂನ್ಯಾಸಿಯಾಗಿರಲಿ, ಅವನು ಸರ್ವಕರ್ಮಸಂನ್ಯಾಸಿಯೇ ಆಗಿರುತ್ತಾನೆ. ಅವನ ಯಾವ ಕರ್ಮವೂ ಕರ್ಮವಾಗಿರುವದಿಲ್ಲ. ಹೆಚ್ಚೇಕೆ ?

**ಸರ್ವಕರ್ಮಾಣಿ ಮನಸಾ ಸಂನ್ಯಸ್ಯಾಸ್ತೇ ಸುಖಂ ವಶೀ ।**
**ನವದ್ವಾರೇ ಪುರೇ ದೇಹೀ ನೈವ ಕುರ್ವನ್ ನ ಕಾರಯನ್ ॥**
ಗೀ. ೫-೧೩

ಅವನು ಯಾವ ಕರ್ಮವನ್ನು ಮಾಡಲಿ, ಮಾಡದಿರಲಿ, ಮನಸ್ಸಿನಿಂದ ಸರ್ವ ಕರ್ಮ ಸಂನ್ಯಾಸವನ್ನು ಮಾಡಿಬಿಟ್ಟಿರುತ್ತಾನೆ. ಬಾಹ್ಯದೃಷ್ಟಿಯಿಂದ ಒಂಬತ್ತು ದ್ವಾರಗಳ ಈ ದೇಹದಲ್ಲಿರುವಂತೆ ಕಂಡರೂ ಅವನು ಅಶರೀರಿಯೇ, ಅವನು ನಿಜವಾಗಿ ಏನನ್ನೂ ಮಾಡುವದಿಲ್ಲ. ಯಾರಿಂದಲೂ ಮಾಡಿಸುವದೂ ಇಲ್ಲ. ಅವನ ದೃಷ್ಟಿಯಿಂದ ಶರೀರವು ಶರೀರವಲ್ಲ, ಇಂದ್ರಿಯಗಳು ಇಂದ್ರಿಯಗಳಲ್ಲ, ಮನಸ್ಸು ಮನಸ್ಸಲ್ಲ :

**ನೈವ ಕಿಞ್ಚಿತ್ ಕರೋಮೀತಿ ಯುಕ್ತೋ ಮನ್ಯೇತ ತತ್ತ್ವವಿದ್ ।**
**ಪಶ್ಯಞ್ಶೃಣ್ವನ್ ಸ್ಪೃಶನ್ ಜಿಘ್ರನ್ನಶ್ನನ್ ಗಚ್ಛನ್ ಸ್ವಪನ್ ಶ್ವಸನ್ ॥**
**ಪ್ರಲಪನ್ ವಿಸೃಜನ್ ಗೃಹ್ಣನ್ನುನ್ಮಿಷನ್ನಿಮಿಷನ್ನಪಿ ।**
**ಇನ್ದ್ರಿಯಾಣೀನ್ದ್ರಿಯಾರ್ಥೇಷು ವರ್ತನ್ತ ಇತಿ ಧಾರಯನ್ ॥**
ಗೀ. ೫-೮,೯

ಅವನು ನೋಡುತ್ತಿದ್ದರೂ ನೋಡುತ್ತಿರುವದಿಲ್ಲ, ಮುಟ್ಟುತ್ತಿದ್ದರೂ ಮುಟ್ಟುತ್ತಿರುವದಿಲ್ಲ, ಮೂಸುತ್ತಿದ್ದರೂ ಮೂಸುತ್ತಿರುವದಿಲ್ಲ, ಸವಿಯುತ್ತಿದ್ದರೂ ಸವಿಯುತ್ತಿರುವದಿಲ್ಲ ; ಹೀಗೆಯೇ ಹಿಡಿಯುತ್ತಿದ್ದರೂ ಹಿಡಿಯುತ್ತಿರುವದಿಲ್ಲ, ಹೋಗುತ್ತಿದ್ದರೂ ಹೋಗುತ್ತಿರುವದಿಲ್ಲ. ಅವನು ಯಾವ ಶರೀರೇಂದ್ರಿಯಗಳಿಂದಲೂ ಯಾವ ಕರ್ಮವನ್ನೂ ಅವನು ಮಾಡುತ್ತಿರುವದಿಲ್ಲ ; ಮನಸ್ಸಿನಿಂದ ಸಂಕಲ್ಪಿಸುತ್ತಿದ್ದರೂ ಸಂಕಲ್ಪಿಸುತ್ತಿಲ್ಲ, ನಿಶ್ಚಯಿಸುತ್ತಿದ್ದರೂ ನಿಶ್ಚಯಿಸುತ್ತಿಲ್ಲ, ಸ್ಮರಿಸುತ್ತಿದ್ದರೂ ಸ್ಮರಿಸುತ್ತಿಲ್ಲ ಅಭಿಮಾನವುಳ್ಳವನಾಗಿ ತೋರಿದರೂ ಅಭಿಮಾನಿಯಾಗಿರುವದಿಲ್ಲ ಅಜ್ಞರ ದೃಷ್ಟಿಯಿಂದ ಎಚ್ಚೆತ್ತಬಳಿಕ ಕನಸಿನಲ್ಲಿ ತಾವು ಮಾಡಿದಂತೆ ತೋರುತ್ತಿದ್ದದು

ಯಾವದೂ ತಮಗೆ ನಿಜವಾಗಿ ಸಂಬಂಧಿಸಿರಲಿಲ್ಲವೆಂದು ಹೇಗೆ ನಿಶ್ಚಯವಾಗುವದೋ ಹಾಗೆಯೇ ಜ್ಞಾನಿಯ ದೃಷ್ಟಿಯಿಂದ ಅವರಿಗೆ ಶರೀರವಾಙ್ಮನಸ್ಸುಗಳಿಂದಾಗುವ ಯಾವ ಕೆಲಸವೂ ತೋರುವ ರೂಪದಿಂದ ಇರುವದೇಇಲ್ಲ; ಇರುವ ರೂಪದಿಂದ ಎಲ್ಲವೂ ವಾಸುದೇವಪರಬ್ರಹ್ಮವೇ ಆಗಿಬಿಟ್ಟಿರುತ್ತದೆ.

ಭಗವಂತನು ಸಾಂಖ್ಯಯೋಗಕರ್ಮಯೋಗರೂಪವಾದ ನಿಷ್ಠಾದ್ವಯವನ್ನು ಹೇಳಿದ ಬಳಿಕ 'ಇಮಂ ವಿವಸ್ವತೇ ಯೋಗಂ ಪ್ರೋಕ್ತವಾನಹಮವ್ಯಯಮ್ ' ಎಂದಿದಾನೆಯಷ್ಟೆ? ಅಲ್ಲಿ ಆಚಾರ್ಯರು ಹೀಗೆಂದು ಬರೆದಿರುತ್ತಾರೆ :

> **ಯೋಽಯಂ ಯೋಗಃ ಅಧ್ಯಾಯದ್ವಯೇನೋಕ್ತೋ ಜ್ಞಾನನಿಷ್ಠಾಲಕ್ಷಣಃ ಸಸಂನ್ಯಾಸಃ ಕರ್ಮಯೋಗೋಪಾಯೋ ಯಸ್ಮಿನ್ ವೇದಾರ್ಥಃ ಪರಿಸಮಾಪ್ತಃ ಪ್ರವೃತ್ತಿಲಕ್ಷಣೋ ನಿವೃತ್ತಿಲಕ್ಷಣಶ್ಚ ಗೀತಾಸು ಚ ಸರ್ವಾಸು ಅಯಮೇವ ಯೋಗೋ ವಿವಕ್ಷಿತೋ ಭಗವತಾ ॥** ಗೀ. ಭಾ. ಭಾ. ೨೨೮

ಕರ್ಮಯೋಗವೆಂಬ ಸಾಧನದಿಂದ ದೊರಕುವ ಜ್ಞಾನನಿಷ್ಠಾಲಕ್ಷಣವಾದ ಯೋಗವಿದೆಯಲ್ಲ , ಇದೇ ಸಕಲವೇದಾರ್ಥದ ಸಾರವು, ಇದೇ ನಿಜವಾದ ಯೋಗವೆಂದು ಭಗವಂತನ ಅಭಿಪ್ರಾಯವು. ಭಗವಂತನು ಈ ಯೋಗವನ್ನು ವಿವಸ್ವಂತನಿಗೆ ಏಕೆ ಹೇಳಿದನು ? – ಎಂದರೆ :

> **ಇಮಮಧ್ಯಾಯದ್ವಯೇನೋಕ್ತಂ ವಿವಸ್ವತ ಆದಿತ್ಯಾಯ ಸರ್ಗಾದೌ ಪ್ರೋಕ್ತವಾನಹಮ್ ಜಗತ್ಪರಿಪಾಲಯಿತೃಣಾಂ ಕ್ಷತ್ರಿಯಾಣಾಂ ಬಲಾಧಾನಾಯ । ತೇನ ಯೋಗಬಲೇನ ಯುಕ್ತಾಃ ಸಮರ್ಥಾ ಭವನ್ತಿ ಬ್ರಹ್ಮ ಪರಿರಕ್ಷಿತುಮ್ । ಬ್ರಹ್ಮಕ್ಷತ್ರೇ ಪರಿಪಾಲಿತೇ ಜಗತ್ಪರಿಪಾಲಯಿತುಮ್ ಅಲಮ್ ॥** ಗೀ. ಭಾ. ಭಾ. ೨೨೯

ಈ ಯೋಗವನ್ನು ಸೃಷ್ಟಿಯ ಆದಿಯಲ್ಲಿ ಭಗವಂತನು ಆದಿತ್ಯನಿಗೆ ಮೊದಲು ಹೇಳಿದನು. ಜಗತ್ತನ್ನು ಆಳುವ ಕ್ಷತ್ರಿಯರಿಗೆ ಬಲವನ್ನು ಕೊಡುವದಕ್ಕೆಂದೇ ಇದನ್ನು ಹೇಳಿದ್ದು . ಆ ಯೋಗಬಲದಿಂದ ಕೂಡಿ ಬ್ರಾಹ್ಮಣ್ಯವನ್ನು ಕಾಪಾಡುವದಕ್ಕೆ ಅವರು ಸಮರ್ಥರಾಗುವರು. ಬ್ರಹ್ಮಕ್ಷತ್ರಧರ್ಮಗಳನ್ನು ಕಾಪಾಡಿದರೆ ಅವು ಜಗತ್ತನ್ನೇ ಪರಿಪಾಲಿಸುವದಕ್ಕೆ ಸಮರ್ಥವಾದಾವು – ಎಂಬ ಆಚಾರ್ಯರ ವಚನವನ್ನು ನಾವು ಮರೆಯದೆ ಇರಬೇಕು. ಲೋಕವು ನೆಮ್ಮದಿಯಿಂದರಬೇಕಾದರೆ ಅದನ್ನು ಪರಿಪಾಲಿಸುವವರು ನಿಃಸ್ವಾರ್ಥಿಗಳಾಗಿರಬೇಕು. ಆದ್ದರಿಂದ ಅವರಿಗೆ ಈ ಅಧ್ಯಾತ್ಮ ವಿದ್ಯೆಯ ಬಲವು ಇರಬೇಕು. ಬ್ರಾಹ್ಮಣ್ಯವೆಂಬ ಜ್ಞಾನವನ್ನು ಅನುಷ್ಠಾನದಲ್ಲಿಟ್ಟುಕೊಂಡು

ಜನರಿಗೆಲ್ಲ ಮಾದರಿಯಾಗಿರುವವರು ಬೇಕು. ಅದನ್ನು ಕಾಪಾಡುವದಕ್ಕೆ ಶಕ್ತರಾದ ರಾಜರ್ಷಿಗಳು ಬೇಕು. ಈ ದೃಷ್ಟಿಯಿಂದ ರಾಜ್ಯದ ಅಧಿಕಾರದಲ್ಲಿ ಅಧ್ಯಾತ್ಮಜ್ಞಾನಿಗಳಾದ ಕ್ಷತ್ರಿಯತೇಜಸ್ಸಿನವರೂ ನಿಃಸ್ವಾರ್ಥಿಗಳಾಗಿ ಅವರಿಗೆ ನೀತಿಯನ್ನು ತಿಳಿಯಹೇಳುವ ಬ್ರಾಹ್ಮಣತೇಜಸ್ಸಿನವರೂ ಬೇಕು ; ಅವರೇ ಆಳುವವರು. ರಾಷ್ಟ್ರದ ರಕ್ಷಣೆಗೂ ಅಭಿವೃದ್ಧಿಗೂ ಶಕ್ತರಾಗಿ ಆಳುವವರು ಬೇಕೇ ಹೊರತು ಅಳುವವರು ಬೇಕಿಲ್ಲ ; ಅಧರ್ಮಕ್ಕೆ ಬೀಳುವ ಅತಿರಾಕ್ಷಸರಂತೂ ಬೇಕೇ ಇಲ್ಲ. ಅಧ್ಯಾತ್ಮವಿದ್ಯೆಯು ಅಭಯವನ್ನೂ ಸಾಮರ್ಥ್ಯವನ್ನೂ ಧರ್ಮಪ್ರಿಯತೆಯನ್ನೂ ಕೊಡುತ್ತದೆ. ಇನ್ನೇನು ಬೇಕು , ಲೋಕದ ಅಭ್ಯುದಯಕ್ಕೆ ?

ಇದಂತಿರಲಿ, ಇನ್ನೂ ಜ್ಞಾನನಿಷ್ಠೆಯ ಮೆಟ್ಟಿಲನ್ನು ಹತ್ತದೆ ಇರುವ ನಾವುಗಳು ಏನುಮಾಡಬೇಕು ? – ಎಂದರೆ ಮೊಟ್ಟಮೊದಲು ಆಸುರೀಸಂಪತ್ತನ್ನು ಬಿಡಬೇಕು.

**ಸ್ವೇ ಸ್ವೇ ಕರ್ಮಣ್ಯಭಿರತಃ ಸಂಸಿದ್ಧಿಂ ಲಭತೇ ನರಃ ।**
**ಸ್ವಕರ್ಮನಿರತಃ ಸಿದ್ಧಿಂ ಯಥಾ ವಿನ್ದತಿ ತಚ್ಛೃಣು ॥**
**ಯತಃ ಪ್ರವೃತ್ತಿರ್ಭೂತಾನಾಂ ಯೇನ ಸರ್ವಮಿದಂ ತತಮ್ ।**
**ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿನ್ದತಿ ಮಾನವಃ ॥** ಗೀ. ೧೮-೪೫,೪೬

ಸ್ವಧರ್ಮವನ್ನು ಎಂದಿಗೂ ಬಿಡಬಾರದು. ಈಗಿನ ಕಾಲಕ್ಕೆ ಕರ್ಮವನ್ನು ನಿಂದಿಸುವವರು ಹೆಚ್ಚಾಗಿರುತ್ತಾರೆ ; ಅಥವಾ ಅದನ್ನು ಮಾಡಬೇಕು ಎಂದು ಹೇಳುವವರಿದ್ದರೂ ಮಾಡಿ ತೋರಿಸುವವರು ಇಲ್ಲ . ನಮ್ಮನಮ್ಮ ಕರ್ತವ್ಯವನ್ನು ಎಂದಿಗೂ ಬಿಡಬಾರದು, ಸ್ವಧರ್ಮವನ್ನು ಮೀರಿ ಪರಧರ್ಮಕ್ಕೆ ಕೈಹಾಕಲೇಬಾರದು. ಅದರಿಂದಲೇ ಭಗವಂತನ ಆರಾಧನೆಯನ್ನು ಮಾಡಬೇಕು. ಮಿಕ್ಕ ಯಾವ ಕರ್ಮಗಳೂ ನಮಗೆ ಶಕ್ಯವಿಲ್ಲದೆ ಇರುವಾಗಲೂ ಸತ್ಸಂಗ , ಭಗವನ್ನಾಮಜಪ – ಇಷ್ಟನ್ನು ತಪ್ಪದೆ ಮಾಡಬೇಕು. ಹೀಗೆ ಎಲ್ಲರೂ ಸ್ವಕರ್ಮನಿರತರಾದರೆ ಕೃತಕೃತ್ಯರಾಗುವರು. ಕಲಿಯುಗದಲ್ಲಿ ಜ್ಞಾನವಾಗುವದಿಲ್ಲವೆಂದು ಭಾವಿಸುವದು ತಪ್ಪು. ಸರಿಯಾದ ಮಾರ್ಗದಲ್ಲಿ ಹೊರಟು ಭಗವಂತನನ್ನು ಭಕ್ತಿಯಿಂದ ಭಜಿಸಿದರೆ ಕಲಿಯುಗವನ್ನೇ ಕ್ರತುಯುಗವನ್ನಾಗಿ ಮಾಡಿಕೊಳ್ಳಬಹುದು. 'ಹಾಗೆ ಭಗವಂತನ ಅನುಗ್ರಹವು ಆಗಲಿ !' ಎಂದು ಪ್ರಾರ್ಥಿಸೋಣ !

**ಓಂ ತತ್ಸತ್**

## ಈ ಕಾರ್ಯಾಲಯದಿಂದ ತಾವು ಯಾವ ಲಾಭವನ್ನು ಪಡೆಯಬಹುದು

1. ಕಾರ್ಯಾಲಯದಲ್ಲಿನಡೆಯುವ ಪೂಜೆ, ಅನುಷ್ಠಾನ, ಭಜನೆ, ಉಪನ್ಯಾಸ, ಪ್ರವಚನ ವೇದಾಂತಸಪ್ತಾಹ, ವೇದಾಂತ ಶಿಬಿರಗಳಲ್ಲಿ ಯಥಾಶಕ್ತಿ ಪಾತ್ರವಹಿಸಬಹುದು. ತನ್ಮೂಲಕ ಮನಸ್ಸನ್ನು ಹದಗೊಳಿಸಿಕೊಳ್ಳಬಹುದು.
2. ಇಲ್ಲಿನ ಗ್ರಂಥ, ಪತ್ರಿಕೆಗಳಿಂದ ಅಧ್ಯಾತ್ಮಜ್ಞಾನವನ್ನು ಹೆಚ್ಚಿಸಿಕೊಳ್ಳಬಹುದು.
3. ಪುಸ್ತಕಗಳನ್ನು ಕೊಂಡು, ಪತ್ರಿಕೆಗೆ ಚಂದಾದಾರರಾಗಿ ಅಧ್ಯಾತ್ಮದ ಅಮೂಲ್ಯ ಸಂಪತ್ತಿನ ಪುಸ್ತಕಭಂಡಾರವನ್ನು ಮಾಡಿಕೊಳ್ಳಬಹುದು. ಸಾಮಾಜಿಕ ಸಮಾರಂಭಗಳಲ್ಲಿ ಇಲ್ಲಿಯ ಪುಸ್ತಕಗಳನ್ನು ಪಾರಿತೋಷಕವಾಗಿ ನೀಡಿ ಅವರಲ್ಲಿ ಅಧ್ಯಾತ್ಮ ಅಭಿರುಚಿಯ ಅಂಕುರವನ್ನು ಮೂಡಿಸಬಹುದು. ಇದರಿಂದ ಕಾರ್ಯಾಲಯಕ್ಕೂ ನೆರವು.
4. ಇಲ್ಲಿಯ ವಿವಿಧ ಕಾರ್ಯಕ್ರಮಗಳಿಗೆ - ಗ್ರಂಥ ಪ್ರಕಟಣೆ, ದತ್ತಿ ಉಪನ್ಯಾಸ, ಸಪ್ತಾಹ, ಶಿಬಿರಗಳು, ಗುರುಕುಲದ ವಿದ್ಯಾರ್ಥಿಗಳಿಗೆ ಭೋಜನ ವ್ಯವಸ್ಥೆ ತಮ್ಮ ಮಾತಾಪಿತೃಗಳ ಅಥವಾ ಇಷ್ಟ ಪಟ್ಟವರ ಹೆಸರಿನಲ್ಲಿ ವರ್ಷಕ್ಕೊಂದು ದಿನ (ಅನ್ನದಾನ) - ಕೈಲಾದ ಧನ ಸಹಾಯ ನೀಡಿ ಪುಣ್ಯವನ್ನೂ ಕೀರ್ತಿಯನ್ನೂ ಗಳಿಸಬಹುದು. ದಾನಿಗಳು 80G ಸೌಲಭ್ಯವನ್ನು (ಆದಾಯ ತೆರಿಗೆ ರಿಯಾಯಿತಿ) ಸಹ ಪಡೆಯಬಹುದು.
5. ನಿಮ್ಮದತ್ತಿ ದಾನಗಳಿಂದ, ಅಧ್ಯಾತ್ಮಪ್ರಕಾಶ, ಶಂಕರಭಾಸ್ಕರ ಪತ್ರಿಕೆಗಳ ಚಂದಾ ಹಾಗೂ ಪತ್ರಿಕೆಗಳಿಗೆ ಹೊಸ ಚಂದಾದಾರರನ್ನು ಕೂಡಿಸುವುದರಿಂದ, ಶ್ರೀ ಶ್ರೀಗಳ ಮೂಲ ಉದ್ದೇಶವಾದ ಅಧ್ಯಾತ್ಮಪ್ರಸಾರ ಕಾರ್ಯದಲ್ಲಿ ನೇರವಾಗಿ ಸೇವೆಯ ಭಾಗ್ಯವನ್ನು ಪಡೆಯಬಹುದು. ಜ್ಞಾನದಾನವೇ ಹೆಚ್ಚಿನ ಶ್ರೇಷ್ಠವಾದ ದಾನ.
6. ಯೋಗ್ಯರಾದ ವಿದ್ಯಾರ್ಥಿಗಳನ್ನು ಹೊಳೆನರಸೀಪುರ, ಮತ್ತೂರು ವಿದ್ಯಾಲಯಗಳಿಗೆ ಕಳುಹಿಸಿ / ಅಧ್ಯಾತ್ಮವಿದ್ಯೆಯಲ್ಲಿ ಪ್ರವೀಣರನ್ನಾಗಿ ಮಾಡಿಸಿ ಬ್ರಹ್ಮವಿದ್ಯಾ ಪ್ರಚಾರಕ್ಕೆ ಸಹಾಯಕರಾಗಬಹುದು, ನಿರಂತರ ಅಧ್ಯಾತ್ಮ ಪ್ರಸಾರಕ್ಕೆ ಎಡೆಮಾಡಬಹುದು.
7. ವೇದಾಂತ ವಿಚಾರ ಸಂಘಗಳಲ್ಲಿ ಅಧ್ಯಯನ ಗೋಷ್ಠಿ ಚರ್ಚೆಗಳಿಗೆ ಕಾರ್ಯಾಲಯದ ಗ್ರಂಥಗಳು, ಲೇಖನಗಳನ್ನು ಆರಿಸಿಕೊಂಡು ಪರಸ್ಪರರ ವೇದಾಂತ ತತ್ತ್ವ ತಿಳುವಳಿಕೆಗೆ ಅನುವಾಗಬಹುದು. ಈ ಉದ್ದೇಶಕ್ಕಾಗಿ ಗ್ರಂಥಾಲಯ, ವಾಚನಾಲಯಗಳನ್ನು ಮಾಡಿಕೊಂಡು ಕಾರ್ಯಾಲಯದ ನೆರವು ಪಡೆಯಬಹುದು.
8. ಕಾರ್ಯಾಲಯದ ಶಿಷ್ಯರು - ಪಂಡಿತರುಗಳನ್ನು ಕರೆಸಿಕೊಂಡು ವೇದಾಂತದ ಅಧ್ಯಯನಕ್ಕೆ, ಅವರಿಂದ ಸಹಾಯ ಪಡೆಯಬಹುದು.

---

### ಹೆಚ್ಚಿನ ವಿವರಗಳಿಗೆ ಸಂಪರ್ಕಿಸಿ


ಅ.ಪ್ರ.ಕಾ. ಹೊಳೆನರಸೀಪುರ
ಹಾಸನ ಜಿಲ್ಲಾ 573211
ದೂರವಾಣಿ: 08175-273820

ಅ.ಪ್ರ.ಕಾ. 68, 2ನೇ ಬ್ಲಾಕ್
ತ್ಯಾಗರಾಜನಗರ, ಬೆಂಗಳೂರು-28
ದೂರವಾಣಿ: 080-26765548

## ಸಂಸ್ಥಾಪಕರ ಸ್ಮರಣೆ



ವೇದಧರ್ಮದ ಪುನರುತ್ಥಾನ ಮತ್ತು ವೇದಾಂತಕ್ಕೊಂದು ನವಚೇತನ ತುಂಬಿದ ಮಹತ್ಕಾರ್ಯ ಸರ್ವದಾ ಸ್ಮರಣೀಯರಾದ ಶ್ರೀ ಶಂಕರಭಗವತ್ಪಾದರದು. **ಬ್ರಹ್ಮೀಭೂತ ಶ್ರೀ ಶ್ರೀಸಚ್ಚಿದಾನಂದೇಂದ್ರಸರಸ್ವತೀ ಸ್ವಾಮಿಗಳವರು** (ಪೂರ್ವಾಶ್ರಮದ ಶ್ರೀಯಲ್ಲಂಬಳಸೆ ಸುಬ್ರಹ್ಮಣ್ಯಶರ್ಮರು - ವೈ. ಸುಬ್ಬರಾಯರು, ಜನನ 5-1-1880), ಶ್ರೀ ಶಂಕರವೇದಾಂತ ಸರಣಿಯಿಂದ ಆಕರ್ಷಿತರಾಗಿ, ಆಳವಾದ ಅಧ್ಯಯನ, ಚಿಂತನ ಮಂಥನಗಳಿಂದ, ತಮ್ಮ ವಿಶಿಷ್ಟಸಂಶೋಧನಾ ಪ್ರವೃತ್ತಿಯನ್ನು ಬಳಸಿ, ಶಂಕರರ ಅಮೋಘವಾದ ಪ್ರಸ್ಥಾನತ್ರಯ ಭಾಷ್ಯಗಳಿಗೆ ಹತ್ತಿದ್ದ ಕಳೆಯನ್ನು, ಮುತ್ತಿದ್ದ ಧೂಳನ್ನು ತೊಡೆದು ಶಾಂಕರವೇಂದಾಂತದ ನೈಜ ತಿರುಳನ್ನು ಕಂಡುಕೊಂಡರು. ಶಾಂಕರ ವೇದಾಂತಕ್ಕೆ 20ನೇ ಶತಮಾನದ ಅಧಿಕೃತ ವಕ್ತಾರರಾದರು, ಪ್ರತಿಪಾದಕರಾದರು, **ಅಭಿನವ ಶಂಕರ ರಾದರು.**

'ಬೆಳಿಗ್ಗೆ ಎದ್ದಾಗಿನಿಂದ ಮಲಗುವವರೆಗೂ ಹಾಗೂ ಹುಟ್ಟಿನಿಂದ ಬದುಕಿರುವವರೆಗೂ ವೇದಾಂತ ಚಿಂತನೆಯಿಂದಲೇ ಕಾಲವನ್ನು ಕಳೆಯಬೇಕು' ಎಂಬ ಅಭಿಯುಕ್ತರ ವಚನಕ್ಕೆ ಪ್ರತ್ಯಕ್ಷ ಉದಾಹರಣೆಯಾಗಿದ್ದ ಶ್ರೀ ಶ್ರೀಗಳವರು ತಮ್ಮ ಬಾಲ್ಯದಿಂದ 96ನೆಯ ವಯಸ್ಸಿನವರೆಗೂ ವೇದಾಂತ ಗ್ರಂಥ ಪಠನ, ಚಿಂತನ, ಪ್ರವಚನ, ಲೇಖನಗಳಲ್ಲಿ ತತ್ಪರರಾಗಿದ್ದು **ಪುರುಷ ಸರಸ್ವತಿ** ಎಂಬ ಅನ್ವರ್ಥನಾಮವನ್ನು ಹೊಂದಿದ್ದರು. ಅವರ ಕನ್ನಡ, ಇಂಗ್ಲಿಷ್, ಸಂಸ್ಕೃತ ಭಾಷೆಗಳ ಇನ್ನೂರಕ್ಕೂ ಮೀರಿದ ಕೃತಿಗಳು ವೇದಾಂತ ಪ್ರಪಂಚದಲ್ಲಿ ಅವರನ್ನು ಅಮರರನ್ನಾಗಿಸಿವೆ. ಸಂಸ್ಕೃತ ಬಾರದ ಅಧ್ಯಾತ್ಮ ವಿಚಾರದ ಜಿಜ್ಞಾಸುಗಳಿಗೆ ಒಂದು ವರಪ್ರದಾನವಾಗಿದೆ.

ಶಾಲಾ ಉಪಾಧ್ಯಾಯರಾಗಿ ಸೇವೆ ಸಲ್ಲಿಸುವಾಗಲೇ ಅಧ್ಯಾತ್ಮ ಒಲವಿನಿಂದ ಸಂಸ್ಕೃತ ಕಲಿತು ಸಾಧಕರಾದರು. ಆ ಸಮಯದಲ್ಲಿ ಶ್ರೀ ಹೊಸಕೆರೆ ಚಿದಂಬರಯ್ಯನವರ, ಶ್ರೀ ಮಹಾಭಾಗವತರ ಸಂಪರ್ಕ, ಅಧ್ಯಾತ್ಮ ಬಾಂಧವ್ಯ, ಆತ್ಮೀಯತೆ, ಅನಂತರ ಶ್ರೀ ಗೋಂದಾವಳಿ ಮಹಾರಾಜರಲ್ಲಿ ಶ್ರೀರಾಮತಾರಕ ಮಂತ್ರೋಪದೇಶ, ಶೃಂಗೇರಿ ಜಗದ್ಗುರುಗಳು ಶ್ರೀಸಚ್ಚಿದಾನಂದ ಶಿವಾಭಿನವನೃಸಿಂಹ ಭಾರತೀಮಹಾಸ್ವಾಮಿಗಳವರಿಂದ ಭಾಷ್ಯಶಾಂತಿಪಾಠಗಳು ಅವರ ಶ್ರದ್ಧಾಕಾರ್ಯತತ್ಪರತೆಗೆ ಮೆರುಗನ್ನು ನೀಡಿದವು.

1937 ರಲ್ಲಿ ಹೊಳೆನರಸೀಪುರದಲ್ಲಿ ನೆಲೆಸಿದ ಮೇಲೆ ತಮ್ಮನ್ನು ಪೂರ್ಣವಾಗಿ ಶಾಂಕರ ವೇದಾಂತಕ್ಕೆ ಅರ್ಪಿಸಿಕೊಂಡರು. 1948 ರಲ್ಲಿ ಸಂನ್ಯಾಸಸ್ವೀಕಾರ ಮಾಡಿದರು. ಶುದ್ಧತತ್ತ್ವಾನ್ವೇಷಣೆ, ನಿಖರವಾದ ಬರವಣಿಗೆ, ಆಚಾರನಿಷ್ಠೆ ಮತ್ತು ಕಠೋರನಿಯಮಪಾಲನೆಗೆ ಶ್ರೀ ಶ್ರೀ ಗಳವರು ಹೆಸರಾದವರು. ಅವರು ಸ್ಥಾಪಿಸಿರುವ (1920) **ಅಧ್ಯಾತ್ಮಪ್ರಕಾಶ ಕಾರ್ಯಾಲಯವು ಈಗಲೂ ನಿಜವಾದ ಅಧ್ಯಾತ್ಮವಿದ್ಯಾಪ್ರಸಾರ ಕೇಂದ್ರವಾಗಿದೆ.**

ಪೂಜ್ಯರು 1975ನೇ ಆಗಸ್ಟ್ 5 ರಂದು ಬ್ರಹ್ಮೀಭೂತರಾದರು. ಇವರ ಮಹಾಸಮಾಧಿ ಪೀಠವು ಹೊಳೆನರಸೀಪುರದಲ್ಲಿದೆ. ಇಂದಿಗೂ ಚೈತನ್ಯಸ್ವರೂಪಿಗಳಾಗಿ ಕಾರ್ಯಾಲಯದ ಮೂಲ ಶಕ್ತಿಯಾಗಿದ್ದಾರೆ.

**ಬ್ರಹ್ಮನಿಷ್ಠಾಯ ವಿದ್ಮಹೇ ಸಂಯಮೀಂದ್ರಾಯ ಧೀಮಹಿ
ತನ್ನಃ ಸಚ್ಚಿದಾನಂದಃ ಪ್ರಚೋದಯಾತ್ ॥**